# ಮುನ್ನುಡಿ

" ಕಸೂತಿ-ಕಲೆ " ಪುಸ್ತಕಕ್ಕೆ ಮುನ್ನುಡಿ ಎಂದು ಎರಡು ಮಾತು ಬರೆಯಲು ನನಗೆ ಬಹಳ ಸಂತೋಷವಾಗುತ್ತದೆ. ಈ ಪುಸ್ತಕವು ಕನ್ನಡ ಭಾಷೆಯಲ್ಲಿ ಇರದ ಒಂದು ಪುಸ್ತಕದ ಕೊರತೆಯನ್ನು ಹೋಗಲಾಡಿಸುವದಲ್ಲದೆ, ಒಂದು ಉಪಯುಕ್ತ ಕಲೆಯನ್ನು ಉಳಿಸಿಕೊಡುವ ಮಹತ್ವದ ಕಾರ್ಯವನ್ನೂ ಮಾಡಿದೆ

ಕನ್ನಡ ಕಸೂತಿಯು ಬಹಳ ಪ್ರಾಚೀನ ಕಾಲದಿಂದ ನಮ್ಮ ನಾಡಿನಲ್ಲಿ ಬಳಕೆಯಲ್ಲಿದೆ. ಮನೆ-ಮನೆಗಳಲ್ಲಿಯೂ ಕಸೂತಿಯ ಕಲೆಯು ಉಳಿದು ಬೆಳೆದು ಬಂದಿದೆ. ಅದರ ಶಾಸ್ತ್ರೀಯ ವಿವೇಚನೆಯನ್ನು ಈ 'ಕಸೂತಿ-ಕಲೆ' ಪುಸ್ತಕವು ಕೊಡುವದರಿಂದ, ಒಂದು ಕುಶಲ ಕಲೆಯನ್ನು ಮುಂದಿನ ಪೀಳಿಗೆಯವರು ಸುಲಭದಲ್ಲಿ ಅರಿತುಕೊಂಡು ತಮ್ಮ ಬಾಳುವೆಯ ಸುಖಕ್ಕೆ ಸೌಂದರ್ಯದ ಜೋಡು ಕೊಡಬಹುದಾಗಿದೆ.

ಹೊಸದೆಂದರೆ ಯಾರಿಗೂ ಹಿಗ್ಗು. ಯಂತ್ರದ ಕಸೂತಿಯು ಹೊಸದಾದುದರಿಂದ, ಅದನ್ನು ಕಲಿಯಬೇಕು ಎಂಬ ಕುತೂಹಲಕ್ಕೆ ಅನುಗುಣವಾಗಿ ಮೊದಲ ಭಾಗದಲ್ಲಿಯೇ ಯಂತ್ರದ ಕಸೂತಿಯ ವಿಷಯವನ್ನು ಕೊಟ್ಟದ್ದು ಉಚಿತವಾಗಿದೆ. ಸುಲಭವಾಗಿ ತಿಳಿಯುವಂತೆ ಅಲ್ಲಲ್ಲಿ ಚಿತ್ರಗಳನ್ನು ಕೊಟ್ಟು ವಿವರಿಸಿದ್ದರಿಂದ ಹೊಸದಾಗಿ ಕಲಿಯಬೇಕೆನ್ನುವವರಿಗೂ ಕೂಡ, ಅನುಕೂಲವಾಗಿದೆ. 'ರಿಂಗ'ನ್ನು ಯಂತ್ರದಲ್ಲಿ ಕೂಡಿಸುವ ಕ್ರಮದಿಂದ ಮೊದಲುಮಾಡಿ, ಆಯಾ ಕಸೂತಿಗಳಿಗಾಗಿ, ಯಂತ್ರವನ್ನು ಉಪಯೋಗಿಸುವ ರೀತಿಯನ್ನೂ ಅಲ್ಲಲ್ಲಿ ವಿವರಿಸಿರುವದಲ್ಲದೆ, ಯಂತ್ರದ ಸಾಮಾನ್ಯ ಮಾಹಿತಿಯನ್ನೂ, ಅದರ ಬಳಕೆಯ ಕ್ರಮವನ್ನೂ ಸಚಿತ್ರವಾಗಿ ಬಿತ್ತರಿಸಲಾಗಿದೆ. ಇದರಿಂದ ಕೇವಲ ಪುಸ್ತಕದ ಸಹಾಯದಿಂದಲೇ ಮನೆಯಲ್ಲಿ ಯಂತ್ರದ ಕಸೂತಿಯನ್ನು ಕಲಿತುಕೊಳ್ಳಬಹುದಾಗಿದೆ.

ಎರಡನೆಯ ಭಾಗದಲ್ಲಿ ಕೈ-ಕಸೂತಿಯ ವಿಷಯ ವಿವೇಚನೆಯಿದ್ದು ಅದರಲ್ಲಿ ಪರಂಪರೆಯಿಂದ ನಡೆದು ಬಂದ ನಮ್ಮ ಕಸೂತಿಯ ಕಲೆಗೆ, ಶಾಸ್ತ್ರದ ಜೋಡು ಕೊಟ್ಟಿರುವದರಿಂದ ಕಸೂತಿಯ ಕೆಲಸಕ್ಕೆ ಅಂಟಿಕೊಂಡು ಬಂದ ಬೇಸರ, ಅಳಿಸುವಂತಾಗಿದೆ ಎಂದು ಹೇಳಬಹುದು. ಕಸೂತಿಯ ಸರಿಯಾದ ಕ್ರಮ ತಿಳಿಯದಿದ್ದರೆ ಹೇಗಾದರೂ ಮಾಡಿ ಕಸೂತಿ ಮುಗಿಸುವದು ಬಹಳ

ಬೇಸರದ ಕೆಲಸವಾಗುತ್ತದೆ. ಅದೇ ಶಾಸ್ತ್ರೀಯ ಕ್ರಮ ತಿಳಿದಿದ್ದರೆ ಕೆಲಸವು ಸುಲಭವಾಗುವದಲ್ಲದೆ, ಬೇಗನೆ ಮುಗಿದು, ಮನಸ್ಸಿಗೆ ಸಂತೋಷವಾಗುವದು. ಹಿಂದಿನಂತೆ ಕಸೂತಿಯು ಕೇವಲ ಉಡುಪುಗಳಿಗಷ್ಟೇ ಮರ್ಯಾದಿತವಾಗಿರದೆ ಇಂದು ಉಪಯೋಗಿಸಲ್ಪಡುವ ಎಲ್ಲ ಬಟ್ಟೆಗಳ ಮೇಲೂ ಕಸೂತಿ ಮೆರೆಯುತ್ತಿದೆ; ಸಂತಸ ಬೀರುತ್ತಿದೆ !

ಯಂತ್ರದ ಕಸೂತಿಯೇ ಇರಲಿ, ಕೈ-ಕಸೂತಿಯೇ ಇರಲಿ, ಕಾಲಕ್ಕೆ ತಕ್ಕಂತೆ ಮಾರ್ಪಾಟು ಹೊಂದುತ್ತ ಬಂದರೇ ಅದರ ಸೊಬಗು ಹೆಚ್ಚು. ಹಿಂದೆ, ಕಸೂತಿಯು ಕೆಲವೇ ಟೆಬ್ಬಿಗಳಿಂದ ವ್ಯಕ್ತವಾಗುವ ಸಣ್ಣ ವಿಷಯವಾಗಿತ್ತು. ಒಂದು ಬಟ್ಟೆಯ ತುಂಡಿನ ಮೇಲೆ ಕಸೂತಿಯ ಕೆಲವು ಟೆಬ್ಬಿಗಳನ್ನು ಹಚ್ಚಿ ಇಟ್ಟುಕೊಂಡು ಬಿಟ್ಟರೆ ಸಾಕಾಗಿತ್ತು. ಅವೇ ಟೆಬ್ಬಿಗಳಿಂದ ಹೆಚ್ಚು ತಾಳ್ಮೆ ವಹಿಸಿ, ಒಂದು ಉಡುಪಿನ ಮೇಲೆ ಕಸೂತಿ ಬಿಡಿಸುವದೇ ಹೆಚ್ಚಿನ ಕೆಲಸವಾಗಿತ್ತು. ಇಂದು ಟೆಬ್ಬಿಗಳ ಸಂಖ್ಯೆ ಹೆಚ್ಚಾಗಿದೆ. ಬೇರೆ ಬೇರೆ ಜನಾಂಗಗಳ ಕಸೂತಿಯ ಪರಿಚಯ ಬೆಳೆದದ್ದರಿಂದ ಬೇರೆ ಬೇರೆ ಹೆಸರಿನ ಕಸೂತಿಯನ್ನು ತಿಳಿದುಕೊಳ್ಳಲು ಅನುಕೂಲವಾಗಿದೆ. ಬಟ್ಟೆಯ ಬಣ್ಣಕ್ಕನುಸರಿಸಿ, ಕಸೂತಿಯಲ್ಲಿ ಸಹ ಬಣ್ಣಗಳ ಬೆರಕೆಯನ್ನು ಅರಿತುಕೊಳ್ಳಬೇಕಾಗಿದೆ. ವಿವಿಧ ಕಸೂತಿಗಳಿಂದ ಶೋಭೆಗೊಂಡ ಬೆಲೆಯುಳ್ಳ ಬಟ್ಟೆಗಳನ್ನು ಶುಚಿಗೊಳಿಸುವದೂ, ಕಾಯುವದೂ ಒಂದು ಕೆಲಸವೇ ಆಗಿದೆ. ಇದಲ್ಲದಕ್ಕೂ ಕೊನೆಗೆ ಕೊಟ್ಟ ಮಾಹಿತಿಯು ತೀರ ಉಪಯುಕ್ತವಾಗಿದೆ.

ಬಟ್ಟೆಯಿಂದ ಉಡುಪನ್ನು ಮಾಡುವಾಗಲೇ ಅದರಲ್ಲಿ ಉಳಿದ ತುಂಡುಗಳ ಸದುಪಯೋಗವನ್ನು ಹೇಗೆ ಮಾಡಿಕೊಳ್ಳಬಹುದೆಂಬುದನ್ನು ಹೇಳುವಂತೆ, ತುಂಡುಗಳಿಂದ ಹೂಗಳನ್ನು ಮಾಡುವ ವಿಧಾನವೂ ಹೇಳಲ್ಪಟ್ಟಿದೆ; ನೂಲಿನ ಹೆಣಿಕೆಯ ಪ್ರಾಥಮಿಕ ಪಾಠಗಳನ್ನು ಸಚಿತ್ರವಾಗಿ ಕೊಡಲಾಗಿದೆ. ಒಟ್ಟಾರೆ ಈ ಪುಸ್ತಕದಲ್ಲಿ ಸೂಚಿಶಿಲ್ಪಕಲೆಯ, ಕುಶಲ ಕಸೂತಿಯ ವಿಭಾಗದ ಸಮಗ್ರ ವಿಷಯ ಸಂಗ್ರಹವಿರುವದರಿಂದ, ಅದು ತನ್ನ ಉಪಯುಕ್ತತೆಯನ್ನು ಹೆಚ್ಚಿಸಿಕೊಂಡಿದೆ. ಕಸೂತಿಯ ಕಲಾಪ್ರೇಮಿಗಳಿಗೆ ಸಂಗ್ರಾಹ್ಯವೆನಿಸುವಂತೆಯೇ, ಈ ಪುಸ್ತಕವು ಕಲಾಪ್ರೇಮವನ್ನು ಹೆಚ್ಚಿಸುವ ಸಾಧನವಾಗಿಯೂ ತನ್ನ ಅವಶ್ಯಕತೆಯನ್ನು ಸಿದ್ಧಗೊಳಿಸಿದೆ.

ಶಿಕ್ಷಣದ ಕ್ರಮದಲ್ಲಿ ಇತ್ತೀಚೆಗೆ ಉಪಯುಕ್ತ ಕಲೆಗಳ ಸೇರ್ಪಡೆಯೂ ಆಗಿದೆ. ಕಸೂತಿಯು ಕಲೆಯೂ ಅಂಥ ಕಲೆಗಳಲ್ಲಿ ಒಂದು. ಈ ವಿಷಯವನ್ನು ಕಲಿಸುವದಕ್ಕಾಗಿ, ಈ ಪುಸ್ತಕವು ಅತ್ಯಂತ ಉಪಯುಕ್ತವಾಗಿದೆ. ಮೇಲಾಗಿ ಶ್ರೀ. ಸರೋಜನಿ ಮಹಿಷಿಯಂತಹ ಜಾಣಳ ಪಳಗಿದ ಲೆಕ್ಕಣಿಕೆಯಿಂದ ಬಂದ ಈ ಕಲಾವಾಙ್ಮಯವು ಶಿಕ್ಷಣದ ದೃಷ್ಟಿಯಿಂದ ಅಮೌಲ್ಯವಾದದ್ದಾಗಿದೆ. ನನ್ನ ವಿದ್ಯಾರ್ಥಿನಿಯರೋರ್ವಳು ಇಂತಹ ಕೃತಿಯನ್ನು ರಚಿಸಿರುವದು ನನಗೆ ಹೆಮ್ಮೆಯ ವಿಷಯ ! ಅನೇಕ ವರುಷಗಳ ಅನುಭವವಿದ್ದವರಂತೆಯೇ ವಿಷಯವಿವೇಚನೆಯು ಓಘವುಳ್ಳ ಶೈಲಿಯಲ್ಲಿ ಮನಮುಟ್ಟುವಂತೆ ಬಂದಿದೆ. ಇದರಲ್ಲಿ ಹಿರಿಯರಿಗೆ ಶಾಸ್ತ್ರೀಯ ವಿಷಯದ ಜ್ಞಾನ ಕಂಡುಬಂದರೆ, ಚಿಕ್ಕವರಿಗೆ ಕಥನಕಲೆಯ ತಂತ್ರವನ್ನನುಸರಿಸಿದ ಕಸೂತಿ-ಕಲೆಯ ಸುಲಭ ಶಿಕ್ಷಣವಿದೆ. ಪರದೇಶಗಳಲ್ಲಿ ಪದವಿಯ ಮಟ್ಟದ ಶಿಕ್ಷಣವೂ ಈ ವಿಷಯದಲ್ಲಿರುವಾಗ ನಮ್ಮಲ್ಲಿಯೂ ಬೇಡವೇ ?

'ಕನ್ನಡ ಕಸೂತಿ' ಎಂಬುದಾಗಿ ಹೆಸರುವಾಸಿಯಾದ ಕಲೆಯಲ್ಲಿ ಪಳಗಿದ ಕೈಯ ಕೌಶಲ್ಯದೊಂದಿಗೆ ಅದನ್ನು ಲಿಪಿಬದ್ಧಗೊಳಿಸಿ ತಿಳಿಸಿಕೊಡುವಲ್ಲಿಯೂ ನಮ್ಮವರು ಕುಶಲರಿದ್ದಾರೆಂಬುದಕ್ಕೆ ಈ ಪುಸ್ತಕವು ಸಾಕ್ಷಿಯಾಗಿದೆ. ಕಲಾಪ್ರೇಮಿಗಳು, ವಿಶೇಷವಾಗಿ ಕನ್ನಡಿತಿಯರು ಈ ಲೇಖಿಕೆಯರಿಗೆ ಉಪಕೃತರಾಗಿರಬೇಕಾಗಿದೆ. ಬಡವರಿಗೂ ಬಲ್ಲಿದರಿಗೂ ಕೂಡಿಯೇ ಉಪಯುಕ್ತವಿರುವ ಕಸೂತಿ-ಕಲೆಯ ಕಡೆಗೆ ಕನ್ನಡಿಗರ ಲಕ್ಷ್ಯವನ್ನು ಹೊರಳಿಸಹಚ್ಚುವ ಈ ಪುಸ್ತಕಕ್ಕೆ ಹೆಚ್ಚಿನ ಪ್ರೋತ್ಸಾಹನೆ ದೊರೆಯಲಿ, ಲೇಖಿಕೆಯರಿಂದ ಕನ್ನಡ ಸಾಹಿತ್ಯ ಭಾಂಡಾರವು ತುಂಬಲಿ, ಎಂದು ಹಾರೈಸುತ್ತೇನೆ.

ಧಾರವಾಡ
೧೨-೭-೧೯೫೩

ಪಿ. ಎ. ಭಾಸ್ಕರ
ಬಿ. ಎ. ಬಿ. ಟಿ.
ಲೇಡಿ ಸುಪರಿಂಟೆಂಡೆಂಟ
ಹೆಣ್ಣುಮಕ್ಕಳ ಸರಕಾರೀ ಟ್ರೇನಿಂಗ ಕಾಲೇಜ
ಧಾರವಾಡ

# ನನ್ನ ಮಾತು

ಕಾರ್ಯದ ಸುಲಭ ಸಿದ್ಧಿಗಾಗಿ ಸಾಧನೆಗಳು ಅವಶ್ಯ, ನಿಜ. ಅಂತಹ ಸಾಧನದ ನಿರ್ಮಾಣವನ್ನು ಕುರಿತ ಯೋಚನೆ ತಲೆಯಲ್ಲಿದ್ದರೂ, ಕೃತಿಯಲ್ಲಿಳಿಯುವುದು ದುಸ್ತರ ! ಅದರಂತೆ, ಕರ್ನಾಟಕ ಹೊಲಿಗೆಯ ವಿದ್ಯಾಲಯದಲ್ಲಿ ಕಸೂತಿ-ಕಲೆಯ ಪಾಠಗಳನ್ನು ಕಲಿಯುತ್ತಿದ್ದಾಗ, ಈ ವಿಷಯವನ್ನು ಕುರಿತ ಕನ್ನಡ ಪುಸ್ತಕವೊಂದು ಅವಶ್ಯ, ಎಂಬ ವಿಚಾರ ತಲೆದೋರಿತು. ಆ ವಿಚಾರ ಇಂದು ಕೃತಿಯಲ್ಲಿ ಮೂಡಬೇಕಾದರೆ ಇಷ್ಟೊಂದು ಸಮಯ !

ಪುಸ್ತಕವನ್ನು ರಚಿಸಲು ಪ್ರೋತ್ಸಾಹವನ್ನಿತ್ತ ಶ್ರೀ. ಹಳಪೇಟೆಯವರಿಗೂ, ಕಸೂತಿ ವಿಷಯಕ ಲೇಖನಗಳನ್ನು ಕಾಲಕಾಲಕ್ಕೆ ಮುದ್ರಿಸಿ ಬೆಳಕಿಗೆ ತಂದ 'ಜಯಂತಿ'ಯ ಸಂಪಾದಕರಿಗೂ, ನಾನು ಋಣಿಯಾಗಿದ್ದೇನೆ. ಅದರಂತೆ, ಈ ಕಲೆಗೆ ಸಂಬಂಧಪಟ್ಟ ಲೇಖಗಳನ್ನು ಪ್ರಸಿದ್ಧಿಸಿದ ಇನ್ನುಳಿದ ಸಂಪಾದಕ ಸಂಪಾದಕಿಯರಿಗೂ, ವಿಷಯದ ಸ್ಪಷ್ಟ ವಿವೇಚನೆಗಾಗಿ ಸುಂದರವಾದ ಚಿತ್ರಗಳನ್ನು ಕಾಲಕಾಲಕ್ಕೆ ಒದಗಿಸಿಕೊಟ್ಟ ಕಲಾವಿದರಿಗೂ, ಅಲ್ಲಲ್ಲಿ ಸಲಹೆ ಸೂಚನೆಗಳನ್ನಿತ್ತು ಸಹಕರಿಸಿದ ನನ್ನ ಕಲಾ-ನಿಪುಣ ಸೋದರಿಯರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸದಿರಲಾರೆ.

ತೀರ ಅಲ್ಪ ಸಮಯದ ಸೂಚನೆಯಲ್ಲಿಯೇ ಅತ್ಯಂತ ಸುಂದರವಾದ ಮುನ್ನುಡಿಯನ್ನು ಬರೆದುಕೊಟ್ಟ ನನ್ನ ಗುರುಗಳಾದ ಶ್ರೀಮತಿ ಪಿ. ಎ. ಭಾಸ್ಕರ ಲೇಡಿ ಸುಪರಿಂಟೆಂಡೆಂಟ, ಹೆಣ್ಣುಮಕ್ಕಳ ಸರಕಾರೀ ಟ್ರೇನಿಂಗ ಕಾಲೇಜ, ಧಾರವಾಡ ಇವರಿಗೆ ನನ್ನ ಅನಂತ ವಂದನೆಗಳು.

ಅಲ್ಲದೆ ಈ ಕಲೆಯಲ್ಲಿ ಆಸಕ್ತಿವಹಿಸುವ ನಮ್ಮ ನಾಡಿನ ಅಕ್ಕ-ತಂಗಿಯರಿಗೆಲ್ಲ ನಾನು ಋಣಿ !

ಧಾರವಾಡ

೧೪-೭-೧೯೫೪ **ಸರೋಜನಿ ಮಹಿಷಿ**

# ಪ್ರಕಾಶಕರ ಮಾತು

ಯಾವುದೇ ಭಾರತೀಯ ಭಾಷೆಯಲ್ಲಿ ಕಸೂತಿಯ ಪುಸ್ತಕವು, ಇಷ್ಟೊಂದು ಆಧುನಿಕ ವಿಷಯಗಳ ವಿವೇಚನೆಯುಳ್ಳದ್ದಿಲ್ಲದಿರುವಾಗ ಕನ್ನಡದಲ್ಲಿಯೇ ಮೊಟ್ಟಮೊದಲು ಈ 'ಕಸೂತಿ-ಕಲೆ' ಪುಸ್ತಕವನ್ನು ಪ್ರಕಟಿಸುವ ಸಂದರ್ಭ ಒದಗಿ ಬಂದುದು ನಮಗೆ ಹೆಮ್ಮೆಯ ಮಾತು.

ಸೂಚಿಶಿಲ್ಪದ ಎಲ್ಲ ಅಂಗಗಳ ವಿಷಯವಾಗಿ ಕನ್ನಡದಲ್ಲಿ ಪುಸ್ತಕಗಳನ್ನು ಪ್ರಕಟಿಸಬೇಕೆನ್ನುವ ನಮ್ಮ ಹವ್ಯಾಸಕ್ಕೆ ಪ್ರೋತ್ಸಾಹನೆ ಎಂಬಂತೆ ಶ್ರೀಮತಿ ಸರೋಜಿನಿ ಮಹಿಷಿ ಎಂ. ಎ ಅವರು ತುಂಬ ಪರಿಶ್ರಮವಹಿಸಿ ಈ ಪುಸ್ತಕವನ್ನು ಬರೆದುಕೊಟ್ಟು ಉಪಕಾರಮಾಡಿದ್ದಾರೆ. ಅವರಿಗೆ ನಾವು ಚಿರ ಋಣಿಗಳು.

ಕಲಾಪ್ರೇಮಿ ಕನ್ನಡ ಜನತೆ ನಮ್ಮ ಈ ಉಪಕ್ರಮವನ್ನು ಪ್ರೋತ್ಸಾಹಿಸುವದೆಂಬುದಕ್ಕೆ ನಮಗೆ ಸಂಶಯವೇ ಇಲ್ಲ. ಕಲೆಯ ತೌರೂರೆಂದು ಹೇಳಿಸಿಕೊಂಡ ಕನ್ನಡನಾಡಿನ ಸೋದರಿಯರು, ಸೌಂದರ್ಯ ಹಾಗೂ ಉಪಯುಕ್ತತೆಗಳೆರಡನ್ನೂ ಸಾಧಿಸಬಲ್ಲ ಈ ಪುಸ್ತಕವನ್ನು ಸಂತೋಷದಿಂದ ಸ್ವಾಗತಿಸುವರೆಂದು ಬಲವಾಗಿ ನಂಬಿದ್ದೇವೆ.

ಈ "ಕಸೂತಿ-ಕಲೆ" ಪುಸ್ತಕದ ಪ್ರಕಟನೆಯ ಕಾರ್ಯದಲ್ಲಿ ಸಹಕರಿಸಿ, ಸಹಾಯವನ್ನಿತ್ತ ಎಲ್ಲ ಸಹೃದಯರಿಗೂ ನಮ್ಮ ಧನ್ಯವಾದಗಳು.

# ಪರಿವಿಡಿ

# ಅರ್ಪಣೆ

ಗೃಹ-ಕೈಗಾರಿಕೆಗಳ ಪ್ರಗತಿಯಲ್ಲಿ ಆಸ್ಥೆ ವಹಿಸುತ್ತಿರುವ

ಕ. ಎ. ಬೋರ್ಡಿನ ಚೇರಮನ್ನರಾದ

**ಡಾ. ಕಬ್ಬೂರ ನಾರಾಯಣರಾಯರಿಗೂ**

ಅವರ ಪತ್ನಿ

**ಶ್ರೀಮತಿ ಕಮಲಾಬಾಯಿಯವರಿಗೂ**

ಆದರಪೂರ್ವಕವಾಗಿ

ಅರ್ಪಿಸಿದ್ದೇನೆ.

**—ಸರೋಜಿನಿ ಮಹಿಷಿ**

# ಕಸೂತಿಯ ಕಲಾಭಿರುಚಿ

## ೧

ಭಾರತೀಯರ ಮನೋಭೂಮಿಕೆ ಸೌಂದರ್ಯದೆಡೆಗೊಲಿದದ್ದು ನಿಸರ್ಗ ಸೌಂದರ್ಯ—ಅದರ ಪಡಿನೆಳಲು—ಅವರ ಆರಾಧನೆಯ ಪಾತ್ರ. ಭಾರತೀಯರು ಇಷ್ಟುಮಟ್ಟಿಗೆ ಅಧ್ಯಾತ್ಮವಾದಿಗಳೂ ಸೌಂದರ್ಯೋಪಾಸಕರೂ ಆಗಲಿಕ್ಕೆ ಭೌಗೋಲಿಕ ಕಾರಣಗಳೂ ತುಂಬುನೆರವನ್ನು ನೀಡಿವೆ. ನಿಸರ್ಗ ಸೌಂದರ್ಯದ ಗಂಧವನ್ನೇ ಅರಿಯದ ಅರಬಸ್ತಾನದ ಜನರು ಮೂರ್ತಿಭೇದಕರಾದರೆ, ಕ್ಷಣಕ್ಷಣಕ್ಕೂ ದೇವನ ಪ್ರತಿಬಿಂಬವನ್ನು ನಿಸರ್ಗ ಸೌಂದರ್ಯದಲ್ಲಿ ಕಾಣುವ ಕಾಶ್ಮೀರಿಗಳು ಮೂರ್ತಿಪೂಜಕರಾದರು. ದಿನಕ್ಕೊಂದು ಸಲವೂ ಸೂರ್ಯನ ದರ್ಶನ, ಕಷ್ಟಸಾಧ್ಯವಾದ ದೇಶದಲ್ಲಿ ಸೌಂದರ್ಯಾರಾಧನೆ ಬೇರೂರುವುದು ಸಾಧ್ಯವೇ ?

ಉಪನಿಷತ್ತಿನ ಋಷಿಗಳು ಸೌಂದರ್ಯಾರಾಧಕರು. ಅಪಾರವಾದ ಸಮುದ್ರವನ್ನೂ, ಅನಂತವಾದ ನೀಲಾಕಾಶವನ್ನೂ ಕಂಡ ಋಷಿಗಳು, ಅವುಗಳನ್ನು ನಿರ್ಮಿಸಿದ ಶಕ್ತಿ ಅವಕ್ಕಿಂತ ದೊಡ್ಡದಾಗಿರಬೇಕೆಂದು ಊಹಿಸಿದರು; ಅದನ್ನೇ 'ಅತ್ಯತಿಷ್ಠತ್ ದಶಾಂಗುಲಮ್' ಎಂದು ವರ್ಣಿಸಿದರು. ಇನ್ನೂ ಮುಂದೆ ಹೋಗಿ ಸರ್ವವ್ಯಾಪಿಯಾದ ಆ ಶಕ್ತಿಯನ್ನು 'ಅಣೋರಣೀಯಾನ್ ಮಹತೋ ಮಹೀಯಾನ್' ಎಂದು ಹೇಳಿದರು. ಎಲ್ಲಿ ಚೆಲುವೋ ಅಲ್ಲಿ ದೇವರು. 'ಚೆಲುವೇ ದೇವರು, ಒಲುಮೆಯೇ ಪೂಜೆ' ಎಂಬ ಭಾವನೆ ಅಂದಿನಿಂದಲೇ ಬೆಳೆದು ಬಂದಿದೆ.

ಚೆಲುವಿನ ದರ್ಶನವನ್ನು ಸರ್ವರಿಗೂ ಸಾಧ್ಯವಾಗುವಂತೆ ಮಾಡಲು ಪೂಜೆಯಲ್ಲಿ ಆಸ್ಥೆಯನ್ನು ಹುಟ್ಟಿಸಲು, ಕಲಾವಿದನು ಭೂಮಿಗಿಳಿದ ದೇವದೂತ. ಶಿಲಾಶಿಲ್ಪಿಯಿರಲಿ, ಸೂಚಿಶಿಲ್ಪಿಯಿರಲಿ, ಕವಿಯಿರಲಿ, ಚಿತ್ರಕಾರನಿರಲಿ, ಗಾಯಕನಿರಲಿ, ಭೂಮಿಗಿಳಿದ—ಇಳಿಯಬಹುದಾದ ದೇವಶಕ್ತಿಯ—

ಸೌಂದರ್ಯದ—ದರ್ಶನವನ್ನು ತಾವು ಪಡೆದು, ಅನುಭವಿಸಿ, ತಮ್ಮದನ್ನಾಗಿ ಮಾಡಿಕೊಂಡು, ತಮ್ಮ ಮನೋಬುದ್ಧಿಯ ಐಸಿರಿಯಿಂದ ಕೂಡಿದ ಅವರ ಯಥಾರ್ಥ ದರ್ಶನವನ್ನು, ಅರಿಯದವರಿಗೆ ಮಾಡಿಕೊಡುವುದನ್ನೇ ಮುಖ್ಯವಾದ ಗುರಿಯಾಗಿಟ್ಟುಕೊಂಡಿರುತ್ತಾರೆ. ಶಿಲಾಶಿಲ್ಪಿಯು ಬಿರುಸಾದ ಕಲ್ಲಿನಲ್ಲಿ ಮೂರ್ತಿಯನ್ನು ಕೊರೆದು, ಜೀವವನ್ನೇ ತುಂಬಿ ನಿಲ್ಲಿಸಬಹುದು. ಸೂಚಿಶಿಲ್ಪಿಯು ಕುಸುರಿಯ ಕೆಲಸದ ಕೌಶಲ್ಯದಿಂದ, ಒರಟು ಬಟ್ಟೆಯಲ್ಲಿಯೂ ನಯನಾಜೂಕಗಳಿಂದ ತುಂಬಿದ, ಬಣ್ಣಬಣ್ಣದ ಮೆರುಗಿನ ಗುಲಾಬಿಯ ಹೂವನ್ನೂ ಮಕರಂದವನ್ನು ಹೀರುವ ತುಂಬಿಯನ್ನೂ ಮೂಡಿಸಬಹುದು. ಕವಿಯು ಅರುಣೋದಯದ ಸಮಯದಲ್ಲಿ ಹುಲ್ಲಮೇಲೆ ಹರಡಿರುವ ಮಂಜಿನ ಹನಿಗಳನ್ನೇ ತೆಗೆದು, ಭೂದೇವಿಯ ಕೊರಲಸರದ ಮುತ್ತುಗಳೆಂದು ವರ್ಣಿಸಬಹುದು. ಚಿತ್ರಕಾರನು ತನ್ನ ಕುಂಚದ ಒಂದು ರೇಖೆಯಿಂದ ವಿಶ್ವವನ್ನೇ ಮೂಡಿಸಿಬಿಡಬಹುದು. ಗಾಯಕನು ತನ್ನ ಸ್ವರಸಮ್ಮೇಲನದಿಂದ ನಾದಮಂದಿರವನ್ನೇ ನಿರ್ಮಿಸಿ, ರಸಿಕರನ್ನು ಸೆರೆಹಿಡಿಯಬಹುದು. ಸಾಧನ ಭಿನ್ನವಾದರೂ, ಕ್ಷೇತ್ರ ಭಿನ್ನವಾದರೂ, ಕಲಾವಿದರೆಲ್ಲರ ಗುರಿ ಒಂದೇ.

ಉದ್ದೇಶ ಸಾಧನೆಗೆ ಕಲಾವಿದನಲ್ಲಿ, ಕಲೆಯ ಸಾಧನೆಯಲ್ಲಿ ಒಂದಾಗಿ ಬೆರೆಯುವ ಕಲೆ ಬೇಕು. ಅವನ ತನ್ಮಯತೆ ಎಷ್ಟೆಷ್ಟು ಗಾಢವೋ ಅಷ್ಟಷ್ಟು ಕೃತಿ ಸುಂದರ. ತನ್ಮಯತೆ ಶಿಥಿಲವಾದರೆ, ಆಚೆಯ ಗೆರೆ ಈಚೆಗೆ ಸರಿದರೆ, ಬೇರೊಂದೇ ಚಿತ್ರ ಮೂಡಿಬಿಡಬಹುದು. ಸೂಚಿಶಿಲ್ಪಿಯೊರ್ವನು, ಹೆಣೆದ ಗುಲಾಬಿಯ ಹೂವೊಂದನ್ನು ಮಗುವು ಕಿತ್ತುಕೊಳ್ಳಲು ಆಶೆಪಟ್ಟರೆ, ಯಾವ ಕಲಾವಿದ ತಾನೆ ತನ್ನ ಕಲಾಶಕ್ತಿಯನ್ನು ಮೆಚ್ಚಲಾರ ?

ಮನುಷ್ಯನು ಕಾಡುಸ್ಥಿತಿಯಲ್ಲಿ ಅಲೆದಾಡುವುದನ್ನು ಬಿಟ್ಟು, ಜನಾಂಗವನ್ನು ರಚಿಸಿ ನಾಗರಿಕನಾಗಿ ನೆಲೆಸತೊಡಗಿದಂದಿನಿಂದ, ಅವನ ಆಹಾರ, ವೇಷ, ಭೂಷಣ, ಅಭಿರುಚಿಗಳೆಲ್ಲದರಲ್ಲೂ ವ್ಯತ್ಯಾಸವಾಗುತ್ತಲೇ ಇದೆ. ಅನ್ವೇಷಣೆ ನಡೆದೇ ಇದೆ. ಅರ್ಥಾತ್ ಮಾನವಜೀವನವೇ ಅನ್ವೇಷಣ ಪರಂಪರೆ. ಬರೀ ಕರಿಯ ಮಣ್ಣಿನ ಪಾತ್ರೆಗಳನ್ನು ನೋಡಿ ಬೇಸತ್ತ ದ್ರಾವಿಡರು, ಅವುಗಳ ಮೇಲೆ ಚಿತ್ರದಲ್ಲಿ ಎಲೆ-ಹೂಗಳನ್ನು ಕೊರೆದಂತೆ !

ವೇಷದ ವಿಚಾರದಲ್ಲಂತೂ ಆಧುನಿಕ ಜನಾಂಗವು, ಅಸಹನೀಯವಾದ ಸ್ಥಿತಿಯನ್ನೇ ಮುಟ್ಟಿದೆ. ಯಾವನೊಬ್ಬ ಮನುಷ್ಯನ ವೇಷದಿಂದ ಅವನ ಕುಲ, ಜಾತಿ, ಉದ್ಯೋಗಗಳನ್ನೆಲ್ಲ ಗುರುತಿಸುವುದು ಪ್ರಚಾರದಲ್ಲಿ ಬಂದಿದೆ. ಕಲಾನೈಪುಣ್ಯದಿಂದ ಒಟ್ಟೆಗಳನ್ನು ಸಿದ್ಧಗೊಳಿಸಿ, ಆಯಾ ವ್ಯಕ್ತಿಗಳ ಸೌಂದರ್ಯವನ್ನು ಹೆಚ್ಚಿಸುವುದರಲ್ಲಿ, ಸೂಚಿಶಿಲ್ಪಿಯು ತೋರುವ ಜಾಣ್ಮೆಗಂತೂ ಅಳತೆಯೇ ಇಲ್ಲ. ಮನುಷ್ಯ ತಾನು ತಾನಾಗಿರದೆ ಸೂಚಿಶಿಲ್ಪಿಯಿಂದ ನಿರ್ಮಿತನಾಗುತ್ತಿದ್ದಾನೆ. ಸೂಚಿಶಿಲ್ಪಿಯ ಕೌಶಲ್ಯ ಎಷ್ಟೆಷ್ಟು ಯಾವ ಬಟ್ಟೆಯಲ್ಲಿ ಹೆಚ್ಚೋ, ಅಷ್ಟು ಆ ಬಟ್ಟೆ ಪೀರನಿಗಾಗಿ—ಸಿರಿವಂತನಿಗಾಗಿ--ಸಿದ್ಧವಾದದ್ದು. ಬಟ್ಟೆಯ ತುಂಡುಗಳನ್ನು ಹೊಂದಿಸಿ, ಮೈಯಳತೆಗೆ ಸರಿಯಾಗುವಂತೆ ಹೊಲಿಯುವುದಂತೂ ಸರಿಯೆ. ಆ ಹೊಲಿದ ಒಟ್ಟೆಗಳಲ್ಲಿಯೂ ಬಗೆ-ಬಗೆಯ ಬಣ್ಣಗಳಲ್ಲಿ ನಿಸರ್ಗ ಸೌಂದರ್ಯವನ್ನು, ಕಲಾಕೌಶಲ್ಯವನ್ನು ಅರಳಿಸಿ, ಸೂಕ್ಷ್ಮ ನಿರೀಕ್ಷಣೆಯ ಶಕ್ತಿಯನ್ನೂ, ಕಲಾನೈಪುಣ್ಯವನ್ನೂ, ಕಲೆಗಾಗಿ ಇರುವ ಪ್ರೋತ್ಸಾಹವನ್ನೂ ಆದರವನ್ನೂ ಒಟ್ಟೆಗೇ ವ್ಯಕ್ತವಾಡಬಹುದು. ಇದನ್ನೇ **'ಕಸೂತಿಯ ಕಲೆ'** ಎಂದು ಹೇಳುವರು.

ಈ ಕಸೂತಿಯ ಕಲೆ ಮಾನವ ಜನಾಂಗದಲ್ಲೇ ಹಬ್ಬಿಕೊಂಡಿದೆ. ಆದರೆ ಜಗತ್ತಿನ ವಿವಿಧ ಭಾಗಗಳ ಜನರ ಅಭಿರುಚಿ, ಅಲ್ಲಿಯ ನೈಸರ್ಗಿಕ ವಾತಾವರಣಕ್ಕೂ ಧಾರ್ಮಿಕ ವಿಚಾರಗಳಿಗೂ ಹೊಂದಿಕೊಂಡು ಬೆಳೆಯುವುದರಿಂದ ಸ್ಥಳಸ್ಥಳಕ್ಕೂ ಭಿನ್ನವಾಗಿದೆ. ಶಕ್ಯವಿದ್ದಷ್ಟು ಕಡಿಮೆ ವೇಳೆಯಲ್ಲಿ—ಯಂತ್ರದ ಸಹಾಯದಿಂದಾದರೂ ಸರಿ—ವಿಶೇಷ ಆಡಂಬರವಿಲ್ಲದೆ ಇಂಗ್ಲಿಷ್ ಕಸೂತಿ ವ್ಯಕ್ತವಾಗುತ್ತಿದೆ. ಆದರೆ ಅದೇ ಭಾರತದ ಕಸೂತಿ, ವಿವಿಧ ಬಣ್ಣಗಳ ಮೆರುಗಿನಿಂದ, ಬೆಳ್ಳಿ ಬಂಗಾರದ ಕಡ್ಡಿಗಳಿಂದ ಕೂಡಿದ ಕುಸುರಿನ ಕೆಲಸದಿಂದ ವೈಭವಪೂರ್ಣವಾಗಿ ಹೊರಹೊಮ್ಮುತ್ತದೆ. ಭಾರತದಲ್ಲಿಯೂ, ಕಸೂತಿಯ ಕಲೆ ಸ್ಥಳದಿಂದ ಸ್ಥಳಕ್ಕೆ ಮೊದಲು ಭಿನ್ನ ಭಿನ್ನವಾಗಿಯೇ ಇತ್ತು. ಉತ್ತರ ಭಾಗವು ದಕ್ಷಿಣಕ್ಕಿಂತ ಕಲೆಗೆ ಹೆಚ್ಚಿನ ಆಸ್ಪದವನ್ನು ಕೊಟ್ಟಿದೆ. ಇದಕ್ಕೆ ಭೌಗೋಲಿಕ ಕಾರಣಗಳೂ ಒಂದು ರೀತಿಯಲ್ಲಿ ಸಹಾಯಕಾರಿಯಾಗಿವೆಯೆನ್ನಬಹುದು. ಕಸೂತಿಯ ಕಲಾಸಾಧನೆಯನ್ನು ಮನೆಯಲ್ಲೇ ಕುಳಿತು ಮಾಡಬಹುದಾದ್ದರಿಂದ, ವೇಳೆ ಹೆಚ್ಚಾಗಿ ದೊರೆಯುವ ಅನೇಕ ಮಹಿಳೆಯರು

ಇದನ್ನು ವೃತ್ತಿಯನ್ನಾಗಿಯೇ ಅವಲಂಬಿಸಿದ್ದಾರೆ. ಕಸೂತಿಯು ಕಲೆ ಕೇವಲ ಮಹಿಳೆಯರ ಸೊತ್ತಲ್ಲ; ಕಲೆ ನಯವಾದುದಾದ್ದರಿಂದ ಮತ್ತು ಮನೆಯಲ್ಲೇ ಕುಳಿತು ಮಾಡಬಹುದಾದ್ದರಿಂದ, ಮಹಿಳೆಯರಲ್ಲಿಯೆ ಹೆಚ್ಚಾಗಿ ಕಸೂತಿಯು ಕಲೆ ಆಶ್ರಯವನ್ನು ಪಡೆದಿದೆ. ಇದರ ಕಡೆಗೆ ಲಕ್ಷ್ಯವನ್ನು ಪೂರಯಿಸಿದ ಪುರುಷರ ಸಂಖ್ಯೆಯೂ ಕಡಿಮೆಯಿಲ್ಲ. ದಿಲ್ಲೀ-ಮುಲ್ತಾನಗಳ ಕಡೆ ಪ್ರಚಾರ ದಲ್ಲಿರುವ, ಲೋಹ-ಧಾತುಗಳ ಎಳೆಗಳಿಂದ ನಿರ್ಮಿತವಾಗುವ **" ಝಿುದೋ೯ಶಿ " ಮತ್ತು " ಶಿಲ್ಮಾಶಿತಾರಾ "** ಎಂಬ ಕಸೂತಿಗಳನ್ನು, ಹೆಚ್ಚಾಗಿ ಪುರುಷರೇ ಇದುವರೆಗೆ ಮಾಡುತ್ತ ಬಂದಿದ್ದಾರೆ.

ಉತ್ತರದಲ್ಲಿ ಮಣಿಪುರದ ಸ್ತ್ರೀಯರು ಮಾಡುವ ರೇಶ್ಮೆ ಹೊಲಿಗೆಯ ಕಸೂತಿ ನೋಡತಕ್ಕಂತಹದು. ಸದ್ಯ ಪ್ರಚಾರದಲ್ಲಿರುವ ಕಲಾಬತ್ತಿನ ಕಸೂತಿ ಇತ್ತೀಚಿನದು. ಬನಾರಸ, ಪುಣೆ, ಸುರತ, ಅಹಮ್ಮದಾಬಾದ, ಬೆಂಗಳೂರ ಗಳಲ್ಲಿ ಇದರ ಪ್ರಚಾರ ಹೆಚ್ಚಾಗಿವೆ. ಬನಾರಸದ ಕಲಾಬತ್ತಿನ ಕಸೂತಿಯ ಸೀರೆಗಳಂತೂ ಭಾರತೀಯ ಮಹಿಳೆಯರ ಮನವನ್ನೇ ಸೂರೆಗೊಂಡಿವೆ.

ಕಚ್ಛ-ಕಾಠೇವಾಡಗಳು ಸರಪಳಿಯ ಹೊಲಿಗೆಯ ಕಸೂತಿಗೆ ಪ್ರಸಿದ್ಧ ವಾಗಿವೆ. ನಾನಾ ಬಗೆಯ ಹೂ, ಬಳ್ಳಿ, ಪಕ್ಷಿಗಳನ್ನು ಮೂಡಿಸಲು ಅವರಿಗೆ ಇದೇ ಸಾಧನ. ನಯವಾಗಿ ಮಾಡಿದ ಯಾವ ಕೆಲಸಕ್ಕಾದರೂ ಅದರದೇ ಆದ ವಿಶಿಷ್ಟ ಸೌಂದರ್ಯವೊಂದು ಅದಕ್ಕಿರುವುದು. ಹಾಗೆಯೇ ಇದಕ್ಕೂ ಕೂಡ.

ಇನ್ನು ಕನ್ನಡ ಜನಾಂಗದಲ್ಲಿ, ನಾಗರಿಕರಲ್ಲಿ ಕಸೂತಿಯ ಕಲೆ ಒಂದು ಮಟ್ಟಕ್ಕಿದ್ದರೆ, ಕೆಳವರ್ಗದ ಸ್ತ್ರೀಯರಲ್ಲಿ ಅದು ಹೆಚ್ಚು ಆಕರ್ಷಕವಾಗಿದೆ. ಸಣ್ಣ ಸಣ್ಣ ಕನ್ನಡಿಯ ತುಂಡುಗಳನ್ನು ಸೇರಿಸಿ, ಸರಪಳಿ ಹೊಲಿಗೆಯಿಂದ ಹೊಲಿಯುವುದು, ಎಂದಿನಿಂದಲೂ ಕನ್ನಡ ನಾಡಿನ ಲಂಬಾಣೀ ಸ್ತ್ರೀಯರಲ್ಲಿ ಕಂಡುಬರುತ್ತಿದೆ. ಎಷ್ಟೊಂದು ನಯವಾದ ನೂಲಿನ ಕರಿಯ ಚಂದ್ರಕಾಳಿಯ ಸೀರೆಯಲ್ಲೂ, ಎಳೆಗಳನ್ನು ಎಣಿಸಿ ಹೆಣೆಯುವ ಕಸೂತಿಯು ಬಹಳ ಹಿಂದಿ ನಿಂದಲೇ ಕನ್ನಡ ನಾಡಿನಲ್ಲಿ ಪ್ರಚಾರದಲ್ಲಿದೆ. ಯಂತ್ರದ ಸಹಾಯದಿಂದ ಅಥವಾ ಅಲ್ಪವೇಳೆಯಲ್ಲಿ— ಕೊಂಚ ಒರಟಾಗಿ ಕಂಡರೂ ಸರಿ— ಸಿದ್ಧವಾ ಗುವ ಕಸೂತಿಯ ಮುಂದೆ, ಎಳೆಗಳನ್ನು ಎಣಿಸಿ ಹಾಕುವ ಕನ್ನಡ ಕಸೂತಿ

ಒಂದು ಕಾಲದಲ್ಲಿ ಹಿಂದೆ ಬಿದ್ದಿತ್ತು; ಆದರೆ ಅದಕ್ಕೆ ಪ್ರೋತ್ಸಾಹ ಮತ್ತೆ ದೊರೆತಿದೆ. ಅದರ ನಿಜವಾದ ಬೆಲೆಯ ಅರಿವಾಗಿದೆ. ಕನ್ನಡ ನಾಡಿನಲ್ಲಿ ಕೇವಲ ಈ ಕಸೂತಿಯ ಕಲಾಸಾಧನೆಗಾಗಿ ತಮ್ಮ ದೃಷ್ಟಿಯನ್ನೂ ಜೀವನ ವನ್ನೂ ಮೀಸಲಾಗಿರಿಸಿದ ಮಹಿಳೆಯರಿದ್ದರಿಂದ ಬಳಿಕ, ಕನ್ನಡ ನಾಡಿನ ಕಲಾಭಿರುಚಿಯನ್ನು ಕುರಿತು ಬೇರೇನು ಹೇಳುವುದು ?

ಸದ್ಯದ ಯಾಂತ್ರಿಕಯುಗದಲ್ಲಿ ಮಾನವ ಜೀವನದಲ್ಲಿಯೇ ಯಂತ್ರವು ಪ್ರಮುಖ ಭಾಗವನ್ನು ಆಕ್ರಮಿಸಿದೆ; ಹಾಗೇ ಕಸೂತಿಯ ಕಲೆಯ ಕ್ಷೇತ್ರ ದಲ್ಲೂ ಯಂತ್ರವು ಪ್ರವೇಶಿಸಿ, ಕೈಯ ಕಲೆಯನ್ನು ಹಿಂದೂಡಲು ಯತ್ನಿಸಿದೆ. ಯಂತ್ರದಲ್ಲಿ ವೇಳೆ ಏನೋ ಕಡಿಮೆ ಹತ್ತುತ್ತದೆ; ಆದರೆ ಕೈಯ ಕಸೂತಿಯ ಅಂದವೇ ಅದಕ್ಕೇ ಒರಟಾಗಿ ದೂರದಿಂದ ನಯವಾಗಿರುವಂತೆ ತೋರುವ ಯಂತ್ರ ಸಿದ್ಧ ಕಸೂತಿಗೂ, ಕೈಲಿ ಹೆಣೆದ ಕಲೆಗೂ ತುಂಬಾ ಅಂತರವಿದೆ. ಈ ಕೈಕಸೂತಿಯ ನಯವನ್ನೂ ಸೌಂದರ್ಯವನ್ನೂ ಅರಿತ ಎಷ್ಟೋ ಜನ ಸಿರಿ ವಂತರು, ಕರ್ನಾಟಕದ ಈ ಕಲೆಗೆ ಇನ್ನೂ ಪ್ರೋತ್ಸಾಹವನ್ನು ಕೊಡುತ್ತಿ ದ್ದುದನ್ನು ಕಾಣಬಹುದು. ಆದರೆ ಬರೀ ಪ್ರೋತ್ಸಾಹನೆ ದೊರೆತರೆ ಸಾಲದು. ನಾಡಿನ ಜನರು ಕಲೆಯನ್ನು ಮೈಗೂಡಿಸಿಕೊಂಡು ಸ್ವತಃ ಕಲಾವಿದರಾಗಲು ಯತ್ನಿಸಬೇಕು.

ಇರಲಿ, ಕೈ ಕಸೂತಿಯ ಕಲೆಯ ಸೊಬಗನ್ನು ಹೆಣೆದು ಸವಿಯಲು ಅವಕಾಶವಿಲ್ಲದಾಗ, ಯಂತ್ರಸಿದ್ಧ ಕಸೂತಿಯನ್ನೂ ಸ್ವಾಗತಿಸೋಣ; ಹೆಚ್ಚಿನ ಪ್ರಮಾಣದಲ್ಲಿ ಅದನ್ನು ಸಿದ್ಧಗೊಳಿಸಿ, ಬಲ್ಲಿದರೂ ಬಡವರೂ ಒಟ್ಟಿಗೇ ಅದರ ಸೌಂದರ್ಯವನ್ನು ಸವಿಯಲೆಂದು ಆಶಿಸೋಣ.

ಯಂತ್ರದ ಸಹಾಯದಿಂದ ಕಸೂತಿ ಸಿದ್ಧವಾಗುತ್ತಿರುವಲ್ಲಿ, ಕೈ ಕಸೂತಿ ಯಲ್ಲಿ ಹೇಗೆ ಬಗೆಬಗೆಯ ಹೆಣಿಕೆಗಳಿಂದ, ನಯವಾಗಿ ಸೌಂದರ್ಯವನ್ನರಳಿ ಸಲು ಸಾಧ್ಯವೋ, ಹಾಗೆಯೇ ತರತರದ ಹೆಣಿಕೆಗಳಿಂದ, ಅದೇ ತುಂಬಿ ಕೊಂಡ ಗುಲಾಬಿಯ ಮೊಗ್ಗನ್ನೋ ಅರಳಿದ ಹೂವನ್ನೋ, ಬಣ್ಣಬಣ್ಣದ ಮೆರುಗಿನಿಂದ ಮೂಡಿಸಿ, ಸಜೀವತೆಯನ್ನೇ ತುಂಬಿ ಬಿಡಬಹುದು. ಯಂತ್ರ ದಲ್ಲಿ ಕಸೂತಿಯನ್ನು ಹೆಣೆಯಲು, ಅಭ್ಯಾಸ ಬಲ ಹೆಚ್ಚಾಗಿರಬೇಕು.

ಯಂತ್ರದ ಚಕ್ರದ ತೋಲವನ್ನು ಸರಿಯಾಗಿರಿಸುವ ಶಕ್ತಿ ಬೇಕು. ಇದೆಲ್ಲ ಕ್ರಮೇಣ ಸಾಧಿಸುತ್ತದೆ. ಇದರ ವಿಚಾರ ವಿಸ್ತಾರವಾಗಿ ಮುಂದೆ ಮಾಡೋಣ.

ಸದ್ಯ ಯಂತ್ರದ ಸಹಾಯದಿಂದಾದರೂ ಸರಿ—ವೇಳೆಯು ದೊರೆಯುದಿದ್ದ ಪಕ್ಷಕ್ಕೆ—ಮನೆಯನ್ನು ಅಂದವಾಗಿರುವಂತೆ ಕಸೂತಿ ಕಲೆಯಿಂದ ಸುಶೋಭಿತಗೊಳಿಸಬಹುದಲ್ಲ! ಸೋದರಿ ಹೆಣೆದ ಗಿಳಿಗಳ ಬಳಗ ಬಾಗಿಲ ಮೇಲೇರಿ ಕುಳಿತು, ಕಸೂತಿಯ ಮೇಲ್ಮೆಯನ್ನೂ, ಸೋದರಿಯ ಸೌಂದರ್ಯ ಸಮೀಕ್ಷಕ ಶಕ್ತಿಯನ್ನೂ ಒಟ್ಟಿಗೆ ಮೆರೆಯಬಹುದಲ್ಲ! ಕಲಾವಿದನು ಎಲ್ಲೆಲ್ಲಿಯೂ ಇಚ್ಛಿಸಿದುದನ್ನು ಸೃಷ್ಟಿಸುವ ಶಕ್ತಿಯುಳ್ಳವನು. ಕಮಲಗಳು ಸರೋವರದಲ್ಲಷ್ಟೇ ಸಿಕ್ಕುವುವೇ? ಇಲ್ಲ, ನೀರಿಲ್ಲದಲ್ಲಿಯೂ ಕಮಲಗಳು ಹರಡಿಕೊಂಡುಬಿಟ್ಟಿವೆ. ನೆಲದ ಮೇಲೆ! ಸೋದರಿ ಅರಳಿಸಿದ ಆ ಕಮಲಗಳನ್ನು ನೋಡುತ್ತಲೇ ಆವ ರಸಿಕನ ಹೃದಯ ತಾನೇ ಅರಳದು? ಬೇಸರುಗೊಂಡಾಗ ಒಂದುಕ್ಷಣ ವಿರಾಮಕುರ್ಚಿಯಲ್ಲಿ ಒರಗಿ ಕುಳಿತುಕೊಳ್ಳಬೇಕೆಂದರೆ ಅದೇನು ರಮ್ಯ ದರ್ಶನ ಎದುರು! ಉಜ್ಜಿದ ರತ್ನದಂತೆ ಪ್ರಕಾಶಮಾನನಾದ ರವಿ ಅಸ್ತಂಗತನಾಗುತ್ತಿದ್ದಾನೆ. ವೃಕ್ಷಗಳು ಭೋರ್ಗರೆಯುವ ಸಮುದ್ರದ ತೀರದಲ್ಲಿ, ನಿರಾಶೆಯಿಂದ ಕಪ್ಪು ಮುಖ ಮಾಡಿ ನಿಂತಿವೆ! ಹಕ್ಕಿಗಳೆಲ್ಲ ಗೂಡು ಸೇರುತ್ತಿವೆ! ಏನು? ಸಮುದ್ರದ ತೀರವೆಲ್ಲಿಂದ ಬಂತು? ಆ....ಕಸೂತಿಯೇ ಇದು! ಎಲ್ಲೆಡೆಯಲ್ಲಿಯೂ ಅರಳಿ ನಿಂತ ನಿಸರ್ಗಸೌಂದರ್ಯದ ಪಡಿನೆಳಲು ಪರಿಪೂರ್ಣವಾದ ಕಸೂತಿಯ ಕಲಾಕೃತಿಯ ದರ್ಶನ ಎಷ್ಟು ರಮ್ಯ! ಬಣ್ಣಬಣ್ಣದ ಮೆರುಗಿನ ರೇಶಿಮೆಗಳ ಸಮ್ಮಿಲನದಿಂದ ಆವ ಭಾವವನ್ನು ಬೇಕಾದರೂ ಮೂಡಿಸಬಹುದೇ? ಇಚ್ಛಿಸಿದ ವಸ್ತು ಕೈಗೆ ನಿಲುಕದ್ದಕ್ಕೆ ದುಃಖದಿಂದ ಅಳುಮೋರೆ ಮಾಡಿರುವ ಮಗು ಯಾರ ಸಹಾನುಭೂತಿಯನ್ನು ಸೆಳೆಯದು? ನೋಡನೋಡುತ್ತಲೇ ಇದು ಕಸೂತಿಯೆಂಬ ನೆನಪೂ ಮಾಯವಾಗುವುದಲ್ಲ! ಭಾರತಮಾತೆಯ ಪುತ್ರರನ್ನು ನಗುಮುಖದಿಂದಲೇ ಹರಸುತ್ತಿರುವ ಬಾಪೂಜಿಯ ಚಿತ್ರ ಎಷ್ಟು ರಮ್ಯ! ಈ ಭಾವಗಳನ್ನೂ ರೇಶಿಮೆಯಲ್ಲಿ ಯಂತ್ರದ ಸಹಾಯದಿಂದ ಅರಳಿಸಬಹುದೇ! ಮನುಷ್ಯ ವ್ಯಕ್ತಿಗಳ ಸೂಕ್ಷ್ಮ ಭಾವನೆಗಳನ್ನೂ ರೇಶಿಮೆಯಲ್ಲಿ ಮೂಡಿಸಬಹುದೆಂದ ಬಳಿಕ, ಕಸೂತಿಯ ಕಲೆ ಸಾಧಿಸಿದ ಮೇಲ್ಮೆಯ ಅರಿವಾಗದೇ? ಕಸೂತಿಯ ಕಲೆಯಲ್ಲಿ ಇದೇ ಕೊನೆಯ ಮೆಟ್ಟಿಲೇ? ಅಥವಾ ಇನ್ನೂ ಮುನ್ನಡಿಯಿಡುತ್ತಿದೆಯೆ?

ಇದೀಗ ನಾಗರಿಕರಾಗಿ ನೆಲೆಗೊಂಡವರ ಸ್ವಾಸ್ಥ್ಯಸೂಚಕ, ತನ್ನ ಸೌಂದರ್ಯಾಭಿರುಚಿ, ಕಲಾಪ್ರಾವೀಣ್ಯ, ವಾತ್ಸಲ್ಯ, ಪ್ರೇಮ ಇವುಗಳನ್ನೆಲ್ಲ ಒಟ್ಟಿಗೇ ಸೇರಿಸಿ, ಸೋದರಿ ಕಸೂತಿಯನ್ನು ಹೆಣೆಯುತ್ತಿದ್ದಾಳೆ. ಅದರಿಂದಲೇ ಅದಕ್ಕೆ ಸಜೀವತೆ. ತಂಗಿ ಅಣ್ಣನಿಗಾಗಿ, ಕಸೂತಿಯಿಂದ ಸುಶೋಭಿತವಾದ ವಸ್ತ್ರವೊಂದನ್ನು ಸಿದ್ಧಗೊಳಿಸಿದರೆ, ನೂಲಿನ ವಸ್ತ್ರವೆಂದಾಗಲಿ, ಬಣ್ಣಬಣ್ಣದ ರೇಶ್ಮೆಯ ಮೆರುಗಿನಿಂದ ಕೂಡಿದ್ದೆಂದಾಗಲಿ ಅದಕ್ಕೆ ಹೆಚ್ಚಿನ ಬೆಲೆಯಿದೆಯೇ ? ಇಲ್ಲ, ತಂಗಿ ಅಣ್ಣನಿಗಾಗಿ ಪ್ರೇಮಾದರಪೂರ್ವಕ ಹೆಣೆದ ಕಸೂತಿ ಅದರಲ್ಲಿದೆಯಲ್ಲವೆ ? ಇದೇ ಅದರ ಹೆಚ್ಚಿನ ಬೆಲೆ.

೨

ಕಸೂತಿಯ ರಚನೆಯಲ್ಲಿ ಇಬ್ಬಗೆಯ ಆನಂದವಿದೆ. ಹೆಣೆಯುವವರಲ್ಲಿ ತೋರುವ ಸಮಾಧಾನ; ನೋಡುವ ರಸಿಕರಲ್ಲಿ ತೋರುವ ಸಂತೃಪ್ತಿ. ಈ ಆಂತರಿಕ ಆನಂದದ ಮೂಲಕ ಕಸೂತಿ ಹೊರಬರಲು ನಿರ್ಬಂಧ ಬೇಕಾಗಿಲ್ಲ. ಆದರೆ ಕಸೂತಿಯ ಪ್ರಚಾರ, ಅಭಿರುಚಿ ತೀರ ಹೆಚ್ಚಾದಾಗ, ಅದೊಂದು ನಿರ್ಬಂಧವಾಗಿಯೇ ಪರಿಣಮಿಸಿಬಿಡುತ್ತದೆ. ಕನ್ನಡನಾಡಿನಲ್ಲಿ ಅಚ್ಚ ಕರಿಯ ಅಥವಾ ಬಿಳಿಯ ಬಣ್ಣದ ಸೀರೆ-ಕುಪ್ಪುಸಗಳ ಮೇಲೆ ಕಸೂತಿ ತೆಗೆಯುವುದಾಗಲಿ, ಗುಜರಾಥದಲ್ಲಿ ಮದುಮಗಳ ಬಟ್ಟೆಯ ಮೇಲೆ ಕಸೂತಿ ಇರಲೇ ಬೇಕೆಂಬುದಾಗಲಿ ಕೆಲಮಟ್ಟಿಗೆ ನಿರ್ಬಂಧವಾಗಿಯೇ ಪರಿಣಮಿಸಿರುವುದು. ಇದೇ ಕಾರಣದಿಂದಲೇ ಕಲೆಯ ಕ್ಷೇತ್ರದಲ್ಲಿಯ ಈ ಆಸ್ಥೆ ಧಾರ್ಮಿಕ ಕ್ಷೇತ್ರದಲ್ಲಿ ಸೇರಿ ನಿರ್ಬಂಧವಾಗಿಬಿಟ್ಟಿದೆ. ನಿರ್ಬಂಧವಿರಲಿ, ಇಲ್ಲದಿರಲಿ ! ನಿಸರ್ಗದಿಂದ ಹೊರಬಂದು, ನಿಸರ್ಗಮಧ್ಯದಲ್ಲಿ ಬೆಳೆದ ಮಾನವನ ಒಲವು ನಿಸರ್ಗದೆಡೆಗೇ. ಎಂತಹ ಪ್ರಕ್ಷುಬ್ಧ ವಾತಾವರಣದಲ್ಲಿದ್ದ ಮನುಷ್ಯನೂ, ನಿಸರ್ಗ ಸೌಂದರ್ಯದಲ್ಲಿ ಮೈಮರೆತು, ಕ್ಷಣಕಾಲವಾದರೂ ಕಷ್ಟಗಳನ್ನು ಬದಿಗಿಡಬಲ್ಲ. ಕಲಾಕೌಶಲ್ಯದಿಂದ ಕೂಡಿದ ಕೃತಿಯ ನೋಟದಿಂದಲೇ ಬೆರಗಾಗಿ ಲೀನನಾಗಬಲ್ಲ ರೋಗಿಯು ತನ್ನ ತಲೆಗೆ ಆಸರೆಯಾಗಿರುವ ಬಟ್ಟೆಯಲ್ಲಿಯ ಕಸೂತಿಯನ್ನು ಗಂಟೆ-ಗಂಟೆಗಳ ಕಾಲ ನೋಡುತ್ತ ಕುಳಿತುಕೊಳ್ಳುವುದರ ಅರ್ಥವಾದರೂ ಏನು ? ಕಸೂತಿಯ ಕಲೆ ಮನಃಶಾಂತಿಯ ಸಾಧನ,

ಸ್ವಾಸ್ಥ್ಯದ ಸೂಚಕ, ನೆಮ್ಮದಿಯ ಕುರುಹು. ಕಾರಹುಣ್ಣಿಮೆಯ ದಿನ ಬಣ್ಣ ಬಣ್ಣದ ಕಸೂತಿಯ ಒಟ್ಟೆಯನ್ನು ಹೊದ್ದು, ವೃಷಭೇಂದ್ರ ಮೆರೆಯುತ್ತ ಬಂದರೆ ಯಾರಿಗೆ ತಾನೆ ನೆಮ್ಮದಿಯಿಲ್ಲ ?

೩

ಮಾನವಜೀವನ ಸಂಶೋಧನೆಗೆ ತುಂಬ ಅವಕಾಶವನ್ನು ಕಲ್ಪಿಸಿಕೊಂಡಿದೆ. ದಿನದಿನಕ್ಕೆ ಅವನ ಆವಶ್ಯಕತೆ ಹೆಚ್ಚುತ್ತಹೋದಂತೆ, ಸಂಶೋಧನೆ ಹೆಚ್ಚುತ್ತ ಹೋಗುತ್ತದೆ. ಶಿಲಾಯುಗದ ಮನುಷ್ಯ ಮಾಂಸವನ್ನು ತಿಂದು, ಪಶುಚರ್ಮವನ್ನು ಹೊದ್ದು, ಕಲ್ಲುಗುಹೆಗಳಲ್ಲಿ ವಾಸವಾಗಿದ್ದರೆ, ಮುಂದಿನ ಯುಗದ ಮನುಷ್ಯ ಕ್ರಮೇಣ ಇವೆಲ್ಲವುಗಳಲ್ಲಿ ಸುಧಾರಣೆಯನ್ನುಂಟು ಮಾಡಿದ. ಮಾನವಜೀವನದಲ್ಲಿ ವೇಷ ಮಹತ್ತ್ವದ ಸ್ಥಾನವನ್ನು ಆಕ್ರಮಿಸುತ್ತ ಬಂದಿತು. ಸೂಜಿಯ ಸ್ಥಾನ ಅಂದಿನಿಂದ ಇಂದಿನವರೆಗೆ ಹೆಚ್ಚುತ್ತಲೇ ಬಂದಿದೆ. ಉಡುಪು ಕೈಹೊಲಿಗೆಯಿಂದಲೇ ಸಿದ್ಧವಾಗುತ್ತಿರುವಾಗ, ಒಟ್ಟೆಯ ಉಪಯೋಗ ಮಿತವಾಗಿರಬಹುದು. ಆದರೆ ಮುದ್ರಣಾಲಯಗಳು ಬಳಕೆಯಲ್ಲಿ ಬಂದಮೇಲೆ, ಪುಸ್ತಕಗಳು ಅಸಂಖ್ಯವಾಗಿ ಹೊರಬರುತ್ತಿರುವಂತೆ— ನೂರುವರುಷಗಳು ಗತಿಸಿರಬಹುದು.— ಹೊಲಿಗೆಯ ಯಂತ್ರ ಬಳಕೆಯಲ್ಲಿ ಬಂದಂದಿನಿಂದ ಒಟ್ಟೆಗಳ ಸಂಖ್ಯೆ ಹೆಚ್ಚುತ್ತಲೇ ಇದೆ ಇತ್ತೀಚೆಗೆ ಹೊಲಿಗೆಯ ಯಂತ್ರ ವಿದ್ಯುತ್ತಿನ ಸಹಾಯದಿಂದ ನಡೆಯುವುದನ್ನೂ ನಾವು ಕಾಣಬಹುದು. ಹೊಲಿಗೆಯ ಯಂತ್ರ ಕೇವಲ ಒಟ್ಟೆಯ ತುಂಡುಗಳನ್ನು ಜೋಡಿಸುವ ಕಾರ್ಯವೊಂದನ್ನೇ ಅಲ್ಲ; ಉಡುಪಿನ ಮೂಲಕ ಮಾನವನ ಸೌಂದರ್ಯವರ್ಧನೆಗೆ ಆವಶ್ಯವಿದ್ದ ಎಲ್ಲ ಕಾರ್ಯಗಳನ್ನೂ ಮಾಡುತ್ತಿದೆ. ಎಷ್ಟೋ ಹೊತ್ತಿನವರೆಗೆ ಕುಳಿತು, ಕೈಯಿಂದ ಹೆಣೆದು ಮುಗಿಸುವ ಹೂವೊಂದನ್ನು ಯಂತ್ರವು ಅರೆನಿಮಿಷದಲ್ಲಿ ನಿರ್ಮಿಸಿಕೊಡುತ್ತಲಿದೆ. ಅನೇಕ ವಿಧವಾದ ಹೊಲಿಗೆಗಳಿಂದ, ಹೂ, ಬಳ್ಳಿ, ಪಕ್ಷಿಗಳನ್ನು ತೀರ ಸಹಜವಾಗಿ ತೋರುವಂತೆ ಬಣ್ಣಬಣ್ಣಗಳಿಂದ ಯಂತ್ರದಲ್ಲಿ ಮೂಡಿಸಿಬಿಡಬಹುದು ! ಕಸೂತಿಯ ಕಲೆ ಮೂರು ಬಗೆಯ ಜ್ಞಾನಕ್ಕೆ ಅವಕಾಶವನ್ನು ಕೊಟ್ಟಿದೆ: ಡ್ರಾಯಿಂಗ್, ಪೇಂಟಿಂಗ್, ಮತ್ತು ಕಸೂತಿ; ಇವೆಲ್ಲವುಗಳ ಜ್ಞಾನ ಅದರಲ್ಲಿ ಸಮಾವೇಶವಾಗುತ್ತದೆ. ಇವುಗಳ ಜ್ಞಾನ ತಕ್ಕಮಟ್ಟಿಗಿದ್ದ ಮನುಷ್ಯನೂ, ಯಂತ್ರದಲ್ಲಿ

ವಿಧವಿಧದ ಹೊಲಿಗೆಯಲ್ಲಿ ಹೂಬಳ್ಳಿಗಳನ್ನು ತುಂಬಿದರೆ, ವಿಧವಿಧದ ಸೌಂದರ್ಯವೇ ಅರಳುವುದನ್ನು ರಸಿಕರು ಕಾಣಬಹುದು. ಮುಂದೆ ವ್ಯಕ್ತಿಗಳು ಕೂಡ ಸಜೀವವಾಗಿರುವಂತೆ ಬಣ್ಣಬಣ್ಣಗಳಿಂದ ಯಂತ್ರದ ಸಹಾಯದಿಂದ ಮೂಡಿಸಬಹುದು. ವೇಳೆ ಕೊಂಚವಿದ್ದರೂ ಸೌಂದರ್ಯ ಸಮೀಕ್ಷಣ ಶಕ್ತಿಯನ್ನು ಮೂಡಿಸುವುದಕ್ಕೆ ಯಂತ್ರವು ಅವಕಾಶವನ್ನಿತ್ತು ಉಪಕಾರವನ್ನೇ ಮಾಡಿದೆ. ಯಂತ್ರದ ಸಹಾಯವಿಲ್ಲದೆ ಮಾನವಜೀವನ ಈ ಯುಗದಲ್ಲಿ ಯಂತೂ ಸಾಗದು. ಕೈಲಿ ಕಸೂತಿಯನ್ನೂ ಅರಳಿಸಬಹುದಾದರೂ, ಯಂತ್ರ ಸಹಾಯದಿಂದ ಅಲ್ಪ ವೇಳೆಯಲ್ಲಿಯೇ ಈ ಕೆಲಸವನ್ನು ಸಾಧಿಸಬಹುದು, ಸುಶೋಭಿತವಾಗಿ ಮಾಡಬಹುದು. ಅದಕ್ಕಾಗಿ ಮಾಡಬೇಕಾದ ಅಭ್ಯಾಸವನ್ನು ಶಕ್ಯವಿದ್ದಷ್ಟು ತಿಳಿಯಾಗಿ ತಿಳಿಸುವ ಸಾಹಸ ಇಲ್ಲಿ ಮಾಡಿದೆ. ಯಂತ್ರದಲ್ಲಿ ಕಸೂತಿಯನ್ನು ತಯಾರಿಸುವಾಗ, ಅಭ್ಯಾಸವಿಲ್ಲದ್ದರಿಂದ, ಮೊದಮೊದಲು ಬೇಸರು ನಿರಾಶೆಗಳುಂಟಾಗುವ ಸಂಭವವೂ ಇದೆ. ಆದರೆ ಧೈರ್ಯದಿಂದ ಮುಂದೆ ಸಾಗಿದಲ್ಲಿ, ಅರೆನಿಮಿಷದಲ್ಲಿಯೇ ಪೂರ್ಣ ಅರಳಿದ ಕಸೂತಿಯನ್ನು ನೋಡುವ ಭಾಗ್ಯ ನಮ್ಮದಾಗಿರುತ್ತದೆ !



# ಕಸೂತಿಯ ಪೂರ್ವ ಸಿದ್ಧತೆ



ಯಂತ್ರದ ಸಹಾಯದಿಂದ ಕಸೂತಿಯನ್ನೂ ಹೆಣೆಯಬಹುದೆಂದು ಹಿಂದೆ ಹೇಳಿದೆಯಲ್ಲವೆ ? ಬರೀ ಕಸೂತಿಯನ್ನಷ್ಟೇ ಏಕೆ, ವಿವಿಧ ಬಣ್ಣಗಳ ರೇಶಿಮೆಯಿಂದ ಪ್ರತಿ ಸೃಷ್ಟಿಸೌಂದರ್ಯವನ್ನೇ ನಿರ್ಮಿಸಲು ಸಾಧ್ಯವಿದೆ— ಅದೂ ತೀರ ಅಲ್ಪ ವೇಳೆಯಲ್ಲಿ. ಹೀಗೆಂದ ಮಾತ್ರಕ್ಕೆ "ನನಗೂ ಆ ಕಲೆ ಬಂದಿದ್ದರೆ ?'' ಎಂದು ನಿರಾಶೆಯನ್ನೇಕೆ ತೋರುವಿ ತಂಗೀ ? ಅದು ಪ್ರಯತ್ನಕ್ಕೆ ಮೀರಿದ್ದೇ ? ಪ್ರಯತ್ನಪಟ್ಟರೆ ನೀನೂ ಆ ಕಲೆಯನ್ನು ಕೆಲವೇ ದಿನಗಳಲ್ಲಿ ಕಲಿತುಕೊಳ್ಳಬಹುದು. ಅಭ್ಯಾಸವಿಲ್ಲದ್ದಕ್ಕೆ ಮೊದಲೇನೋ ಕಠಿಣವಾಗಿ ತೋರಬಹುದು. ಆದರೆ ಧೈರ್ಯದಿಂದ ಮುಂದೆ ಸಾಗುವೆಯಾದರೆ, ಅಪೂರ್ವ ಆನಂದ ನಿನಗಾಗಿ ಕಾದಿದೆ ನೋಡು ! ಬಟ್ಟೆಯ ಮೇಲೆ ಗುಲಾಬಿಯ ಹೂವೊಂದು ಅರಳುತ್ತಿದ್ದರೆ, ಅದನ್ನು ನೋಡಿ ನಿನ್ನ ಮುಖವೂ ಅರಳುವುದು—ತಂಗೀ, ಈ ಕಲೆಯನ್ನು ನೀನೂ ತಿಳಿದುಕೊ, ನಿನ್ನ

ಸೋದರಿಯರಿಗೂ ತಿಳಿಸು. ಕಸೂತಿಯು ಕಲೆ ಸೋದರಿಯರ ಜೀವನದಲ್ಲಿಯೇ ಪ್ರಮುಖ ಸ್ಥಾನವನ್ನು ವಹಿಸಿದಂತಹ ಕಲೆ ! ಅದರ ವಿಷಯಕ್ಕೆ ವಿವರವಾಗಿ ನಿನಗೆ ಒಂದೊಂದನ್ನೇ ತಿಳಿಸುವೆ

ಹೊಲಿಗೆಯ ಯಂತ್ರ, ಕಸೂತಿಯ ಸಾಮಾನುಗಳು (ಅವುಗಳನ್ನು ಒಂದೊಂದಾಗಿ ಹೇಳುವೆ) ಇವೇ ಮೊದಲಾದವುಗಳನ್ನು ಜತನವಾಗಿಡಲು, ಮನೆಯಲ್ಲಿ ಪ್ರತ್ಯೇಕವಾದ— ಸಾಕಷ್ಟು ಗಾಳಿ-ಬೆಳಕುಗಳುಳ್ಳ-ಸ್ಥಳವೊಂದಿದ್ದರೆ ಒಳಿತಾಗುವುದು. ಎಂದರೆ ಯಾವ ವಸ್ತುವನ್ನು ಆ ಸ್ಥಳದಲ್ಲಿಟ್ಟು ಹೋದರೂ ಅತ್ತಿತ್ತ ಕದಲುವುದಿಲ್ಲ. ಇಲ್ಲದಿದ್ದರೆ, ಕಸೂತಿಯನ್ನು ಅರ್ಧಕ್ಕೇ ನಿಲ್ಲಿಸಿಬಿಟ್ಟು ಬಂದಾಗ, ಮಗುವೊಂದು ಸೂಜಿಯನ್ನೋ ರೇಶಿಮೆಯ ಎಳೆಯನ್ನೋ ಎತ್ತಿಕೊಂಡು ಹೋದರೆ, ತುಂಬ ಬೇಸರವಾಗಿ ಬಿಡಬಹುದು. ಅದಕ್ಕಾಗಿ ಬೇರೊಂದು ಸ್ಥಳವೇ ಇದ್ದರೆ ಒಳ್ಳೆಯದಲ್ಲವೆ ?

**ಯಂತ್ರದ ಪರಿಚಯ**

ಕಸೂತಿಯನ್ನು ಹೆಣೆಯಲಿಚ್ಛಿಸುವವರಿಗೆ ಮೊದಲನೆಯದಾಗಿ, ಹೊಲಿಗೆಯ ಯಂತ್ರವನ್ನು ಬೇಕಾದ ಹಾಗೆ—ವೇಗವಾಗಿ ಅಥವಾ ಮೆಲ್ಲಗೆ—ತಿರುಗಿಸಿ, ಅದನ್ನು ಸಮತೂಕದಲ್ಲಿಡಲು ಬರಬೇಕು. ಯಂತ್ರದ ತೋಲವನ್ನು ಹಿಡಿಯಲು ಸರಿಯಾದ ರೂಢಿ ಬೇಕು. ಈ ರೂಢಿಯಿರದಿದ್ದರೆ ಸೂಜಿ ಮುರಿಯುವುದಂತೂ ಸರಿಯೇ ಸರಿ; ಅದರೊಡನೆ ಕಸೂತಿಯ ಹೆಣಿಕೆಯೂ ಮೇರೆದಪ್ಪಿ, ಅಲ್ಲೊಂದು ಇಲ್ಲೊಂದು ಬಿದ್ದುಬಿಡಬಹುದು. ಅದಕ್ಕಾಗಿ ಮೊದಲು ಯಂತ್ರವನ್ನು ತಿರುಗಿಸುವ ಅಭ್ಯಾಸ ಮಾಡಬೇಕಾಗುವುದು. ಎರಡು ಕೈಗಳೂ ಬೇರೆ ಬೇರೆ ಕೆಲಸವನ್ನು ಮಾಡುವಾಗ ತೂಕ ತಪ್ಪುವುದು ಸಹಜವೇ. ದಿನದ ವ್ಯವಹಾರದಲ್ಲೂ ಕೂಡ, ರೊಟ್ಟಿಯನ್ನು ಎತ್ತಿ ಹಂಚಿನ ಮೇಲೆ ಹಾಕುವಾಗ, ಒಂದು ಕೈ ತೂಕ ತಪ್ಪಿದರೆ, ಹಂಚಿನ ಮೇಲೆ ರೊಟ್ಟಿ ಸರಿಯಾಗಿ ಹರಹಿಕೊಳ್ಳುವುದೇ ? ಇಲ್ಲ. ಒಂದೊಂದು ಹರಿದು ಹೋಗುವುದೂ ಅನುಭವಕ್ಕೆ ಬರಬಹುದು. ಅದೇ ಪ್ರಾರಂಭ ಮಾಡುವವರಿಗೆ ಈ ಅನುಭವವೇನೂ ಹೊಸದಲ್ಲ; ಆದರೆ ಅದೇ— ಕೈ ತೂಕ ಹಿಡಿಯಲು ಬಂದರೆ ಹೀಗಾಗದು. ಯಂತ್ರದಲ್ಲಿ ಕಸೂತಿಯನ್ನು ಹೆಣೆಯುವಾಗಲೂ, ಅಭ್ಯಾಸವಿಲ್ಲದಿದ್ದರೆ ಹೀಗೇ ಆಗುವ ಸಂಭವವಿದೆ. ಅದಕ್ಕಾಗಿ ಕೆಲದಿನ ಬರೀ ಯಂತ್ರ

ಕಸೂತಿಗಾಗಿ ಸಿದ್ಧಗೊಳಿಸಿದ ಯಂತ್ರದ ಮುಖ್ಯಭಾಗ




ಶೂನ್ಯದಲ್ಲಿ ಸೌಂದರ್ಯ ನಿರ್ಮಿಸುವ ಮಾದರಿಯೊಂದು

ವನ್ನು ಸಾವಕಾಶವಾಗಿ, ಸಮತೂಕವಾಗಿಡಲು ಪ್ರಯತ್ನಿಸಬೇಕು. ಬಳಿಕ ಬಟ್ಟೆಯನ್ನಿಟ್ಟು ಪ್ರಯತ್ನ ಮಾಡಿದರೆ, ಅಡ್ಡಿಯಿಲ್ಲ. ಮೊದಮೊದಲು ತೂಕ ತಪ್ಪಿ, ಯಂತ್ರದ ಚಕ್ರ ವಿರುದ್ಧ ದಿಕ್ಕಿನಿಂದ ತಿರುಗಿ, ಸೂಜಿಗಳು ಒಂದರ ಮೇಲೊಂದು ಮುರಿದು ಬೇಸರವಾಗುವ ಸಂಭವವೂ ಇದೆ. ಆದರೆ ರೂಢಿ ಯಾದ ಬಳಿಕ ಮಾತ್ರ ಹೀಗಾಗದು.

ಯಂತ್ರದಲ್ಲಿ ಕಸೂತಿಯನ್ನು ಹೆಣೆಯುವಾಗ, ಹೊಲಿಗೆಯ ಯಂತ್ರ ವನ್ನೇ ( ಸಿಂಗರ, ಪಾಫ್, ಉಷಾ— ಯಾವ ಕಂಪನಿಯದಿದ್ದರೂ ಸರಿ ) ಉಪಯೋಗಿಸಬಹುದಾದರೂ, ಅದು ಇದ್ದಕ್ಕಿದ್ದಂತೆ ( ಎಂದರೆ ಅರಿವೆಗಳನ್ನು ಹೊಲಿಯುವಾಗ ಇದ್ದ ಸ್ಥಿತಿಯಲ್ಲಿಯೇ ) ಉಪಯೋಗಿಸಲು ಬಾರದು. ಸೂಜಿಯ ಕೆಳಕ್ಕೆ ನೇರವಾಗಿ, ಯಂತ್ರದ ಹಲ್ಲುಗಳಿರುವುವಲ್ಲವೇ ? ಹೊಲಿಯುವಾಗ ಬಟ್ಟೆಯನ್ನು ಮುಂದೆ ಸರಿಸಲು ಅದರ ಉಪಯೋಗವಾಗು ತ್ತದೆ. ಆದರೆ ಕಸೂತಿಯನ್ನು ಹೆಣೆಯುವಾಗ, ಬಟ್ಟೆಯನ್ನು ಒಂದೇ ಗೆರೆಯಲ್ಲಿ ಮುಂದೆ ಸರಿಸುವುದಿರುವುದಿಲ್ಲ; ಹೆಣೆಯುವ ಕಸೂತಿಯನ್ನು ಅನುಸರಿಸಿ ಹಿಂದು ಮುಂದೆ ಸರಿಸಾಡುವುದಿರುತ್ತದೆ. ಅದಕ್ಕಾಗಿ ಆ ಹಲ್ಲುಗಳನ್ನು ಮುಚ್ಚಿ, ಆ ಸ್ಥಳವನ್ನು ಸಮಪಾತಳಿಯಲ್ಲಿಡುವುದು ಅವಶ್ಯ. ಇದಕ್ಕಾಗಿ ಬೇರೊಂದು ಬಿಲ್ಲೆಯಂತಹ ತಗಡಿನ ಜೋಡಣೆ (ಪ್ಲೇಟ) ಯೇ ಇದೆ. ಇದು ಪ್ರತಿಯೊಂದು ಕಂಪನಿಯ ಯಂತ್ರಕ್ಕೂ ಒಂದೇ ಆಗಿರದೇ, ಬೇರೆ ಬೇರೆ ಆಗಿರುತ್ತದೆ. “ ಸಿಂಗರ್ ” ಯಂತ್ರದ ಪ್ಲೇಟು ಆ ಕಂಪನಿಯ ಯಂತ್ರಗಳಿಗೆ ಮಾತ್ರ ಸರಿಯಾಗುವುದು. ಈ ಪ್ಲೇಟನ್ನು ಕೂಡಿಸುವಾಗ,— ಬಟ್ಟೆಯನ್ನು ಹೊಲಿಯುವಾಗ, ಅದನ್ನು ಒತ್ತಿಹಿಡಿಯುವ ಒತ್ತಡ (Presswebar) (ಕಸೂತಿಯನ್ನು ಹೆಣೆಯುವಾಗ, ಬಟ್ಟೆ ಸುಲಭವಾಗಿ ಸರಿದಾಡಬೇಕಾದ್ದರಿಂದ ಇದರ ಉಪಯೋಗವಿಲ್ಲ.) ವನ್ನೂ, ಅದರೊಡನಿದ್ದ ಸ್ಕ್ರ್ಯೂ ಮೊಳೆಯನ್ನೂ ತೆಗೆದುಬಿಡಬೇಕು. ಒತ್ತಡವನ್ನು • ಮೇಲೆ ಕೆಳಗೆ ಸರಿಸುವ ಕುದುರೆ ಮಾತ್ರ ಚಿತ್ರದಲ್ಲಿ ತೋರಿಸಿದಂತೆ ಹಾಗೇ ಇರತಕ್ಕದ್ದು. ಕಸೂತಿಯನ್ನು ಹೆಣೆಯು ವಾಗಲೂ, ಆ ಕುದುರೆ ಕೆಳಗೇ ಇರಬೇಕಾಗುವದು. ಅಂದರೇನೇ ಒತ್ತಡ ಸರಿಯಾಗಿ ಹೆಣಿಕೆ ಸರಿಯಾಗಿ ಬೀಳುವುದು. ಬಳಿಕ ಪ್ಲೇಟನ್ನು ಎರಡೂ ಬದಿಯ ಅಂಚಿನಗುಂಟ ಸಮವಾಗಿ ಸರಿಸಿ, ಸೂಜಿಯ ಪ್ಲೇಟಿನಲ್ಲಿಯ ತೂತಿ

ನಲ್ಲಿ ನೇರವಾಗಿ ಹೋಗುವಂತೆ ಗಟ್ಟಿಯಾಗಿ ಕೂಡಿಸಬೇಕು. ಪ್ಲೇಟು ಸರಿದಾಡಿದರೆ, ಸೂಜಿ ತಪ್ಪಿ ಮುರಿಯುವ ಸಂಭವವಿರುತ್ತದೆ.

## ಯಂತ್ರದ ಬಗೆಗೆ ಎಚ್ಚರಿಕೆ

ಇಷ್ಟಾದ ಮೇಲೆಯೂ ಯಂತ್ರವಿನ್ನೂ ಕಸೂತಿಯ ಹೆಣಿಕೆಗೆ ಸಿದ್ಧವಾಗಲಿಲ್ಲ. ದಿನಂಪ್ರತಿ ಬಟ್ಟೆಗಳನ್ನು ಹೊಲಿಯುವಾಗಲೂ ಮೇಲಿನ ಮತ್ತು ಕೆಳಗಿನ ಟೆಬ್ಬಿಗಳೆರಡೂ ಸರಿಯಾಗಿ ಬಿದ್ದರೆ ಮಾತ್ರ ಹೊಲಿಗೆ ಅಂದವಾಗಿ ಗಟ್ಟಿಯಾಗುವುದಲ್ಲವೇ ? ಎಂದರೆ ಎರಡೂ ಎಳೆಗಳ ಬಿಗಿತ ಸರಿಯಾಗಿರಬೇಕು. ಆದರೆ ಕಸೂತಿಯನ್ನು ಹಾಕುವಾಗ, ಈ ಬಿಗಿತವನ್ನು ಹೆಚ್ಚು-ಕಡಿಮೆ ಮಾಡಲು ಎಡಭಾಗಕ್ಕಿರುವ ಸ್ಕ್ರೂ ಮೊಳೆಯನ್ನು ತುದಿಗೆ ಸರಿಸಿ, ಮೇಲಿನ ಎಳೆಯನ್ನು ಕೊಂಚ ಸಡಿಲು ಮಾಡಬೇಕಾಗುತ್ತದೆ. ಕೆಳಗಿನ ಎಳೆಯ ಬಣ್ಣ ಎಂಥವಿದ್ದರೂ ಮೇಲೆ ಬರುವಂತಿಲ್ಲ. ಒಂದೊಂದು ಸಲ ಮೇಲಿನ ಮತ್ತು ಕೆಳಗಿನ ಎಳೆಗಳು ನಯದಲ್ಲಿ (ನಂಬರಿನಲ್ಲಿ) ಬೇರೆಬೇರೆಯಾಗಿರುವುದರಿಂದಲೂ ಹೀಗೆ ಮಾಡುವುದು ಅವಶ್ಯವಿರುತ್ತದೆ.

ಇಷ್ಟು ಮಾಡಿಯೂ, ಯಂತ್ರಕ್ಕೆ ಸರಿಯಾಗಿ ಎಣ್ಣೆ ಉಣಿಸದಿದ್ದರೆ, ಧೂಳು ಕೂತು ಹೊಲಸಾಗಿದ್ದರೆ, ಕೆಳಗಿನ ಡಬ್ಬಿ (ಬಾಬಿನ್) ಯಲ್ಲಿ ದಾರ ಸಿಕ್ಕಿದ್ದರೆ, ಯಂತ್ರ ನಡೆಯದು, ಈ ಎಲ್ಲ ವಿಷಯವನ್ನೂ ಒಂದೊಂದಾಗಿ ವಿಸ್ತರಿಸಿ ಮುಂದೆ ಹೇಳುವೆ. ಸದ್ಯ ಯಂತ್ರದ ಹೊಲಿಗೆ ಸರಿಯಾಗಿದೆಯೆಂದು ತಿಳಿದೇ ಮುಂದೆ ಸಾಗೋಣ. ಇನ್ನು ಯಂತ್ರದಲ್ಲಿ ಈ ಬದಲಾವಣೆಗಳನ್ನು ಮಾಡಿದ ಮೇಲೆ, ಕಸೂತಿಯನ್ನು ಹೆಣೆಯಲು ಬೇಕಾಗುವ ಬಣ್ಣ ಬಣ್ಣದ ದಾರ, ಬಟ್ಟೆಯನ್ನು ಬಿಗಿಹಿಡಿಯುವ **ರಿಂಗು,** ಚಿತ್ರದ ಕಾಗದ, ಚಿತ್ರವನ್ನು ಬಟ್ಟೆಯ ಮೇಲೆ ಮೂಡಿಸಲು ಬೇಕಾಗುವ ಕಾರ್ಬನ್ ಕಾಗದ, ಪೆನ್ಸಿಲ್, ಯಂತ್ರದ ಸಣ್ಣ ಸೂಜಿ, ತುದಿಯಲ್ಲಿ ಬಗ್ಗಿಸಿದ ಸಣ್ಣ ಕತ್ತರಿ, ಒಂದು ವಾರ— ಅಷ್ಟು ತೆಳುವಾಗಿಲ್ಲದ—ಬಿಳಿಯ ಬಟ್ಟೆ, ಇವುಗಳನ್ನು ಸುಸಜ್ಜಿತವಾಗಿ ಇಟ್ಟುಕೊಂಡು, ಕಸೂತಿಯನ್ನು ಪ್ರಾರಂಭಿಸಬೇಕು. ಕಸೂತಿಯನ್ನು ಪ್ರಾರಂಭಿಸುವಾಗ, ಯಂತ್ರದ ಮೇಲ್ಮಣೆಯೂ, ಕೈಗಳೂ ಸ್ವಚ್ಛವಾಗಿರುವುದರ ಕಡೆಗೆ ವಿಶೇಷ ಲಕ್ಷ್ಯವನ್ನು ಪೂರಯಿಸಬೇಕು. ಇಲ್ಲದಿದ್ದರೆ ಕಸೂತಿ ಸಿದ್ಧವಾಗುವುದಕ್ಕಿಂತ ಮೊದಲೇ ಬಟ್ಟೆ ಕೊಳೆಯಾಗಿ ಬಿಡಬಹುದು. ಆದುದರಿಂದ ಮೊದಲಿಗೇ ಶಕ್ಯವಿದ್ದಷ್ಟು ಜಾಗರೂಕತೆ ವಹಿಸುವುದು ಒಳ್ಳೆಯದು.

# ಚಿತ್ರ ಮೂಡಿಸುವುದು



ಇಷ್ಟಾದ ಬಳಿಕ ಮೊದಲನೆಯ ಕೆಲಸವೆಂದರೆ, ಬಟ್ಟೆಯ ಮೇಲೆ ತುಂಬ ಬೇಕಾದ ಚಿತ್ರವನ್ನು ಮೂಡಿಸುವುದು. ಇದು ಯಾವ ಬಟ್ಟೆಯ ಮೇಲೆ ಚಿತ್ರವನ್ನು ಮೂಡಿಸುವುದಿರುವುದೋ, ಆ ಬಟ್ಟೆಯ ಗುಣವನ್ನವಲಂಬಿಸಿರುತ್ತದೆ.

ತೀರ ತಿಳುವಾಗಿರದ, ದಟ್ಟವಾದ ನೇಯ್ಗೆಯ ಬಟ್ಟೆಯ ಮೇಲೆ ಚಿತ್ರವನ್ನು ಮೂಡಿಸುವುದಾದರೆ, ಆ ಬಟ್ಟೆಯನ್ನು ಮೊದಲು ಮೇಜಿನ ಮೇಲಾಗಲಿ, ಮಣೆಯ ಮೇಲಾಗಲಿ, ಎಲ್ಲಿಯೂ ಮುದ್ದೆಯಾಗದಂತೆ ಸಮನಾಗಿ ಹರಡಬೇಕು. ಬಳಿಕ ಯಾವ ಭಾಗದಲ್ಲಿ ಚಿತ್ರವನ್ನು ಮೂಡಿಸುವುದಿರುವುದೋ ಆ ಭಾಗದ ಮೇಲೆ ಕಾರ್ಬನ್ ಕಾಗದವನ್ನು—ಬಣ್ಣದ ಮೈಯನ್ನು ಅರಿವೆಗೆ ಹೊಂದಿಸಿ ಇಡಬೇಕು. ಅದರ ಮೇಲೆ ಚಿತ್ರದ ಕಾಗದವಿಟ್ಟು, ಪೆನ್ಸಿಲ್ಲಿನಿಂದ (ಕಾಗದ ಹರಿಯದಂತೆ) ಮೇಲಿನ ಆಕೃತಿಯಲ್ಲಿ ತೋರಿಸಿದಂತೆ ಗೆರೆಗಳನ್ನು ಒತ್ತಿ ಮೂಡಿಸಬೇಕು. ಹೀಗೆ ಮಾಡುವಾಗ ಬಟ್ಟೆ ಕಾಗದಗಳು ಅತ್ತಿತ್ತ ಸರಿದಾಡುವ ಸಂಭವವೂ ಇದೆ. ಅದಕ್ಕಾಗಿ ನಾಲ್ಕೂ ಬದಿಗೆ ಗುಂಡು ಸೂಜಿಗಳನ್ನು ಚುಚ್ಚಿ, ಗಟ್ಟಿಯಾಗಿ ಕೂಡಿಸಿದರೆ ಮತ್ತೂ ಒಳ್ಳೆಯದು. ಕಾರ್ಬನ್ ಕಾಗದವನ್ನಿಟ್ಟು ತೆಗೆಯುವುದರಿಂದ ಚಿತ್ರವು ಬಟ್ಟೆಯ ಮೇಲೆ ಸ್ಪಷ್ಟವಾಗಿ ಮೂಡುವುದು.

ವಾಯಿಲ್, ಮಲಮಲ್, ಅರ್ಗಂಡಿ, ಜಾರ್ಜೆಟ್ ಇವೇ ಮೊದಲಾದ ಬಟ್ಟೆಗಳ ಮೇಲೆ ಚಿತ್ರ ಮೂಡಿಸುವುದಿದ್ದರೆ, ಕಾರ್ಬನ್ ಕಾಗದದ ಅವಶ್ಯ

ಕತೆಯೂ ಇಲ್ಲ. ಚಿತ್ರದ ಕಾಗದವನ್ನು ಮಣೆಯ ಮೇಲೆ ಇಟ್ಟು ಅದರ ಮೇಲೆ ಬಟ್ಟೆಯನ್ನು ಸಮನಾಗಿ ಹರಡಿದರೆ, ಬಟ್ಟೆಯ ಮೇಲೆಯೇ ಚಿತ್ರ ಸ್ಪಷ್ಟವಾಗಿ ಕಾಣುವುದು. ಮೃದುವಾದ ಪೆನ್ಸಿಲ್ಲಿನಿಂದ ಬಟ್ಟೆಯ ಮೇಲೆ ಚಿತ್ರವನ್ನು ಸ್ಪಷ್ಟವಾಗಿಯೇ ಮೂಡಿಸಬಹುದು. ಅಥವಾ ತಕ್ಕಮಟ್ಟಿಗೆ ದಪ್ಪವಾದ ಕಾಗದದ ಮೇಲೆ ಆ ಚಿತ್ರವನ್ನು ಮೊದಲು ಕಾರ್ಬನ್ನಿನ ಸಹಾಯದಿಂದ ಮೂಡಿಸಿಕೊಳ್ಳಬೇಕು. ಬಳಿಕ ಆ ಕಾಗದದ ಮೇಲೆ ಚಿತ್ರ ಹೆಣೆಯಬೇಕಾದ ಬಟ್ಟೆಯನ್ನಿಟ್ಟು, ಎರಡನ್ನೂ ಬಿಗಿಯಾಗಿ ರಿಂಗು ಅಥವಾ ಹಾಳಿತಾದ ಕಟ್ಟಿಗೆಯ ಚೌಕಟ್ಟಿನಲ್ಲಿ ಕೂಡಿಸಿಯೂ ಯಂತ್ರದಲ್ಲಿ ಹೆಣೆಯಬಹುದು. ಯಂತ್ರದಲ್ಲಿಯೇ ಈ ಬಟ್ಟೆಯ ಮೇಲೆ ಮೊದಲು ಚಿತ್ರದ, ಬಾಹ್ಯರೇಹೆಗಳನ್ನಷ್ಟೇ ಬಣ್ಣದ ದಾರದಿಂದ ಮೂಡಿಸಿಕೊಳ್ಳಬಹುದು. ಬಳಿಕ ಕಾಗದವನ್ನು ಕಿತ್ತೊಗೆದು, ಬಟ್ಟೆಯ ಮೇಲೆ ಮೂಡಿದ ಚಿತ್ರದಲ್ಲಿ ತುಂಬಲೂ ಬರುವುದು. ಜಾಳಿಗೆಯಂತಹ ಅರಿವೆ ಇದ್ದರಂತೂ ಇದೇ ಪದ್ಧತಿಯನ್ನು ಅನುಸರಿಸಬೇಕಾಗುವದು.



# ಬಟ್ಟೆಯನ್ನು ರಿಂಗಿನಲ್ಲಿ ಕೂಡಿಸಬೇಕು!

ಬಟ್ಟೆಯ ಮೇಲೆ ಚಿತ್ರವನ್ನು ಮೂಡಿಸಿದ ಬಳಿಕ, ಆ ಬಟ್ಟೆಯನ್ನು ಬಿಗಿಯಾಗಿ ರಿಂಗಿನಲ್ಲಿ ಕೂಡಿಸಬೇಕಾಗುವದು. ಕೈ ಕಸೂತಿಯನ್ನು ರಿಂಗಿನ ಸಹಾಯವಿಲ್ಲದೆಯೂ ತೆಗೆಯಬಹುದು. ಆದರೆ ಯಂತ್ರದಲ್ಲಿ ಮಾತ್ರ ರಿಂಗಿನಲ್ಲಿ ಬಟ್ಟೆಯನ್ನು ಬಿಗಿಯಾಗಿ ಕೂಡಿಸದೆ ತೆಗೆಯುವುದೇ ಸಾಧ್ಯವಿಲ್ಲ. ಕೈ ಕಸೂತಿಯಲ್ಲಿ ಸೂಜಿಯನ್ನು ಚುಚ್ಚಿಯೂ ಬಟ್ಟೆಯನ್ನು ಸರಿಸಬಹುದು. ಆದರೆ ಯಂತ್ರದಲ್ಲಿ ಬಟ್ಟೆಯನ್ನು ಸರಿಸಾಡಿ ಸೂಜಿಯನ್ನು ಚುಚ್ಚುವುದಿರುತ್ತದೆ. ಬಟ್ಟೆಯನ್ನು ಸರಿಸಿದತ್ತ ಸೂಜಿ ಚುಚ್ಚುತ್ತ ಹೋಗುತ್ತದೆ. ಅದಕ್ಕಾಗಿ ಬಟ್ಟೆಯನ್ನು ಸುಲಭವಾಗಿ ಬೇಕಾದ ಕಡೆಗೆ ಸರಿಸಲು ರಿಂಗಿನ ಅವಶ್ಯಕತೆ ಎಷ್ಟಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಹೀಗೆ ಸರಿಸಾಡಲು ಸುಲಭವಾಗುವಂತೆ, ರಿಂಗು ಹಾಳತವಾಗಿರಬೇಕು. ಯಂತ್ರದಲ್ಲಿ ಕಸೂತಿಯನ್ನು ಹಾಕಲು ಸುಮಾರು ೧೦-೧೨ ಇಂಚು ವ್ಯಾಸವುಳ್ಳ ಕಟ್ಟಿಗೆಯ ವರ್ತುಲವನ್ನು ಉಪಯೋಗಿಸುವುದುಂಟು. ಈ ಅಳತೆ ತೀರ ದೊಡ್ಡದೂ ಅಲ್ಲ, ತೀರ ಚಿಕ್ಕದೂ ಅಲ್ಲ.

ಯಂತ್ರದ ಕಸೂತಿಯಲ್ಲಿ, ರಿಂಗಿನಲ್ಲಿ ಬಟ್ಟೆಯನ್ನು ಕೂಡಿಸುವುದೂ ಮಹತ್ತ್ವದ ವಿಷಯವೇ. ಕೈಕಸೂತಿಯಲ್ಲಿ, ರಿಂಗಿನಲ್ಲಿಯ ದೊಡ್ಡ ವರ್ತುಳ ಮೇಲೆ ಬರುವುದು. ಬಟ್ಟೆ ರಿಂಗಿನ ಮೇಲಂಚಿಗೆ ಸಮನಾಗಿ, ಚಿತ್ರ ತುಂಬಬೇಕಾದ ಭಾಗ ಎತ್ತರವಾಗಿ ಬರುವುದು. ಆದರೆ ಯಂತ್ರದ ಕಸೂತಿಯಲ್ಲಿ ಇದಕ್ಕೆ ವಿರುದ್ಧವಾಗಿರುವುದು. ರಿಂಗಿನ ದೊಡ್ಡ ವರ್ತುಳ ಕೆಳಗೆ ಹೋಗಿ, ಸಣ್ಣ ವರ್ತುಳ ಮೇಲೆ ಬರುವುದು. ಚಿತ್ರ ತುಂಬಬೇಕಾದ ಬಟ್ಟೆಯ ಭಾಗ ರಿಂಗಿನ ಕೆಳಗಿನ ಅಂಚಿಗೆ ಸರಿಯಾಗಿ ಹೊಂದಿಕೊಳ್ಳುವುದು. ಬಟ್ಟೆಯು ಯಂತ್ರದ ಪ್ಲೇಟಿಗೆ ಹತ್ತಿರಬೇಕಾದ್ದರಿಂದ, ಹೀಗೆ ಕೂಡಿಸುವುದು ಅವಶ್ಯವಿದೆ. ಇಲ್ಲಿಯೂ ತುಂಬಬೇಕಾದ ಚಿತ್ರ ಆದಷ್ಟು ರಿಂಗಿನ ಮಧ್ಯದಲ್ಲಿ ಬರುವಂತೆ ನೋಡಬೇಕು. ಎಂದರೆ ಹೊಲಿಗೆ ಸರಿಯಾಗಿ ಬೀಳಲು ಅನುಕೂಲ

ವಾಗುವುದು. ಚಿತ್ರವನ್ನು ತುಂಬಬೇಕಾದ ಒಟ್ಟೆ ಸಣ್ಣದಾಗಿದ್ದರೆ, ಬಟ್ಟೆಯನ್ನು ಬಿಗಿಯಾಗಿ ರಿಂಗಿನಲ್ಲಿ ಕೂಡಿಸುವುದು ಸಾಧ್ಯವಾಗದು. ಸ್ವಲ್ಪ ಸಡಿಲಾದರೂ, ಯಂತ್ರದಲ್ಲಿ ಹೊಲಿಗೆ ಚೆನ್ನಾಗಿ ಬೀಳದು. ಅದಕ್ಕಾಗಿ ಆ ಸಣ್ಣ ಬಟ್ಟೆಯ ತುಂಡು ನಡುವೆ ಬರುವಂತೆ, ನಾಲ್ಕೂ ಬದಿಗೆ ಬೇರೊಂದು ಬಟ್ಟೆಯನ್ನು ಹಚ್ಚಿಹೊಲಿದು, ರಿಂಗಿನಲ್ಲಿ ಬಿಗಿಯಾಗಿ, ಸ್ಕ್ರೂವೊಳೆಯ ಸಹಾಯದಿಂದ ಕೂಡಿಸಿ ತುಂಬಬೇಕಾಗುವುದು. ತುಂಬಿದ ಮೇಲೆ ನಾಲ್ಕೂ ಬದಿಗೆ ಜೋಡಿಸಿದ ಅರಿವೆಯನ್ನು ಬಿಚ್ಚಿಬಿಡಬಹುದು.

ಒಂದೊಂದು ಸಲ ಚಿತ್ರತುಂಬಬೇಕಾದ ಬಟ್ಟೆ, ತೀರ ತೆಳುವಾಗಿರುವಾಗ, ಅಥವಾ ಜಾಳಿಗೆಯದಾಗಿರುವಾಗ, ರಿಂಗಿನಲ್ಲಿ ಬಿಗಿಯಾಗಿ ಕೂಡಿಸುವುದೇ ಅಸಾಧ್ಯವಾಗಿ ಬಿಡುತ್ತದೆ. ಅದಕ್ಕಾಗಿ ಬಟ್ಟೆಯ ಹಿಂದೆ, ಚಿತ್ರದ ಕಾಗದವನ್ನಾಗಲಿ ಅಥವಾ ಬರ ಬಿರುಸು ಕಾಗದವನ್ನಾಗಲಿ ಇಟ್ಟು ಬಿರುಸಾಗಿ ಕೂಡಿಸಬೇಕಾಗುತ್ತದೆ. ಸ್ಯಾಟಿನ್, ಜಾರ್ಜಟ್ ರೇಶಿಮೆ ಬಟ್ಟೆಗಳನ್ನು ರಿಂಗಿನಲ್ಲಿ ಬಿಗಿಯಾಗಿ ಕೂಡಿಸುವುದರಿಂದಲೇ, ಒಂದೊಂದು ಸಲ, ರಿಂಗಿನ ಎರಡು ವರ್ತುಳಗಳ ನಡುವೆ ಸಿಕ್ಕ ಬಟ್ಟೆಯ ಭಾಗ ಜಿಬ್ಬೆಯಾಗುವುದುಂಟು. ಆಗ ಎರಡೂ ವರ್ತುಳಗಳ ನಡುವೆ, ತಿಳುವಾದ ಬೇರೊಂದು ಅರಿವೆಯ ಮಡಿಕೆಯನ್ನು ಸುತ್ತಲೂ ಹಾಕಿ, ಬಳಿಕ ರೇಶಿಮೆ ಬಟ್ಟೆಯನ್ನು ಕೂಡಿಸಬೇಕು. ಚಿತ್ರ ತುಂಬುವ ಬಟ್ಟೆಯ ಭಾಗವೆಲ್ಲ ಒಮ್ಮೆಲೇ ರಿಂಗಿನಲ್ಲಿ ಸೇರಲು ಸಾಧ್ಯವಿಲ್ಲದಾಗ, ಒಂದು ಭಾಗವನ್ನು ತುಂಬಿ, ರಿಂಗನ್ನು ಹೊರದೆಗೆದು, ಮತ್ತೊಂದು ಭಾಗವನ್ನು ಕೂಡಿಸಬೇಕಾಗುವುದು. ಆಗ ರಿಂಗಿನ ಎರಡು ವರ್ತುಳಗಳಲ್ಲಿ ತಿಳುವಾದ ಅರಿವೆಯ ಮಡಿಕೆಯನ್ನಿಟ್ಟರೆ, ಚಿತ್ರದ ಮಧ್ಯಭಾಗ ಸುರಕ್ಷಿತವಾಗಿಯೇ ಉಳಿಯುವುದು. ಅಂತೂ ಯಂತ್ರದ ಕಸೂತಿಯಲ್ಲಿ ರಿಂಗಿನಲ್ಲಿ ಬಟ್ಟೆಯನ್ನು ಸರಿಯಾಗಿ ಕೂಡಿಸುವುದೇ ಒಂದು ಜಾಣತನ. ಹಲವು ಸಲ, ಸ್ಯಾಟಿನ್. ರೇಶ್ಮೆ ಬಟ್ಟೆಗಳ ಮೇಲೆ ಚಿತ್ರ ತುಂಬುವಾಗ, ಒಳವಸ್ತ್ರವನ್ನೂ ರಿಂಗಿನಲ್ಲಿ ಸೇರಿಸಬೇಕಾಗುವುದು. ಇಲ್ಲದಿದ್ದರೆ, ಹೊಲಿಗೆಯ ದಾರ ಇಂತಹ ಬಟ್ಟೆಗಳ ಮೇಲೆ ಉಂಡೆಯಾಗಿ ಮೇಲೆ ಬರುವುದು. ಕಸೂತಿಯ ಕಲೆಯಲ್ಲಿ ಕೈ ನುರಿತಂತೆ, ಈ ಉಪಾಯಗಳೆಲ್ಲ ತಾವೇ ತಿಳಿಯುತ್ತ

ಹೋಗುವವು. ಅಲ್ಲದೆ ಇನ್ನೂ ಅನೇಕ ಉಪಯುಕ್ತ ಸೂಚನೆಗಳೂ ತಲೆದೋರಬಹುದು.

## ಸೂಜಿಯ ವಿಷಯ

ಕಸೂತಿಯನ್ನು ತುಂಬುವಾಗ ಯಂತ್ರದ ಸೂಜಿಯ ವಿಷಯವಾಗಿಯೂ ಲಕ್ಷ್ಯಕೊಡುವುದಿದೆ. ಸೂಜಿ ಮಣಿದಿದ್ದರೆ, ಸರಿಯಾಗಿ ಕೂತಿರದಿದ್ದರೆ, ಅಥವಾ ಪ್ಲೇಟಿನ ತೂತಿನಲ್ಲಿ ನೇರವಾಗಿ ಹೋಗದಿದ್ದರೆ, ಒಮ್ಮೆಲೇ ಮುರಿದು ಬಿಡುವುದು. ಅದಕ್ಕಾಗಿ ಈ ಎಲ್ಲ ವಿಷಯಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ಕಸೂತಿಯನ್ನು ಪ್ರಾರಂಭ ಮಾಡತಕ್ಕದ್ದು. ಇನ್ನು ಕಸೂತಿಯನ್ನು ಹಣೆಯುತಕ್ಕ ಬಟ್ಟೆಗನುಸಾರವಾಗಿ ಸೂಜಿ, ದಾರಗಳಲ್ಲಿಯೂ ಬದಲಾವಣೆಯನ್ನು ಮಾಡುವುದಿರುತ್ತದೆ. ಸಾಮಾನ್ಯವಾಗಿ ಪಾಪ್ಲಿನ್ ಬಟ್ಟೆಯ ಮೇಲೆ ಚಿತ್ರ ತುಂಬುವುದಿದ್ದಾಗ, ಮೇಲಿನ ಎಳೆ ೮೦ ನಂಬರಿನದಿದ್ದು, ಕೆಳಗಿನ (ಬಾಬಿನ್) ಎಳೆ ೬೦ ನಂಬರಿನದು ಇದ್ದರೂ ನಡೆಯುವುದು. ಆಗ '೯' ನಂಬರಿನ ಸೂಜಿಯನ್ನು ಯಂತ್ರದಲ್ಲಿ ಉಪಯೋಗಿಸಬೇಕು. ಅಲ್ಲದೆ ದಿನದ ಹೊಲಿಗೆಗಾಗಿ ಉಪಯೋಗಿಸುವ '೧೪', '೧೬', ನಂಬರಿನ ಸೂಜಿಗಳನ್ನು ಉಪಯೋಗಿಸಿದರೆ, ಬಟ್ಟೆಗೆ ತೂತು ಬಿದ್ದಂತೆ ಕಾಣುವುದು. ಜಾರ್ಜಟ್, ಆರ್ಗಂಡಿ ಬಟ್ಟೆಗಳ ಮೇಲೆ ಚಿತ್ರ ತುಂಬುವಾಗ, ತುಂಬಲು ಉಪಯೋಗಿಸುವ ರೇಶಿಮೆಯ ಎಳೆಗಳಲ್ಲಿ ಬದಲುಮಾಡಬೇಕಾಗುತ್ತದೆ. ಆಗ '೯' ನಂಬರಿನ ಸೂಜಿಯನ್ನುಪಯೋಗಿಸಿದರೆ, ಹೆಣಿಕೆ ಇನ್ನೂ ಅಂದವಾಗಿ ಕಾಣುವುದು.

ಪ್ರಾರಂಭಕ್ಕೇ ಸಣ್ಣ ಸೂಜಿ-ದಾರಗಳನ್ನುಪಯೋಗಿಸಿದರೆ, ಸೂಜಿಗಳು ಮುರಿದು ದಾರ ಹರಿದು ಬೇಸರವಾಗಿ ಬಿಡುವುದು. ಅದಕ್ಕಾಗಿ '೧೪' ನಂಬರಿನ ಸೂಜಿಯನ್ನೇ ಹಾಕಿ '೬೦' ನಂಬರಿನ ದಾರವನ್ನೇ ಎರಡೂ ಬದಿಗಿಟ್ಟು ದಪ್ಪವಾದ ಬಿಳಿಯ ಬಟ್ಟೆಯ ಮೇಲೆ ರೂಢಿ ಮಾಡುವುದು ಒಳ್ಳೆಯದು. ಕಸೂತಿಯನ್ನು ಹಾಕುವಾಗ ಕೈಬೆರಳುಗಳು ಆದಷ್ಟು ಸೂಜಿಯ ಸಮೀಪದಲ್ಲಿಯೇ ಆಡುವುದರಿಂದ, ಬೆರಳಿನ ಮೇಲೆ ಸೂಜಿ ತಪ್ಪಿಬೀಳುವ ಸಂಭವ ಹೆಚ್ಚಾಗಿದೆ; ಅಲ್ಲದೆ ಪ್ಲೇಟಿಗೆ ತಗಲಿ, ಅಥವಾ ಯಂತ್ರದ ಚಕ್ರ ವಿರುದ್ಧ ದಿಕ್ಕಿಗೆ ತಿರುಗಿ ಸೂಜಿ ಮುರಿಯಿತೆಂದರೆ ಅದರ ತುದಿ ಒಮ್ಮೆಲೆ ಕಣ್ಣಿನಲ್ಲಿ

ನೆಗೆಯುವುದೂ ಉಂಟು. ಇವೆರಡರ ಬಗ್ಗೆಯೂ, ವಿದ್ಯಾರ್ಥಿಗಳು ಹೆಚ್ಚು ಜಾಗರೂಕತೆಯನ್ನು ವಹಿಸುವುದು ಒಳ್ಳೆಯದು.

**ಕತ್ತರಿ**

ಇನ್ನು ಕಸೂತಿಯ ಕತ್ತರಿಯ ವಿಷಯವಾಗಿಯೂ ಸ್ವಲ್ಪ ಪರಿಚಯ ಬೇಕಾಗುವುದು. ಈ ಕತ್ತರಿ ಆಕಾರದಲ್ಲಿ ತೀರ ಸಣ್ಣದು; ರೇಶಿಮೆಯ ಎಳೆಗಳನ್ನು ಕತ್ತರಿಸುವ ಪ್ರಸಂಗಗಳೇ ಅದಕ್ಕೆ ಹೆಚ್ಚು. ಅಲ್ಲದೆ ಕತ್ತರಿಸುವ ಕಸೂತಿ ( cut work ) ಮೊದಲಾದವುಗಳಲ್ಲಿ, ಬಟ್ಟೆಯ ತೀರ ಸಣ್ಣ ಸಣ್ಣ ಭಾಗಗಳನ್ನು, ಅಂಚಿಗೆ ಹೊಂದಿ ಕತ್ತರಿಸಬೇಕಾಗುವುದು. ಅದಕ್ಕಾಗಿ ಈ ಕತ್ತರಿಯ ತುದಿ ವಿಶಿಷ್ಟರೀತಿಯಲ್ಲಿ, ಹಾಗೆ ಕತ್ತರಿಸಲು ಅನುಕೂಲವಾಗುವಂತೆ ಮಣಿದಿರುತ್ತದೆ.

**ಉಪಕರಣಸಿದ್ಧತೆಯ ನಂತರ :**

ಸರಿ ! ಬಟ್ಟೆ, ಚಿತ್ರ, ರಿಂಗು, ಸೂಜಿ, ಬಣ್ಣದ ದಾರ, ಕತ್ತರಿ ಎಲ್ಲವೂ ಅಣಿಯಾಗಿರುವುದಲ್ಲವೇ ? ಹಾಗಾದರೆ ಬಟ್ಟೆಯ ಮೇಲೆ ಚಿತ್ರವನ್ನು ಮೂಡಿಸಿ



ಚಿತ್ರ ಮಧ್ಯದಲ್ಲಿ ಬರುವಂತೆ ರಿಂಗಿನಲ್ಲಿ ಬಿಗಿಯಾಗಿ ಸೇರಿಸಿರಿ. ಬಳಿಕ, ಯಂತ್ರದಲ್ಲಿಯ ಒತ್ತಡವನ್ನು ಮೇಲೆ ಕೆಳಗೆ ಮಾಡುವ ಕುದುರೆಯನ್ನು ಮೇಲೆ ಮಾಡಿ, ಸೂಜಿಯನ್ನು ಮೇಲಕ್ಕೆ ಒಯ್ದು, 'ಬ' ಭಾಗದಲ್ಲಿ ತೋರಿಸಿದಂತೆ ರಿಂಗನ್ನು ಮೆಲ್ಲಗೆ ಸೂಜಿಯ ಕೆಳಗೆ ಸೇರಿಸಿರಿ. ಅದು ಸರಿಯಾಗಿ ಕುಳಿತ ಬಳಿಕ ಕುದುರೆಯನ್ನು ಕೆಳಗಿಳಿಸಿಬಿಡಿರಿ ! ಬಳಿಕ ಮೇಲಿನ ಎಳೆಯನ್ನು ಎಡಕ್ಕಿದ್ದ ಸ್ಕ್ರೂದಿಂದ ಕೊಂಚ ಮಾತ್ರ ಸಡಿಲುಮಾಡಿ, ಸೂಜಿಯನ್ನು ಕೆಳಕ್ಕಿಳಿಸಿ, ಮೆಲ್ಲಗೆ ಯಂತ್ರವನ್ನು ತಿರುಗಿಸಲು ಪ್ರಾರಂಭಿಸಿರಿ. ಮೊದಮೊದಲು, ಬೇಕಾದಾಗ ನಿಲ್ಲಿಸಬೇಕಾದ್ದರಿಂದ, ಒಂದು ಕೈ ಚಕ್ರಕ್ಕೆ ಹೊಂದಿಕೊಂಡೇ ಉಳಿಯುವುದು. ಆದರೆ ಯಂತ್ರವನ್ನು ಕಾಲಿನಿಂದಲೇ ಮೆಲ್ಲಗೆ ತಿರುಗಿಸಿ ಅಳವಿನಲ್ಲಿಟ್ಟುಕೊಂಡು, ಎರಡೂ ಕೈಗಳನ್ನೂ ರಿಂಗನ್ನು ಸರಿಸಾಡಲು ಉಪಯೋಗಿಸುವುದು ಒಳ್ಳೆಯದು. ಅದಕ್ಕಾಗಿ ಹಾಗೇ ರೂಢಿಮಾಡಬೇಕು.

ಹೊಲಿಯುವಾಗ ಬಟ್ಟೆಯನ್ನು ಕ್ರಮಬದ್ಧವಾಗಿ ಮುಂದೆ ಸರಿಸುವ ಹಲ್ಲುಗಳೂ, ಬಟ್ಟೆಯನ್ನು ಒತ್ತಿಹಿಡಿಯುವ ಒತ್ತಡವೂ ಈಗ ಇಲ್ಲ; ಅದಕ್ಕಾಗಿ ಬಟ್ಟೆಯನ್ನು, ಸಮಾನ ಅಂತರವನ್ನಿಟ್ಟು ಸರಿಸಲು ಕೈಗೆ ರೂಢಿ ಬೇಕಾಗುವುದು. ಸುರುವಿಗೆ, ರೂಢಿಯಿಲ್ಲದ್ದರಿಂದ ಒಂದು ಹೊಲಿಗೆ ದೊಡ್ಡದು, ಒಂದು ಸಣ್ಣದು, ಒಂದು ರೇಷೆಯಲ್ಲಿ, ಒಂದು ರೇಷೆಯ ಹೊರಗೆ ಕೈತೂಕ ತಪ್ಪಿ ಬೀಳಬಹುದು. ಮೊದಲು ಒಂದೇ ರೇಷೆಯಲ್ಲಿ ಬಟ್ಟೆಯನ್ನು ಹೊಲಿಗೆಗಳ ಮಧ್ಯೆ ಸಮಾನ ಅಂತರವನ್ನಿಟ್ಟು ಸರಿಸಲು ಪ್ರಯತ್ನ ಮಾಡಿರಿ! ಇದು ಬೇರೇನೂ ಅಲ್ಲ. ದಿನದ ಹೊಲಿಗೆಯಲ್ಲಿ ಉಪಯೋಗಿಸುವ ಸಾದಾ ಹೊಲಿಗೆಯೇ. ಮೇಲಿನಿಂದ ಕೆಳಕ್ಕೂ, ಕೆಳಗಿನಿಂದ ಮೇಲೂ, ಒಂದೇ ರೇಷೆಯಲ್ಲಿ ಹೊಲಿಗೆಗಳು ಸಮಾನ ಅಂತರದಲ್ಲಿ ಬೀಳತೊಡಗಿದ ಬಳಿಕ, ಮತ್ತೆ ಮುಂದಿನದನ್ನು ಹೇಳುವೆ. ಸಾಮಾನ್ಯವಾಗಿ ಹೊಲಿಗೆಯಲ್ಲಿ ಬಟ್ಟೆ ಮುಂದಕ್ಕೆ ಮಾತ್ರ ಸರಿಯುತ್ತದೆ. ಆದ್ದರಿಂದ ಹೊಲಿಗೆ ಮೇಲಿನಿಂದ ಕೆಳಕ್ಕೆ ಬೀಳದು. ಆದರೆ ಕಸೂತಿಯನ್ನು ಹಾಕುವಾಗ ಬಟ್ಟೆಯನ್ನು ಮುಂದಕ್ಕೆ ಸರಿಸುವ ಹಲ್ಲುಗಳೇ ಇಲ್ಲ : ಬಟ್ಟೆಯನ್ನು ಮೇಲಿನಿಂದ ಕೆಳಕ್ಕೂ, ಕೆಳಗಿನಿಂದ ಮೇಲೂ, ಎಡದಿಂದ ಬಲಕ್ಕೂ, ಬಲದಿಂದ ಎಡಕ್ಕೂ, ಮೂಲೆಯ ಮೇಲೆಯೂ ಬೇಕಾದ ಹಾಗೆ ಸರಿಸಾಡಿ, 'ಕ' ಭಾಗದಲ್ಲಿ ತೋರಿಸಿದಂತೆ ಹೆಣೆಯಬಹುದು.

ದುಂಡು ಹೊಲಿಗೆ, ಸಾಟಿನ್ ಹೊಲಿಗೆಗಳನ್ನೂ ಹಾಕಿ, ಕಸೂತಿಯ ಸೌಂದರ್ಯವನ್ನು ಹೆಚ್ಚಿಸಲೂಬಹುದು.

ಸದ್ಯ ರಿಂಗಿನ ಮಧ್ಯದ ಬಟ್ಟೆಯ ಮೇಲೆ, ಉದ್ದಕ್ಕೆ ಹತ್ತೆಂಟು ಗೆರೆಗಳನ್ನೆಳೆದು ಮೇಲಿನಿಂದ ಕೆಳಕ್ಕೂ, ಕೆಳಗಿನಿಂದ ಮೇಲ್ಕೂ, ಅವುಗಳನು ಬಣ್ಣದ ದಾರದಲ್ಲಿ ಮೂಡಿಸಲು ಪ್ರಯತ್ನ ಮಾಡಿರಿ. ಬಳಿಕ ಮುಂದಿನದನ್ನು ವಿಸ್ತರಿಸಿ ಹೇಳುವೆ: ಈ ಗೆರೆಗಳನ್ನು ಮೂಡಿಸಲು ಬಂದರೆ, ನಿಮ್ಮಲ್ಲಿ ಆನಂದವೂ, ಮುಂದಿನದನ್ನು ಕಲಿಯಲು ಉತ್ಸಾಹವೂ ತಮ್ಮಿಂದ ತಾವೇ ತಲೆದೋರುವವು.

## ಕಸೂತಿ ಪ್ಲೇಟುಗಳು



೧ ಸಿಂಗರ ಹೊಲಿಯುವ ಯಂತ್ರಕ್ಕೆ ಹಾಕುವ ಎಂಬ್ರಾಯಡರಿ ಪ್ಲೇಟು



೨ ಉಷಾ ಅಥವಾ ಪಾಫ್ ಯಂತ್ರಕ್ಕೆ ಹಾಕುವ ಪ್ಲೇಟು

ಪ್ರಕರಣ ೨

# ವಿವಿಧ ಹೊಲಿಗೆಗಳು

## ಚಿತ್ರ ತುಂಬುವ ಬೇರೆ ಬೇರೆ ವಿವಿಧ ರೀತಿಗಳು

ಯಂತ್ರದಲ್ಲಿ ಕಾಸುರಿನ ಕಸೂತಿಯನ್ನು ಹೆಣೆಯಲು ಆ ಯಂತ್ರದ ಕಸೂತಿಯ ತಗಡಿನ ಜೋಡಣೆ (ಎಂಬ್ರೊಯಡರಿ ಪ್ಲೇಟ್) ಯನ್ನು ಸೂಜಿಯ ಕೆಳಕ್ಕೆ ಸರಿಯಾಗಿ ಕೂಡಿಸಿ, ಕೆಳಗಿನ ದಾರವನ್ನು ಮೇಲೆ ತಂದು, ಮೇಲೆ ಕಸೂತಿಯ ಬಣ್ಣದ ದಾರವನ್ನು ನಿತ್ಯ ಪೋಣಿಸುವಂತೆ ಪೋಣಿಸಿ, ಬಿಳಿಯ ಬಟ್ಟೆಯ ತುಂಡೊಂದನ್ನು ಕಟ್ಟಿಗೆಯ ರಿಂಗಿನಲ್ಲಿ (ರಿಂಗಿನ ಕೆಳ ಅಂಚಿಗೆ ಬಟ್ಟೆ ಸರಿಯಾಗಿ ಹೊಂದಿಕೊಳ್ಳುವಂತೆ) ಕೂಡಿಸಿ, ಅದನ್ನು ಯಂತ್ರದ ಸೂಜಿಯ ಕೆಳಕ್ಕೆ ಸರಿಸಿ, ಒತ್ತಡದ ಕುದುರೆಯನ್ನು ಕೆಳಗಿಳಿಸಿ, ರಿಂಗನ್ನು ಹಿಂದು ಮುಂದೆ ಸರಿಸಾಡಿ, ಬಣ್ಣದ ರೇಶಿಮೆಯಲ್ಲಿ ಉದ್ದಕ್ಕೂ ಗೆರೆಗಳನ್ನು ಮೂಡಿಸಿದೆಯಲ್ಲವೇ ? ಹೇಗಿದೆ ಬಣ್ಣದ ಟೆಬ್ಬಿಯ ಓಟ ? ಟೆಬ್ಬಿ ಯೆಲ್ಲವೂ ಸಮಾನ ಅಂತರದಲ್ಲಿ, ಒಂದೇ ಸಮನಾಗಿ ಬಿದ್ದುವೇ ? ಮೊದಲಿನ ಒಂದೆರಡು ಸಾಲುಗಳಲ್ಲಿ ಬೀಳದಿದ್ದರೆ ಹೋಗಲಿ; ಮುಂದೆಯಾದರೂ ಬೀಳು ತ್ತಿವೆಯಲ್ಲ ! ಮೇಲೆ ಟೆಬ್ಬಿ ಬೀಳುತ್ತಿರುವಾಗ, ಕೆಳಗಿನ ದಾರ ಮೇಲೆ ಬರ ದಂತೆ ಎಚ್ಚರದಿಂದಿರು ! ಅದನ್ನು ಹೇಗೆ ಮಾಡಬೇಕೆಂಬುದನ್ನು ಹಿಂದೆಯೇ ಹೇಳಿದ್ದೇನೆ, ಅಲ್ಲವೇ ?

### ೧) ಓಡುವ ಟೆಬ್ಬಿ (ರನಿಂಗ ಸ್ಟಿಚ್)

ಈಗ ಟೆಬ್ಬಿಗಳು ಸಮಾನ ಅಂತರದಲ್ಲಿ ಒಂದೇ ಸಮನಾಗಿ ಬೀಳ ತ್ತಿರುವವೆಂದರೆ ಯಂತ್ರದ ರಾಟೆಯನ್ನು ಸ್ವಲ್ಪ ಸ್ವಲ್ಪ ವೇಗವಾಗಿ ತಿರುಗಿ ಸಿಯೂ ಅದನ್ನು ಅಳವಿನಲ್ಲಿಟ್ಟುಕೊಂಡು ಟೆಬ್ಬಿಗಳನ್ನು ಹಾಕಲು ಪ್ರಯತ್ನ ಮಾಡು ! ಟೆಬ್ಬಿ ಹಿಡಿತದಲ್ಲಿ ಬಂದು, ಸಮನಾಗಿ ಸೂಜಿ ಓಡತೊಡಗಿತೆಂದರೆ, ಒತ್ತಡದ ಕುದುರೆಯನ್ನು ಮೇಲಕ್ಕೆತ್ತಿ, ರಿಂಗನ್ನು ಮೆಲ್ಲಗೆ ಹೊರದೆಗೆದು,



ಆ ಬಟ್ಟೆಯನ್ನು ತೆಗೆದುಬಿಟ್ಟು, ಯಾವ ಬಟ್ಟೆಯಲ್ಲಿ ಅಂದವಾದ ಚಿತ್ರವನ್ನು ರೇಶಿಮೆಯಲ್ಲಿ ಹೆಣೆಯುವುದಿದೆ ನೋಡು! ಆ ಬಟ್ಟೆಯನ್ನು ರಿಂಗಿನಲ್ಲಿ ಹಿಂದೆ ಹೇಳಿದಂತೆ ಕೂಡಿಸು! ಚಿತ್ರ ರಿಂಗಿನ ನಡುವೆ ಬರಲಿ; ಅಂದರೆ ಹೆಣೆಯಲು ಅನುಕೂಲವಾಗುವುದು. ಮೊದಲನೆಯ ಸಲ, ಯಂತ್ರದಲ್ಲಿ ಕಸೂತಿ ಹಾಕುವಾಗ, ಕಸೂತಿಯನ್ನು ಹೆಣೆಯಲು ಉಪಯೋಗಿಸುವ ಬಟ್ಟೆ ಅಷ್ಟು ನಯವಾಗಿರುವುದು ಬೇಡ. ಉದಾಹರಣೆಗೆ ಸ್ಯಾಟಿನ್, ಅರ್ಗಂಡಿ ಇತ್ಯಾದಿಗಳು ಬೇಡ. ಕೊಂಚ ಉರುಟಾದ ಸಾದಾ ಬಿಳಿಯ ಬಟ್ಟೆಯೇ ಇರಲಿ. ಬಳಿಕ ಈ ಬಟ್ಟೆಯ ಮೇಲೆ ಮುಡಿಸಿಕೊಂಡ ಎಲೆ, ಹೂ, ಟೊಂಗೆಗಳನ್ನು ಬೇರೆ ಬೇರೆ ಬಣ್ಣದ ರೇಶಿಮೆಯಿಂದ, ಈ ಟಿಬ್ಬಿಯಲ್ಲಿ ಮೂಡಿಸು. ಎಲೆಗಳನ್ನು ಹೂವಿನ ಪಕಳೆಗಳನ್ನು ಡೊಂಕುಡೊಂಕಾಗಿ ಈ ಟಿಬ್ಬಿಯಲ್ಲಿ ತುಂಬಿದರೆ, ಅದೊಂದು ರೀತಿ ಅಂದವಾಗಿಯೇ ಕಾಣುವುದು. ಛಾಯಾಪ್ರಧಾನ (Shaded silk) ವಾದ ಬಣ್ಣದ ರೇಶಿಮೆಯಿಂದ ತುಂಬಿದರಂತೂ ಬಹಳೇ ಅಂದವಾಗಿ ಕಾಣುವುದು. ಛಾಯಾಪ್ರಧಾನವಾದ ಹಸಿರು ರೇಶಿಮೆಯಿಂದ, ಡೊಂಕುಡೊಂಕಾಗಿ ಓಡುವ ಟಿಬ್ಬಿಯಿಂದ ಎಲೆಯನ್ನು ತುಂಬಿ, ನಡುವಿನ ದೇಟನ್ನು, ಎಲೆಯ ಶಿರ-ಉಪಶಿರಗಳನ್ನು, ದಟ್ಟಾದ ಹಸಿರು ಬಣ್ಣದ ರೇಶಿಮೆಯಲ್ಲಿ ತುಂಬಿಬಿಟ್ಟರೆ, ಅದೇ ಚಿಗಿತ ಗಿಡದ ಎಲೆಯೊಂದನ್ನು ಕಿತ್ತು ತಂದು ಹಚ್ಚಿ ಬಿಟ್ಟಂತೆಯೇ ಕಾಣುವುದು. ಎಲೆ, ಹೂ, ಪಕ್ಷಿಗಳಿಂದ ಕೂಡಿದ ಈ ಚಿತ್ರವನ್ನು, ಬಣ್ಣಬಣ್ಣದ ರೇಶಿಮೆಯಲ್ಲಿ ನಯವಾಗಿ ತುಂಬಿ ನೋಡಿಬಿಟ್ಟರೆ, ಮನಸ್ಸಿನ ಬೇಸರವೆಲ್ಲ ತನ್ನಿಂದ ತಾನೆ ಹರಿದು ಹೋಗಿ, ನೆಮ್ಮದಿಯೆನಿಸುವುದು; ಹೆಣೆದ

ಆನಂದವಂತೂ ಸರಿಯೇ ಸರಿ; ಜೊತೆಗೆ ಕಣ್ಣು ತುಂಬ ನೋಡುವ ಆನಂದವೂ ಒಂದು.

ಇದುವರೆಗೆ ಮೇಲೆ ಹಾಕಿದೆಯಲ್ಲ, ಅದೇ ಓಡುವ ಟೆಬ್ಬಿಯನ್ನು ನಾವು ದಿನಾಲು ಹೊಲಿಗೆಗೆ ಉಪಯೋಗಿಸುತ್ತೇವಲ್ಲ, ಅದೇ ಟೆಬ್ಬಿಯೇ ಅದು. ಹೊಲಿಗೆಯಲ್ಲಿ ಒತ್ತಡ ( Pressure bar ) ಈ ಟೆಬ್ಬಿಯನ್ನು ಸರಿಯಾಗಿ ಕೆಡಹುವುದು, ಆದರೆ ಕೈ ಕಸೂತಿಯಲ್ಲಿ ನಿಮ್ಮ ಕೈ ರಿಂಗನ್ನು ಎಷ್ಟು ಚಪಲವಾಗಿ ದಕ್ಷತೆಯಿಂದ ಸರಿಸಾಡುವುದೊ, ಅಷ್ಟು ವೇಗವಾಗಿ ಅಂದವಾಗಿ ಈ ಟೆಬ್ಬಿ ಬೀಳುವುದು. ಇದನ್ನೇ ಇಂಗ್ಲಿಷಿನಲ್ಲಿ 'ರನಿಂಗ್ ಸ್ಟಿಚ್' ( Running Stich ) ಎಂದು ಹೇಳುವರು.


ಸಾಟನ್ ಹೊಲಿಗೆ ಚಿತ್ರ

'ಓಡುವ ಟೆಬ್ಬಿ' ಎಂದರೇನೆಂಬುದು ಈಗ ಗೊತ್ತಾಯಿತಲ್ಲವೇ ? ಯಾವ ಪ್ರಕಾರದ ಚಿತ್ರವನ್ನೇ ಕಸೂತಿಯಲ್ಲಿ ಹೆಣೆಯುವುದಿರಲಿ—ಆ ಚಿತ್ರದ ಎಲೆ-ಹೂಗಳ ಬಾಹ್ಯರೇಷೆಗಳನ್ನು ತುಂಬಲು ಬೇರೆ ಬೇರೆ ಬಣ್ಣದ ದಾರಗಳಲ್ಲಿ, ಈ ಓಡುವ ಟೆಬ್ಬಿಯನ್ನೇ ಉಪಯೋಗಿಸುವರು. ಎಲೆಗಳ ಶಿರಗಳನ್ನು ತುಂಬುವಾಗಲೂ ಹಾಗೆಯೇ. ಅದರಂತೆ 'ಸಿನೇಲ' ಕೆಲಸದಲ್ಲಿ, ಜೋಡಣೆಯ ಕೆಲಸದಲ್ಲಿ, ಇಲ್ಲವೆ ತೂತಿನ ಅಥವಾ ನಯವಾದ ಆರ್ಗಂಡಿಯಂಥ ಬಟ್ಟೆಯ ಮೇಲೆ ರೇಶಿಮೆಯಲ್ಲಿ ಚಿತ್ರವನ್ನು ಮೂಡಿಸಿಕೊಳ್ಳುವುದಿದ್ದಾಗ ಇದೇ ಬಗೆಯ ಓಡುವ ಟೆಬ್ಬಿಯನ್ನುಪಯೋಗಿಸುವರು. ಈ ಟೆಬ್ಬಿಯೂ ಒಂದು ರೀತಿಯಲ್ಲಿ ಅಂದವಾಗಿರುವುದು. ಒಂದೇ ಸಾಲಿಗಿಂತ, ಒಟ್ಟಿಗೇ ಎರಡು ಮೂರು ಈ ಟೆಬ್ಬಿಯ ಎಳೆಗಳನ್ನು ಹಾಕಿದರೆ ದಟ್ಟಾಗಿ ಇನ್ನೂ ಅಂದವಾಗಿ ಕಾಣುವುದು. ಆರ್ಗಂಡಿಯಂಥ ನಯವಾದ ಬಟ್ಟೆಯ ಮೇಲೆ, ಈ ಟೆಬ್ಬಿಯಿಂದ ಬಾಹ್ಯರೇಷೆಗಳನ್ನು ತುಂಬಿದ ಬಳಿಕ ಒಳಗೆ ಎಲೆ, ಹೂಗಳನ್ನು ತುಂಬಲು, ಬೇರೆ ಬೇರೆ ಬಗೆಯ ಟೆಬ್ಬಿಗಳನ್ನು ಉಪಯೋಗಿಸಬಹುದು. ಈ ಓಡುವ ಟೆಬ್ಬಿಯಿಂದಲೇ ಇಡೀ ಎಲೆ-ಹೂವಿನ ಪಕಳಿಗಳನ್ನು ತುಂಬಬೇಕಾದಾಗ ಮಾತ್ರ, ಕೆಳಗಿನ ಬಟ್ಟೆ ಕಾಣಿಸಿ

ದಂತೆ ಟಿಬ್ಬಿಗಳನ್ನು ತೀರ ಹತ್ತಿರ ಹತ್ತಿರ (ಒಂದರ ಮೇಲೊಂದು ಬಿದ್ದು ಏರಿಳಿತಗಳು ಮಾತ್ರ ಆಗಕೂಡದು.) ಒಂದೇ ಸಮನಾಗಿ ಹಾಕಬೇಕು.

ಈ ಟಿಬ್ಬಿಯನ್ನು ಸರಿಯಾಗಿ, ಅಂದವಾಗಿ ಹಾಕುವ ಅಭ್ಯಾಸವಾದರೆ, ಮುಂದೆ ಯಾವ ಟಿಬ್ಬಿಯನ್ನು ಹಾಕುವುದೂ ಕಠಿಣವಾಗಲಾರದು. ಯಂತ್ರ ದಲ್ಲಿ ಮೂಡುವ ಎಲ್ಲ ಟಿಬ್ಬಿಗಳೂ ಈ ಟಿಬ್ಬಿಯ ರೂಪಾಂತರಗಳೇ! ಯಾಕಂದರೆ ಯಂತ್ರದಲ್ಲಿ ಬೀಳುವುದು ಈ ಟಿಬ್ಬಿಯೊಂದೇ. ದುಂಡು ಟಿಬ್ಬಿ, (Round Stitch) ಉದ್ದ ಟಿಬ್ಬಿ (Satin Stitch), ದಾರ ತುಂಬುವುದು (Carding, ಕಾರ್ಡಿಂಗ್), ನೇಯ್ಗೆ ಟಿಬ್ಬಿ (ವೀವ್ಹಿಂಗ್) ಇತ್ಯಾದಿಗಳೆಲ್ಲದರಲ್ಲೂ ಈ ಓಡುವ ಟಿಬ್ಬಿಯೇ ರೂಪಾಂತರವನ್ನು ಹೊಂದಿ ಪ್ರಾಮುಖ್ಯತೆಯನ್ನು ಪಡೆದುದು.

**ಉದ್ದ ಟಿಬ್ಬಿ** (ಲಾಂಗ್ ಸ್ಟಿಚ್, ಸ್ಯಾಟಿನ್ ಸ್ಟಿಚ್)

ಓಡುವ ಟಿಬ್ಬಿಯೇ ಬೆಳೆದು ದೊಡ್ಡದಾದರೆ ಉದ್ದ ಟಿಬ್ಬಿಯಾಗುವುದು. ಬೆಳೆದು ದೊಡ್ಡದಾಗುವುದೆಂದರೆ, ಟಿಬ್ಬಿಯ ಸಾಲು ದೊಡ್ಡದಾಗುವುದಿಲ್ಲ,



ಅಭ್ಯಾಸಕ್ಕಾಗಿ ಕೊಟ್ಟ ಹೂವಿನ ಚಿತ್ರ

ಟಿಬ್ಬಿಯೇ ಉದ್ದುದ್ದಾಗಿ ಬೀಳುವುದು. ಓಡುವ ಟಿಬ್ಬಿಯಲ್ಲಿ ಟಿಬ್ಬಿ ನಿತ್ಯದ ಹೊಲಿಗೆಯಂತೆಯೇ ಹಿಂದುಮುಂದೆ ಬೀಳುವುದು ಆದರೆ ಉದ್ದು ಟಿಬ್ಬಿಯಲ್ಲಿ ಮಾತ್ರ ಹೀಗಲ್ಲ. ಒಂದೇ ಸಮನಾಗಿ ಸಮಾನಾಂತರದಲ್ಲಿ ಟಿಬ್ಬಿ ಬೀಳ

ಬೇಕಾದರೆ ರಿಂಗನ್ನು ಬಹು ಚಾತುರ್ಯದಿಂದ, ದಕ್ಷತೆಯಿಂದ, ಹಿಂದೆ ಮುಂದೆ ಅಷ್ಟೇ ಅಂತರದಲ್ಲಿ ಸೂಜಿ ಬೀಳುವಂತೆ, ಸರಿಸಾಡಲು ಬರಬೇಕು. ಚಿತ್ರದಲ್ಲಿ ತೋರಿಸಿದ್ದು ಬಹಳ ದೊಡ್ಡ ಪ್ರಮಾಣದಲ್ಲಿದೆ. ಇದರ ಅರ್ಧ ಪ್ರಮಾಣದಲ್ಲಿ ಸರಿಯಾಗಿ ತುಂಬಲು ಬಂದರೂ ಸಾಕು. ಹಾಗಾಗದೆ ಒಂದು ಸಲ ಹಿಂದೆ ಒಂದು ಸಲ ಮುಂದೆ ಸೂಜಿ ಬಿದ್ದು, ಒಂದು ಟಿಬ್ಬಿ ದೊಡ್ಡದು ಒಂದು ಟಿಬ್ಬಿ ಸಣ್ಣದು ಆದರೆ, ಕಸೂತಿಯು ಅಂದವೇ ಕೆಟ್ಟುಹೋಗಿಬಿಡುವುದು. ಈಗ ಉದಾಹರಣೆಗೆ ಎಲೆಯೊಂದನ್ನು ಮೇಲಿನ ಆಕೃತಿಯಲ್ಲಿ ತೋರಿಸಿದಂತೆ ಈ ಉದ್ದ ಟಿಬ್ಬಿಯಿಂದ ತುಂಬುವುದಿದೆ ಎಂದಿಟ್ಟುಕೊಳ್ಳೋಣ. ಇಡೀ ಎಲೆಯನ್ನು ಒಟ್ಟಿಗೇ ಉದ್ದ ಟಿಬ್ಬಿಯಿಂದ ತುಂಬುವುದು ಸಾಧ್ಯವೂ ಇಲ್ಲ, ಮತ್ತು ಹಾಗೆ ತುಂಬಿದರೆ ಅದು ಅಂದವಾಗಿಯೂ ಕಾಣಲಾರದು. ಶಿರ, ಉಪಶಿರಗಳಿಂದ ಕೂಡಿದ ಎಲೆಯ ಸೌಂದರ್ಯ ಅದಕ್ಕೆ ಬರಲಾರದು. ಅದಕ್ಕಾಗಿ ಆ ಎಲೆಯಲ್ಲಿ ಅರ್ಧ ಭಾಗಮಾಡಿ, ನಡುವಿನ ಶಿರವನ್ನು ಓಡುವ ಟಿಬ್ಬಿಯಿಂದ ತುಂಬಿ, ಎರಡು ಭಾಗಗಳನ್ನೂ ಉದ್ದ ಟಿಬ್ಬಿಯಿಂದ ತುಂಬಬೇಕಾಗುವದು. ಈ ಉದ್ದ ಟಿಬ್ಬಿಯನ್ನೂ ಶಿರದ ರೇಷೆಗೆ ಕಾಟಕೋನವಾಗಿ ತೆಗೆದುಕೊಳ್ಳದೆ, ಲಘುಕೋನವಾಗಿ ಸಮಾನಾಂತರದಲ್ಲಿ ಸರಿಯಾಗಿ ತುಂಬಿದಲ್ಲಿ, ಎಲೆಯು ಬಹಳೇ ಅಂದಕಾಣುವುದು. ಟಿಬ್ಬಿಗಳ ಅಂತರ ಮಾತ್ರ ಸರಿಯಾಗಿ ಬರದೆ, ಒಂದು ಹಿಂದೆ ಒಂದು ಮುಂದೆ ಬಿದ್ದರೆ, ಎಲೆಯ ಅಂದವೇ ಕೆಟ್ಟುಹೋಗುವುದು. ಅದಕ್ಕಾಗಿ ಈ ಟಿಬ್ಬಿಯನ್ನು ಹಾಕುವ ಅಭ್ಯಾಸ ಮಾಡುವುದು ಒಳ್ಳೆಯದು.

ಅಭ್ಯಾಸಕ್ಕಾಗಿ ಮೇಲೆ ಕೊಟ್ಟ ಚಿತ್ರದಲ್ಲಿ ತೋರಿಸಿದಂತೆ ಎಲೆಯೊಂದನ್ನು ತೆಗೆದುಕೋ. ಬಳಿಕ ಅದರ ಮಧ್ಯದ ಶಿರವನ್ನು ಓಡುವ ಟಿಬ್ಬಿಯಿಂದ ಹಾಕಿ, ಆ ಎಲೆಯಲ್ಲಿ ಸಮವಾದ ಎರಡು ಭಾಗವನ್ನು ಮಾಡು.

ಎಲೆಯಲ್ಲಿ ಎರಡು ಸಮಭಾಗ ಮಾಡಿಕೊಂಡ ಬಳಿಕ ನಡುವಿನ ಶಿರದ ಮೇಲೆಯೂ, ಎಲೆಯ ಒಂದು ಭಾಗದ ಗೆರೆಯ ಮೇಲೆಯೂ ಸಮಾನಾಂತರದಲ್ಲಿ ಚಿಕ್ಕೆಗಳನ್ನಿಡು. ಮೊದಮೊದಲು ಅಭ್ಯಾಸ ಮಾಡುತ್ತಿರುವಾಗ ಈ ಚಿಕ್ಕೆಗಳು ಸ್ವಲ್ಪ ದೂರವಾಗಿದ್ದರೂ ಅಡ್ಡಿಯಿಲ್ಲ; ಬಟ್ಟೆಯನ್ನು ಕಟ್ಟಿನಲ್ಲಿ ಗಟ್ಟಿಯಾಗಿ ಕೂಡಿಸಿ, ಯಂತ್ರದ ಸೂಜಿ ಈ ಸಮಾನಾಂತರದ ಎರಡೂ

ಬದಿಯ ಚಿಕ್ಕೆಗಳಲ್ಲಿ ಸರಿಯಾಗಿ ಬೀಳುವಂತೆ, ಹೆಣೆಯಲು ಪ್ರಯತ್ನವಾಡು. ವೊದವೊದಲು ಸೂಜಿ ಹಿಂದುಮುಂದಾಗಿ, ಎಲೆ ಹೆಣೆದುದು ಅಷ್ಟು ಅಂದ ವಾಗಿ ಕಾಣಲಿಕ್ಕಿಲ್ಲ; ಆದರೆ ರೂಢಿಯಾದಂತೆ, ಸೂಜಿ ತನ್ನಿಂದ ತಾನೇ ಹಿಡಿತದಲ್ಲಿ ಬರುವುದು; ಅಲ್ಲದೆ ವೇಲೆ ಸಮಾನಾಂತರದಲ್ಲಿ ಕೊಟ್ಟ ಚಿಕ್ಕೆ ಗಳನ್ನು ಇನ್ನಷ್ಟು ಸಮೀಪದಲ್ಲಿ, ಸಮನಾಂತರವಾಗಿ ಎರಡೂ ಬದಿಗೆ ಹಾಕಿ, ಸೂಜಿಯನ್ನು ಅಳವಿನಲ್ಲಿಟ್ಟುಕೊಂಡು ಹೆಣೆದರೆ, ಎಲೆ ಬಹಳೇ ಅಂದವಾಗಿ ಕಾಣುವುದು. ಈ ಹೆಣಿಕೆಯ ಟೆಬ್ಬಿಗಳು ವಕ್ರವಾಗಿ ಎಲೆಯ ಉಪಶಿರಗಳ ದಿಕ್ಕಿನಲ್ಲಿಯೇ ಬೀಳುವುದರಿಂದ, ಎಲೆ ತೀರ ನೈಸರ್ಗಿಕವಾಗಿ ಮೂಡಿಬರುವುದು; ಅಲ್ಲದೆ ಪೂರ್ಣ ತುಂಬಿಕೊಂಡು ಅಂದವಾಗಿ ಕಾಣು ವುದು; ಛಾಯಾಪ್ರಧಾನ (Shaded silk) ರೇಶಿಮೆಯ ಮಹತ್ತ್ವ ಓಡುವ ಟೆಬ್ಬಿಯಲ್ಲಿಗಿಂತ ಇಲ್ಲಿ ಹೆಚ್ಚು; ವಿವಿಧ ಬಣ್ಣದ ಹಸುರಿನ ಮೆರುಗಿನಿಂದ ಎಲೆಯೂ, ಗುಲಾಬಿಯ ಐಶ್ವರ್ಯದಿಂದ ಅದೇ ಅರಳಿದ ಹೂವೂ ಯಾರಿಗೆ ತಾನೇ ಸಂತಸವೀಯದು ?

ಈ ಟೆಬ್ಬಿಯನ್ನು ಹೆಣಿಕೆಗಾಗಿ ಉಪಯೋಗಿಸುವಾಗ ಇನ್ನೊಂದು ಮಾತು ನೆನಪಿನಲ್ಲಿಡುವುದು ಅವಶ್ಯ ಈ ಟೆಬ್ಬಿಗಳು ಹತ್ತಿರ ಹತ್ತಿರ ಬೀಳ ಬೇಕೇನೋ ಸರಿ, ಆದರೆ ಒಂದರ ವೇಲೊಂದು ಮಾತ್ರ ಬೀಳಕೂಡದು. ಒಂದರವೇಲೊಂದು ಬಿದ್ದರೆ,—ಹೆಣಿಕೆಯ ನಯವಂತೂ ಸರಿಯೇ ಸರಿ— ಎಲೆಯ ಅಂದವೂ ಮಾಯವಾಗಿ ಬಿಡುವುದು. ಅಲ್ಲದೆ ಇದರಲ್ಲಿಯ ಟೆಬ್ಬಿ ಗಳು ತೀರ ಉದ್ದುದ್ದವಾಗಿದ್ದಲ್ಲಿಯೂ, ಹೆಣಿಕೆ ಅಂದವಾಗಿ ಕಾಣದು; ಅದ ಕ್ಕಾಗಿ ಈ ಟೆಬ್ಬಿ ಯಾವಾಗಲೂ ಕಾಲು ಇಂಚಿಗಿಂತ ದೊಡ್ಡದಾಗದಿರುವುದೇ ಒಳ್ಳೆಯದು; ಇದರಿಂದ ಹೆಣೆಯಲು ಸುಲಭ; ನೋಡಲೂ ಅಂದ. ಈಗ ಎಲೆಯಲ್ಲಿ ಎರಡು ಭಾಗಗಳಾಗಿ ಮಾಡಿ ಹೆಣೆಯದೆ, ಉದ್ದಕ್ಕೂ ಒಂದೇ ಟೆಬ್ಬಿಯಿಂದ ಎಲೆಯನ್ನು ತುಂಬಿದರೆ, ಅದಕ್ಕೆ ಅಂದವೇನು ಬಂತು ? ಎಲೆ ಯನ್ನು ಎರಡುಭಾಗವಾಗಿ ಮಾಡಿ ಛಾಯಾಪ್ರಧಾನವಾದ ರೇಶಿಮೆಯಿಂದ ದಟ್ಟವಾಗಿ ತುಂಬಿದರೆ, ಎಲೆಗೆ ನಿಜವಾಗಿಯೂ ಒಂದು ಅಪೂರ್ವ ಶೋಭೆ ಯುಂಟಾಗುವುದು. ಛಾಯಾಪ್ರಧಾನವಾದ ರೇಶಿಮೆಯಿಲ್ಲದಿದ್ದಾಗ, ಎಲೆಯ

ಬಣ್ಣಕ್ಕೆ ಹೊಂದಿಕೊಳ್ಳುವ ಬೇರೆಬೇರೆ ಹಸಿರು ಬಣ್ಣಗಳನ್ನು ಒಂದರಲ್ಲಿ ಇನ್ನೊಂದು ಕೂಡಿಕೊಳ್ಳುವಂತೆ ಹೆಣೆದು ಕೂಡ ಅಂದವನ್ನು ತರಬಹುದು.

೨ **ಕಾರ್ಡಿಂಗ್** ( Cording=**ದಾರತುಂಬುವುದು** )

ಮೇಲೆ ಹೇಳಿದ ಉದ್ದುಟಿಬ್ಬಿಯಿಂದ ಈ ಹೆಸರು ಬೇರೆಯಾಗಿ ಕಂಡರೂ, ಇವೆರಡೂ ಹೆಣಿಕೆಗಳ ತಳದಲ್ಲಿರುವ ತತ್ತ್ವ ಒಂದೇ. ಉದ್ದುಟಿಬ್ಬಿಯಲ್ಲಿ ಟಿಬ್ಬಿಗಳು ಉದ್ದವಾಗಿ ವಕ್ರವಾಗಿ ಬಂದರೆ, ಈ "ದಾರದ ಟಿಬ್ಬಿ"ಯಲ್ಲಿ ಟಿಬ್ಬಿಗಳು ಅಡ್ಡವಾಗಿ ನಡುವಿನ ರೇಖೆಗೆ ( ಬಹುತರವಾಗಿ ) ಕಾಟಕೋನವಾಗಿಯೇ ಬರುವವು.

ಇನ್ನು ದಾರವನ್ನು ಒಳಗೆ ತುಂಬಿ, ಮೇಲೆ ಅದು ಕಾಣದಂತೆ ಅಡ್ಡಡ್ಡ ಟಿಬ್ಬಿಗಳನ್ನು ಹಾಕುವುದು ಈ ಟಿಬ್ಬಿಯಲ್ಲಿ ಮುಖ್ಯವಾದುದು. ಈ ಒಳಗಿನ ದಾರವು ಕೊಂಚ ದಪ್ಪವಾಗಿದ್ದರೆ, ಒಂದೇ ಎಳೆಯನ್ನೂ ತೆಗೆದುಕೊಳ್ಳಬಹುದು; ಆದರೆ ಎಳೆ ತೆಳುವಾಗಿ ನಯವಾಗಿದ್ದಾಗ ಮಾತ್ರ, ಮೂರುನಾಲ್ಕು ಎಳೆಗಳನ್ನು ಜೋಡಿಸಿ ತೆಗೆದುಕೊಳ್ಳಬೇಕಾಗುವುದು. ಉದಾಹರಣೆಗೆ ನಾವೀಗ ಯಂತ್ರಕ್ಕೆ ಉಪಯೋಗಿಸುವ ದಾರವನ್ನೇ ಈ "ದಾರದ ಟಿಬ್ಬಿ"ಗೆ ಉಪಯೋಗಿಸಿದರೆ, ಅದರ ಮೂರುನಾಲ್ಕು ಎಳೆಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಈ 'ಟಿಬ್ಬಿ'ಯಲ್ಲಿ ದಾರದ ಮೇಲೆ ಟಿಬ್ಬಿಗಳು ಬರುವುದರಿಂದ, ಹೆಣಿಕೆ ಸ್ವಲ್ಪ ಎತ್ತರವಾಗಿ ಎದ್ದು ಕಾಣಿಸುವುದು. ಈ ಹೆಣಿಕೆಯಿಂದ, ದಪ್ಪಾದ ಅಂಚನ್ನು ಆಕೃತಿಯ ಸುತ್ತಲೂ ಮಾಡಿದಂತೆ ಅಂದವಾಗಿ ಕಾಣುವುದು. ಎಲೆ, ಹೂ, ಕಾಯಿಗಳದೇಟನ್ನೂ ಹೂವು ಎಲೆ ಇತ್ಯಾದಿಗಳ ಬಾಹ್ಯರೇಷೆಯನ್ನೂ ಈ ದಾರದ ಟಿಬ್ಬಿಯಿಂದ ತುಂಬಿದಾಗ, ಎತ್ತರವಾಗಿ ತುಂಬಿಬಂದು, ಹೊಸ ಬಗೆಯ ಶೋಭೆಯೇ ಕಂಡುಬರುವುದು; ದೇಟುಗಳಂತೂ ನಯವಾಗಿ ಎದ್ದು ಕಾಣಿಸುವವು; ಎಲೆ ಹೂಗಳ ಬಾಹ್ಯರೇಷೆಗಳಿಗೂ, ಒಳಗಿನ ಹೆಣಿಕೆಗೂ ಪಾತಳಿಯಲ್ಲಿ ಭೇದವಾಗಿ, ಅವು ಎದ್ದು ಕಾಣುವುವು. ಯಾವ ಬಟ್ಟೆಯ ಮೇಲೆ ಬೇಕಾದರೂ ಈ ಹೆಣಿಕೆಯನ್ನು ಉಪಯೋಗಿಸಬಹುದು; ಆದರೆ ಒಳಗೆ ತುಂಬುವ ದಾರ ಮಾತ್ರ ಬಟ್ಟೆಯ ತೂಕಕ್ಕೆ ಸರಿಯಾಗುವಂತಹದಿರಬೇಕು. ಪೋಪ್ಲಿನ್ ಬಟ್ಟೆಯ ಮೇಲೆ, ಒಳಗೆ ತುಂಬಿದ ದಾರ ಕೊಂಚ ದಪ್ಪವಾದರೂ ನಡೆಯುಬಹುದು; ಆದರೆ

ಆರ್ಗಂಡಿಗಳಂತಹ ತಿಳುವಾದ ಬಟ್ಟೆಯ ಮೇಲೆ, ಇಂತಹ ದಾರವನ್ನು ಉಪಯೋಗಿಸಿದರೆ ಪ್ರಮಾಣಬದ್ಧತೆ ತಪ್ಪಿಹೋಗಿ, ಬಟ್ಟೆ ಹೆಣಿಕೆಯ ಭಾರವನ್ನು ತಾಳಲಾರದೆ ಹೋಗುತ್ತದೆ ಅದಕ್ಕಾಗಿ ಅಂತಹ ಬಟ್ಟೆಯ ಮೇಲೆ ಒಳಗೆ ತುಂಬಲೂ ಕೂಡ ತಿಳುವಾದ ದಾರವನ್ನೇ ಉಪಯೋಗಿಸಬೇಕಾಗುತ್ತದೆ. ಈ ದಾರ ತುಂಬುವ ಹೆಣಿಕೆಯನ್ನು, ಪ್ಯಾಚ್ ವರ್ಕ್ (ಜೋಡಣೆಯ ಕೆಲಸ), ಓಪನ್ ವರ್ಕ್ ಇತ್ಯಾದಿಗಳಲ್ಲಿಯೂ ಉಪಯೋಗಿಸಬಹುದು. ಜಾಳಿಗೆಯ ಬಟ್ಟೆಯ ಮೇಲೆ ನಯವಾದ ದಾರವನ್ನು ತುಂಬಿ, ಈ ಹೆಣಿಕೆಯನ್ನು ಹೆಣೆದರಂತೂ ಅದು ಬಹಳ ಅಂದವಾಗಿ ಕಾಣುವುದು. ತೂತಿನ ಬಟ್ಟೆಯಲ್ಲಿ ಹೆಣಿಕೆಗೆ ಹಿನ್ನಲೆ ತೀರ ಸೂಕ್ಷ್ಮವಾಗಿರುವುದರಿಂದ, ಈ ತರದ ಹೆಣಿಕೆ ಸಹಜವಾಗಿಯೇ ಎದ್ದು ಕಾಣುವುದು.




Cording ಆಕೃತಿ, ಪದ್ಧತಿ ಇವುಗಳನ್ನು ತೋರಿಸುವ ರೇಖಾಚಿತ್ರ

ಉದ್ದು ಟಿಬ್ಬಿಯನ್ನು, ವೇಗವಾಗಿ ಹಾಕಲು ಕೈಕೂತಿದ್ದರೆ, ಈ ಹೆಣಿಕೆ ಸುಲಭವಾಗಿಯೇ ಬರುವುದು; ಅಷ್ಟೇನೂ ತೊಂದರೆ ಬೇಕಾಗಿಲ್ಲ. ದಾರ ತುಂಬಿ, ಒಂದರ ಬಳಿಯಲ್ಲೊಂದರಂತೆ ಈ ಹೆಣಿಕೆ ಬಂದರೆ, ಅದು

ಅಷ್ಟೊಂದು ಅಂದವಾಗದು; ಎಲ್ಲಿಲ್ಲಿ ಒಂದೇ ಎಳೆ ಬರಲು ಸಾಧ್ಯವಿದೆಯೋ, ಅಲ್ಲಿಲ್ಲ ಈ ಹೆಣಿಕೆಯನ್ನು ಉಪಯೋಗಿಸಬಹುದು.

ವಕ್ರವಾದಂಥ ಎಲೆ ಹೂಗಳ ದೇಟನ್ನೂ, ಬಾಹ್ಯ ರೇಷೆಯನ್ನೂ, ಒಳಗೆ ದಾರ ತುಂಬಿ ಹೆಣೆಯಲು ಒಮ್ಮೆಲೆ ಬರಲಿಕ್ಕಿಲ್ಲ. ಅಲ್ಲದೆ ಒಳಗೆ ದಾರವನ್ನಿಟ್ಟು ಮೇಲೆ ಹೊಲಿಗೆಯನ್ನು ಹಾಕಿ, ಅದನ್ನು ಬಟ್ಟೆಯ ಮೇಲೆ ಗಟ್ಟಿಯಾಗಿ ಕೂಡಿಸಿಬಿಟ್ಟರೂ ಕೆಲಸ ಮುಗಿದಂತಾಗಲಿಲ್ಲ; ಒಳಗೆ ದಾರವನ್ನು ಆಕೃತಿಗುಂಟ ಇಟ್ಟು, 'ಅ' ದಲ್ಲಿ ತೋರಿಸಿದಂತೆ ಆ ದಾರ ಎಷ್ಟೂ ಕಾಣದಂತೆ ಬಟ್ಟೆಯ ಮೇಲೆ ತೀರ ಹತ್ತಿರ ಹತ್ತಿರದಲ್ಲಿ, ಚಿತ್ರ ತುಂಬಿಕೊಂಡು ಬರುವಂತೆ, ಸಮನಾಗಿ, ಯಂತ್ರದ ಸೂಜಿಯನ್ನು ಅಳವಿನಲ್ಲಿಟ್ಟುಕೊಂಡು ಹಾಕಬೇಕಾಗುತ್ತದೆ. ಅಲ್ಲಲ್ಲಿ ಒಳಗಿನ ಬಿಳೀದಾರ ( ಅಥವಾ ಬಣ್ಣದ ದಾರವಾದರೂ ಸರಿ ) ಹೊರಗೆ ಕಾಣುತ್ತಿದ್ದರೆ, ಕಸೂತಿಯು ನಯವೆಲ್ಲ ಹೋಗಿಬಿಡುವುದು. ಮೇಲಿನ ಹೆಣಿಕೆ ದಟ್ಟವಾಗಿ ಬರುವುದರಿಂದಲೇ ಒಳಗೆ ಯಾವ ಹುರಿಯಾದ ದಾರವನ್ನು ಉಪಯೋಗಿಸಿದರೂ ಸರಿ, ಅದು ಹೊರಗೆ ಕಾಣುವದಿಲ್ಲ. ಇಷ್ಟೊಂದು ನಯವಾಗಿ ಈ ಹೆಣಿಕೆ ಬೀಳಬೇಕಾದರೆ ರೂಢಿಯು ಅವಶ್ಯ.

ಮೊದಲು ರಿಂಗಿನಲ್ಲಿ ಬಟ್ಟೆಯನ್ನು ( ಪೋಪ್ಲಿನ್ ) ಹಿಂದಿನಂತೆಯೇ ಗಟ್ಟಿಯಾಗಿ, ಬಿಗಿಯಾಗಿ ಕೂಡಿಸಬೇಕು. ಬಳಿಕ ಅದರ ಮೇಲೆ ಒಂದು ಸರಳವಾದ ಗೆರೆಯನ್ನೂ ಇನ್ನೊಂದು ಸ್ವಲ್ಪ ದೊಂಕಾದ ಗೆರೆಯನ್ನೂ ಮೂಡಿಸಿಕೊಳ್ಳಬೇಕು. ಇವುಗಳನ್ನು ಪೆನ್ಸಿಲಿನಿಂದ ಅಥವಾ ಓಡುವ ಟಿಬ್ಬಿಯಿಂದ ಮೂಡಿಸಿಕೊಂಡರೂ ಸರಿ. ಬಳಿಕ ಹುರಿಯಾದ ದಾರವನ್ನು ( ದಪ್ಪವಾಗಿದ್ದರೆ ಒಂದೇ ಎಳೆ, ತೆಳುವಾಗಿದ್ದರೆ ಮೂರು ನಾಲ್ಕು ಎಳೆಗಳು ) ತೆಗೆದುಕೊಂಡು, ದಾರದ ತುದಿಯನ್ನು ಮೇಲೆ ಮೂಡಿಸಿದ ಗೆರೆಯೊಂದಿಗೆ ಇಟ್ಟು, ದಾರವನ್ನು ಗಟ್ಟಿಯಾಗಿ ಕೂಡಿಸಿಕೊಳ್ಳಬೇಕು. ಬಳಿಕ ಆ ದಾರವನ್ನು, ಜಗ್ಗಿ ನಮ್ಮ ಕಡೆಗೆ ಹಿಡಿದುಕೊಂಡು, ಆಕೃತಿಯ ಗೆರೆಗುಂಟ ಅದನ್ನಿಟ್ಟು ಹೆಣೆಯುತ್ತ ಹೋಗಬೇಕು. ಯಂತ್ರದ ಸೂಜಿಯು ದಾರದ ಎರಡೂ ಬದಿಗೆ ಸಮಾನಾಂತರವಾಗಿ ಬೀಳುತ್ತಿರಬೇಕು. ರೂಢಿಯಿಲ್ಲದಾಗ, ಸೂಜಿ ಹಿಂದು ಮುಂದೆ ಬಿದ್ದು, ಅಥವಾ ಹೊಂದಿಕೊಂಡು ದಟ್ಟವಾಗಿ ಬೀಳದೆ, ಕಸೂತಿಯು

ಹೆಣಿಕೆ ಅಂದವಾಗಿ ಕಾಣಲಿಕ್ಕಿಲ್ಲ. ಒಳಗಿನ ದಾರ ಹೊರಗೆ ಕಾಣಬಹುದು. ಮೊದಲು ಮೇಲೆ ಹೇಳಿದ ಸರಳರೇಷೆಯ ಮೇಲೆ ಈ ಪ್ರಯೋಗವನ್ನು ಮಾಡಿ, ಬಳಿಕ ವಕ್ರವಾದ ರೇಷೆಯ ಮೇಲೆ ಮಾಡಬೇಕು; ಮೊದಲನೆಯದಕ್ಕಿಂತ ಎರಡನೆಯ ರೇಷೆ ಅಂದವಾಗಿ ಕಾಣುವುದು. ಟಿಬ್ಬಿಗಳೂ ಸರಿಯಾಗಿ ಬೀಳುತ್ತಹೋಗುವುವು. ಸರಳರೇಷೆಗಳ ದಾರತುಂಬುವ ಅಭ್ಯಾಸವಾದಬಳಿಕ, ಆಕೃತಿ ( ಎಲೆ, ಹೂ ಇತ್ಯಾದಿ ) ಗಳ ಬಾಹ್ಯರೇಷೆಗಳನ್ನೂ, ದೇಟನ್ನೂ ತುಂಬಬಹುದು. ಇಲ್ಲಿ ನೆನಪಿಡತಕ್ಕ ಇನ್ನೊಂದು ವಿಷಯವೆಂದರೆ, ಒಳಗಿನ ದಾರವನ್ನು ನಮ್ಮೆಡೆಗೆ ಜಗ್ಗಿಹಿಡಿದುಕೊಂಡಿರುವಾಗ, ಅದನ್ನು ಕಸುವಿನಿಂದ ಬಿಗಿಯಾಗಿ ಹಿಡಿದಿರಕೂಡದು; ಹಾಗೆ ಹಿಡಿದರೆ ಕಸೂತಿ ಮುಗಿದ ಬಳಿಕ ಆ ದಾರ ಅಟ್ಟಿಸಿ, ಕಸೂತಿಯನ್ನು ಹೆಣೆದಲ್ಲಿ ನಿರಿಗೆಗಳು ಬೀಳುವ ಸಂಭವವೂ ಇದೆ. ಇಲ್ಲಿ ಆಕೃತಿಯೊಳಗಿನ ಬಟ್ಟೆಯನ್ನು ಕತ್ತರಿಸಬೇಕಾಗಿಲ್ಲ.

ಯಂತ್ರದ ಕಸೂತಿಯಲ್ಲಿ ಉದ್ದುಟಿಬ್ಬಿ ದಾರದಟಿಬ್ಬಿ, ನೇಯ್ಗೆ ಟಿಬ್ಬಿ ( weaving ) ಇವೆಲ್ಲ ಒಂದೇ ಬಳಗಕ್ಕೆ ಸೇರಿದುವು; ಕೊಂಚ ಹೆಚ್ಚು ಕಡಿಮೆ ಎಲ್ಲವುಗಳ ತತ್ತ್ವವೂ ಒಂದೇ. ಆದರೂ ಇರುವ ಸ್ವಲ್ಪ ಭೇದದಿಂದಲೇ ಮೂರನ್ನೂ ತೀರ ಸ್ಪಷ್ಟವಾಗಿ ಗುರುತಿಸಬಹುದು; ಅಲ್ಲದೆ ಮೂರೂ ಹೆಣಿಕೆಗಳೂ ತಮ್ಮ ತಮ್ಮ ರೀತಿಯಲ್ಲಿ ಅಂದವಾಗಿಯೇ ಕಾಣುವುವು;.



# ಯಂತ್ರದಲ್ಲಿ ಕಸೂತಿಯೇ!

ಎಲೆ, ಹೂಗಳ ಬಾಹ್ಯರೇಷೆಯನ್ನೂ, ದೇಟು, ಎಲೆಗಳ ಶಿರಗಳನ್ನೂ, ದಾರದಿಂದ ತುಂಬಿ, ಅಂದವಾದ ಬಣ್ಣದ ದಾರದಿಂದ (ಕಾರ್ಡಿಂಗ್) ಹೆಣೆದರೆ, ತುಂಬಿದ ಕಸೂತಿ ಎದ್ದು ಕಾಣುವುದಲ್ಲವೇ ? ಹೂವಿನ ಬಾಹ್ಯರೇಷೆಗಳೆಲ್ಲ ಎತ್ತರವಾಗಿ ಮೇಲೆ ಬಂದು, ಒಳಗೆ ಕಸೂತಿಯಿಂದ ತುಂಬಿದ ಪಕಳೆಗಳು ಕೆಳಗಿನ ಪಾತಳಿಯಲ್ಲಿದ್ದರೆ, ಹೂವು ಇನ್ನೂ ಅಂದವಾಗಿ ಕಾಣುವುದಲ್ಲವೇ ? ಈ ಕಾರ್ಡಿಂಗ್ ಪದ್ಧತಿಯ ಟೆಬ್ಬಿಯನ್ನು ಎಲೆ, ಹೂಗಳ ಬಾಹ್ಯರೇಷೆಗಳನ್ನು ತುಂಬಲು ಎಲ್ಲಿ ಬೇಕಾದಲ್ಲಿಯೂ ಉಪಯೋಗಿಸಬಹುದು; ಆದರೆ ಬಟ್ಟೆಯು ಮಾತ್ರ ದಾರದ (ಕಾರ್ಡಿಂಗ್ ದಾರದ) ಭಾರವನ್ನು ತಾಳುವಂತಹದಿರಬೇಕು; ಮತ್ತು ಎಲೆ ಹೂಗಳು ದೊಡ್ಡವಿದ್ದಷ್ಟೂ ಇದಕ್ಕೆ ಅನುಕೂಲ; ಎಲೆ ಹೂಗಳು ಸಣ್ಣವಿದ್ದರೆ, ಅವುಗಳ ಬಾಹ್ಯರೇಷೆಗೂ, ಒಳಗಿನ ಭಾಗಕ್ಕೂ ಹೆಚ್ಚು ಅಂತರವುಳಿಯದೆ, ಪಾತಳಿಯ ಭೇದದ ಮೂಲಕ ತೋರಬಹುದಾದ ಸೌಂದರ್ಯ ಅಷ್ಟೊಂದು ಎದು ಕಾಣಲಾರದು.

### ನೆಯ್ಗೆ ಟೆಬ್ಬಿ (Weaving)

ಇನ್ನು ಬರುವ ನೇಯ್ಗೆ ಟೆಬ್ಬಿಯೂ ಕಾರ್ಡಿಂಗಿನ (ದಾರ ತುಂಬುವುದು) ಜಾತಿಗೇ ಸೇರಿದ್ದು. ಕಾರ್ಡಿಂಗಿನಲ್ಲಿ ಹೆಣೆದ ರೇಷೆ ಮೇಲೆ ಉಬ್ಬಿ ಬರುವುದಕ್ಕಾಗಿ, ಬೇರೆ ದಾರವನ್ನೇ (ಬಟ್ಟೆಯ ಭಾರಕ್ಕನುಸರಿಸಿ) ಉಪಯೋಗಿಸಿದರೆ, ನೇಯ್ಗೆ ಟೆಬ್ಬಿಯಲ್ಲಿ, ಈ ದಾರವನ್ನೂ ಯಂತ್ರದಲ್ಲಿಯೇ ಸಿದ್ಧ ಮಾಡಿಕೊಂಡು, ಕಾರ್ಡಿಂಗಿನಲ್ಲಿ ಮಾಡಿದಂತೆ, ಅದರ ಮೇಲೆ ಉದ್ದಕ್ಕೂ ಎಡದಿಂದ ಬಲಕ್ಕೂ ಬಲದಿಂದ ಎಡಕ್ಕೂ ಅಥವಾ ಮೇಲಿನಿಂದ ಕೆಳಕ್ಕೂ, ಕೆಳಗಿನಿಂದ ಮೇಲಕ್ಕೂ, ದಟ್ಟವಾಗಿ ಟೆಬ್ಬಿಗಳು ಒಂದೇ ಸಾಲಿನಲ್ಲಿ ಬೀಳುವಂತೆ, ಯಂತ್ರದಲ್ಲಿ ಉದ್ದು ಟೆಬ್ಬಿಗಳನ್ನು ಹಾಕಬೇಕು. ಒಳಗೆ ತುಂಬಿದ ದಾರವೆಂದು ನಾವು ಯಂತ್ರದಲ್ಲಿಯೇ ಸಾಲಾಗಿ ಓಡುವ ಟೆಬ್ಬಿ

ಗಳನ್ನು ಹಾಕಬೇಕು. ಒಳಗೆ ತುಂಬಿದ ದಾರವೆಂದು ನಾವು ಯಂತ್ರದಲ್ಲಿಯೇ ಸಾಲಾಗಿ ಓಡುವ ಟಿಬ್ಬಿಯನ್ನು ಹಾಕಿ ( ಮೂರು ನಾಲ್ಕು ಸಾಲು ), ಅದರ ಮೇಲೆ, ಒಳಗಿನ ಈ ಗೆರೆಗಳು ಕಾಣದಂತೆ, ಯಂತ್ರದಲ್ಲಿ ದಟ್ಟವಾಗಿ ಉದ್ದು ಟಿಬ್ಬಿಗಳನ್ನು ಹಾಕುವೆವಲ್ಲವೇ ? ಕಾರ್ಡಿಂಗಿನಲ್ಲಿ ಟಿಬ್ಬಿಗಳನ್ನು ಹಾಕುವ ರೂಢಿಯಾದಮೇಲೆ, ಈ ನೇಯ್ಗೆ ಟಿಬ್ಬಿಯಲ್ಲಿಯೂ ವಿಶೇಷ ತೊಂದರೆ ಯಾಗದು. ಇಲ್ಲದಿದ್ದರೆ ಮಾತ್ರ ಯಂತ್ರದ ಸೂಜಿ ಹಿಂದುಮುಂದೆ ಬಿದ್ದು, ಟಿಬ್ಬಿಗಳು ದಟ್ಟವಾಗಿ ಬೀಳದೆ ಒಳಗಿನ ಓಡುವ ಟಿಬ್ಬಿಯ ಗೆರೆಗಳೂ ಕಾಣ ಬಹುದು. ಈ ಗೆರೆಗಳು ಕಾಣತೊಡಗಿದರೆ ಓಡುವ ಟಿಬ್ಬಿ, ಉದ್ದು ಟಿಬ್ಬಿ ಗಳೆರಡೂ ವಿರುದ್ಧ ದಿಕ್ಕಿನಲ್ಲಿ ಕೂಡಿ, ಕಸೂತಿಯು ಅಷ್ಟೊಂದು ಅಂದವಾಗಿ ಕಾಣಲಾರದು; ಟಿಬ್ಬಿಗಳು ದಟ್ಟವಾಗಿ ಬಂದರೆ ಈ ಹೆಣಿಕೆಯೂ ಅಂದವಾಗಿ ಕಾಣುವುದು.

## ನೇಯ್ಗೆ ಟಿಬ್ಬಿಯನ್ನು ಹಾಕುವ ವಿಧಾನ

ಮೊದಲು ಒಂದು ಒಂದೂವರೆ ಇಂಚು ಉದ್ದಕ್ಕೆ ಓಡುವ ಟಿಬ್ಬಿಯ ಮೂರು ನಾಲ್ಕು ಸಾಲುಗಳನ್ನು, ಒಂದಕ್ಕೊಂದು ಹೊಂದಿಕೊಂಡಿರುವಂತೆ ಹಾಕಬೇಕು, ಈ ಸಾಲುಗಳು ಒಂದರಮೇಲೊಂದು ಬರದೆ, ಒಂದಕ್ಕೆ ಹತ್ತಿ ಇನ್ನೊಂದು ಬರಬೇಕು; ಎಂದರೆ ಗೆರೆ ದಪ್ಪವಾಗುವುದು; ಬಳಿಕ ಆ ಗೆರೆ ಯನ್ನು ಬಲದಿಂದ ಎಡಕ್ಕೆ ( ಅಥವಾ ಎಡದಿಂದ ಬಲಕ್ಕೂ ಸರಿಸಬಹುದು ) ಸರಿಸುತ್ತ, ಯಂತ್ರದಲ್ಲಿ ಉದ್ದು ಟಿಬ್ಬಿಗಳನ್ನು, ಒಂದಕ್ಕೊಂದು ಹೊಂದಿ ಕೊಂಡು ದಟ್ಟವಾಗಿರುವಂತೆ ಹಾಕಬೇಕು. ಟಿಬ್ಬಿಗಳು ಗೆರೆಯ ಮೇಲೆಯೇ ಬೀಳದಂತೆ ಜಾಗರೂಕರಾಗಿರಬೇಕು.

ಈ ಹೆಣಿಕೆ ಕಾರ್ಡಿಂಗಿನಷ್ಟು ಮೇಲೆ ಉಬ್ಬಿಬರದಿದ್ದರೂ, ಸ್ವಲ್ಪೇ ಉಬ್ಬಿಬಂದು ಅಂದವಾಗಿ ಕಾಣುವುದು. ಕಾರ್ಡಿಂಗಿನಲ್ಲಿಯ ಹೆಣಿಕೆ ಎತ್ತರ ವಾಗಿ ಬರುವುದರಿಂದ ಸ್ವಲ್ಪ ದಪ್ಪಾದ ದೇಟುಗಳ, ಸಮೀಪದಲ್ಲಿರುವ ಜೋಡೆಳೆಗಳನ್ನೂ ಒಂದೇ ಸಲಕ್ಕೆ ತುಂಬಲು ಬಾರದು; ಅಂಥಲ್ಲಿ ಈ ನೇಯ್ಗೆಯ ಹೆಣಿಕೆಯನ್ನು, ಉಪಯೋಗಿಸಿದರೆ, ಕೊಂಚ ಅಗಲವಾಗಿ, ಬಹಳ ಅಂದವಾಗಿ ತೋರುವುದು.

ಯಂತ್ರದಲ್ಲಿ ಕಸೂತಿಯನ್ನು ಹೆಣೆಯುವಾಗ, ಯಂತ್ರಕ್ಕೆ ಉಪಯೋಗಿಸುವ ದಾರದ ವಿಷಯವೂ ಬಹಳ ಮಹತ್ತ್ವದ್ದು. ಬಣ್ಣದ ದಾರ ಮೇಲೆಯಷ್ಟೇ ಬರುವುದರಿಂದ, ಕೆಳಗೆ ಬಿಳಿಯ ದಾರವನ್ನು ಕೂಡ ಉಪಯೋಗಿಸಬಹುದು. ಆದರೆ ಕೆಳಗಿನ ಬಿಳಿಯ ದಾರ ಮೇಲೆ ಬರದಂತೆ, ಒತ್ತಡ (ಟೆನ್‌ಶನ್) ವನ್ನು ಮಾತ್ರ ಹಿಂದೆ ಹೇಳಿದಂತೆ ಸರಿಯಾಗಿಟ್ಟಿರಬೇಕು. ಅಷ್ಟೊಂದು ನಯವಲ್ಲದ ಬಟ್ಟೆಯ ಮೇಲೆ, ಉದಾಹರಣೆಗೆ ಪಾಪ್ಲಿನ್ ಬಟ್ಟೆಯ ಮೇಲೆ ಕಸೂತಿಯನ್ನು ತೆಗೆಯುವಾಗ, ಮೇಲೆ ೮೦ ನಂಬರಿನ ದಾರವನ್ನೂ ಕೆಳಗೆ ೬೦ ನಂಬರಿನ ದಾರವನ್ನೂ ಉಪಯೋಗಿಸಬಹುದು; ಬಟ್ಟೆ ನಯವಾದಂತೆ ದಾರದ ಸಂಖ್ಯೆಯೂ ಏರುತ್ತ ಹೋಗಬಹುದು. ಆದರೆ ಕಸೂತಿಯನ್ನು ಹೆಣೆಯುವ ರೂಢಿಯಾಗುವ ವರೆಗೆ ಈ ದಾರವನ್ನು ಉಪಯೋಗಿಸಲು ಏನೂ ಅಡ್ಡಿಯಿಲ್ಲ. ಪಾಪ್ಲಿನ್‌ನಂತಹ ಬಟ್ಟೆಯಿದ್ದಾಗ ಸೂಜಿಯಾದರೂ ೧೪ ನಂಬರಿನದಿದ್ದರೆ ನಡೆಯುವುದು; ತೆಳುವಾದ ಬಟ್ಟೆಯ ಮೇಲೆ ಮಾತ್ರ ಈ ಸೂಜಿಯನ್ನುಪಯೋಗಿಸಿದರೆ, ಬಟ್ಟೆಗೆ ತೂತು ಬೀಳುವುವು; ಆಗ '೯' ನಂಬರಿನ ಸೂಜಿಯನ್ನು ಉಪಯೋಗಿಸುವುದೇ ಒಳ್ಳೆಯದು.

**೪ ದುಂಡು ಟಿಬ್ಬಿ** ( Round Stitch )

ಇದುವರೆಗೆ ಹೇಳಿದ ಟಿಬ್ಬಿ-ಹೆಣಿಕೆಗಳೆಲ್ಲ ಓಡುವ ಟಿಬ್ಬಿಯ ಬಳಗದುವೇ; ಅವೆಲ್ಲ ಸ್ವಲ್ಪ ಹೆಚ್ಚುಕಡಿಮೆ ಒಂದೇ ಮಾದರಿಯವು. ದುಂಡು ಟಿಬ್ಬಿಯೂ ಅಷ್ಟೇ; ಆದರೆ ಅದರ ಗತಿಯ ದಿಕ್ಕು ಮಾತ್ರ ಭಿನ್ನವಾಗುತ್ತದೆ. ಯಂತ್ರದಲ್ಲಿ ಬೀಳುವುದು ಟಿಬ್ಬಿಯೊಂದೇ ಆದ್ದರಿಂದ, ಇದೂ ಕೂಡ ಆ ಸಾಮಾನ್ಯ ಟಿಬ್ಬಿಯಿಂದಲೇ ಹುಟ್ಟಿದ್ದು.

ಈ ಟಿಬ್ಬಿ ಉಳಿದೆಲ್ಲ ಟಿಬ್ಬಿಗಳಿಗಿಂತ ಸುಲಭ; ಒಂದೇಸಮನಾಗಿ ಸಮಾನಾಂತರದಲ್ಲಿ ಟಿಬ್ಬಿಗಳು ಬೀಳಬೇಕೆಂಬ ನಿಯಮವೇನೂ ಇದಕ್ಕಿಲ್ಲ; ಒಂದು ಸಲ ಟಿಬ್ಬಿಗಳ ವರ್ತುಲ ದೊಡ್ಡದೂ ಆಗಬಹುದು, ಒಂದು ಸಲ ಸಣ್ಣದೂ ಆಗಬಹುದು; ಹೇಗಾದರೂ ಮಾಡಿ ಆ ಎಲ್ಲ ಸ್ಥಳವನ್ನು ಈ ಟಿಬ್ಬಿಯಿಂದ ತುಂಬಿಬಿಟ್ಟರೆ ಆಯಿತು; ಮೊದಲಿಗೆ ಟಿಬ್ಬಿಯ ವರ್ತುಳ ದೊಡ್ಡದಾದರೆ, ಅದರೊಳಗೆ ಮತ್ತೆ ಸಣ್ಣ ವರ್ತುಳಗಳನ್ನು ಮಾಡಲೂಬಹುದು. ಆದರೆ ಇದರಲ್ಲಿ ಮುಖ್ಯವಾಗಿ, ರಾಟೆ ತಿರುಗಿದಂತೆ, ರಿಂಗನ್ನು ದುಂಡು



ದುಂಡಾಗಿ ತಿರುಗಿಸುವ ರೂಢಿ ಬೇಕಾಗುವುದು; ಹಾಗೆ ರಿಂಗನ್ನು ತಿರುಗಿಸಲು ಬಾರದೆ ಅದು ಒಂದೆಡೆಯಲ್ಲಿಯೇ ನಿಂತುಬಿಟ್ಟರೆ, ಅಲ್ಲಿ ದೊಡ್ಡ ಗಂಟೇ ಆಗಿ ಬಿಡುವುದು. ಅದಕ್ಕೆಂದು ಮೊದಲು ಸ್ವಲ್ಪ ದೂರದೂರವಾದರೂ ಚಿಂತೆ ಯಿಲ್ಲ. ದೊಡ್ಡ ವರ್ತುಳಗಳಾದರೂ ತೊಂದರೆಯಿಲ್ಲ, ರಿಂಗನ್ನು ದುಂಡು ದುಂಡಾಗಿ ತಿರುಗಿಸಲು ಕಲಿಯಬೇಕು.

**ದುಂಡುಟಿಬ್ಬಿಯನ್ನು ಹಾಕುವ ವಿಧಾನ :** ಉರುಟಾದ ಬಟ್ಟೆಯ ತುಂಡೊಂದನ್ನು ರಿಂಗಿನಲ್ಲಿ ಬಿಗಿಯಾಗಿ ಕೂಡಿಸಿ, ಯಂತ್ರದ ಸೂಜಿಯ ಕೆಳಗೆ ಕೂಡಿಸಬೇಕು. ಬಳಿಕ ಮೇಲಿನ ದಾರವು ಸಡಿಲಾಗಿರುವಂತೆ, ಅದರ ಮೇಲಿನ ಒತ್ತಡವನ್ನು ಕಡಿಮೆಮಾಡಿ, ಒತ್ತಡದ ಕುದುರೆಯನ್ನು ಕೆಳಗಿಳಿಸಿ, ರಿಂಗನ್ನು ದುಂಡುದುಂಡಾಗಿ ಸರಿಸುತ್ತ ಹೋಗಬೇಕು; ಯಂತ್ರವನ್ನು ಹಿಡಿತದಲ್ಲಿಟ್ಟು ಕೊಂಡು, ರಿಂಗನ್ನು ಸರಿಸುವುದರ ಕಡೆಗೇ ಹೆಚ್ಚು ಲಕ್ಷ್ಯಕೊಡಬೇಕು. ವರ್ತುಲಗಳು ಒಂದಕ್ಕೊಂದು ಹೊಂದಿಕೊಂಡಿರುವುದಂತೂ ಸರಿ, ಆದರೆ ಅವು ಸಣ್ಣವಾದಷ್ಟು ಕಸೂತಿ ಅಂದವಾಗಿ ಕಾಣುವುದು.

ಈ ಹೆಣಿಕೆಗೆ ಸ್ವಲ್ಪ ದುಂಡಾದ—ತುಂಬಿಬರುವ, ಮೇಲೆ ಆರಿಸಿದಂತಹ ಆಕೃತಿಗಳನ್ನೇ ಆರಿಸುವುದು ಒಳ್ಳೆಯದು; ಅಥವಾ ಅಂತಹ ಆಕೃತಿಗಳನ್ನು ತುಂಬುವುದಾದರೆ ಈ ಹೆಣಿಕೆಯನ್ನೇ ಉಪಯೋಗಿಸಿದರೆ ಅಂದವಾಗಿ ಕಾಣುವುದು. ವಿಶೇಷವಾಗಿ ಹಣ್ಣುಗಳನ್ನು ತುಂಬಲು ಈ ದುಂಡು ಟಿಬ್ಬಿಯ ಉಪಯೋಗ ಬಹಳವಾಗುವುದು; ಟಿಬ್ಬಿ ದುಂಡುದುಂಡಾಗಿ ದಟ್ಟವಾಗಿ ಬರುವುದರಿಂದ, ಹಣ್ಣುಗಳೂ ದುಂಡಾಗಿ ತುಂಬಿಕೊಂಡಂತೆ ಕಾಣುವುವು. ಅಲ್ಲದೆ ಈ ದುಂಡುಟಿಬ್ಬಿಯ ಮೂಲಕ, ಆ ತುಂಬುವ ಸ್ಥಳದಲ್ಲಿಯ ಏರಿಳಿತಗಳನ್ನೂ ತೋರಿಸಲು ಬರುವುದು. ಛಾಯಾಪ್ರಧಾನವಾದ ರೇಶಿಮೆಯಿಂದ ದುಂಡುಟಿಬ್ಬಿಯಲ್ಲಿ ಹಣ್ಣನ್ನು ತುಂಬಿದರೆ, ಹಣ್ಣಿನಲ್ಲಿರಬಹುದಾದ ಭಿನ್ನ ಭಿನ್ನ ಬಣ್ಣಗಳನ್ನು ಕೂಡ ಸ್ಪಷ್ಟವಾಗಿ ಗುರುತಿಸಬಹುದು. ಛಾಯಾಪ್ರಧಾನ ರೇಶಿಮೆ ಇಲ್ಲದಾಗ, ಯಾವ ಸ್ಥಳದಲ್ಲಿ ಭಿನ್ನ ಬಣ್ಣವನ್ನು ತರುವುದಿದೆಯೋ, ಆಸ್ಥಳದಲ್ಲಿ ದುಂಡುಟಿಬ್ಬಿಗಳನ್ನು ಸ್ವಲ್ಪ ವಿರಳವಾಗಿ (ದೂರದಲ್ಲಿ) ತೆಗೆದುಕೊಂಡು, ಉಳಿದ ಸ್ಥಳಗಳನ್ನು ಇನ್ನೊಂದು ಬಣ್ಣದ ದುಂಡುಟಿಬ್ಬಿಗಳಿಂದ ತುಂಬಬಹುದು. ಆಗಲೂ ಕಸೂತಿ ಅಂದ ಕಾಣುವುದು. ಹೂವುಗಳನ್ನು ತುಂಬಲೂ ದುಂಡು ಟಿಬ್ಬಿಯನ್ನು ಉಪಯೋಗಿಸುವದುಂಟು; ಆದರೆ ಈ ಟಿಬ್ಬಿಗಳು ಸಂಪೂರ್ಣ ವರ್ತುಲಾಕಾರದಲ್ಲಿದ್ದರೆ ಕಸೂತಿ ಅಷ್ಟೊಂದು ಚೆಂದವಾಗುವದಿಲ್ಲ; ಅದಕ್ಕಾಗಿ ದುಂಡುಟಿಬ್ಬಿಯನ್ನು ಉದ್ದುದ್ದಾಗಿ ತೆಗೆದುಕೊಂಡರೆ—ಹೂವಿನ ಪಕಳೆಗಳೂ ಅಂದವಾಗಿ ತುಂಬಿಕೊಂಡತೆ ಕಾಣುವವು.



# ಆಯಲೆಟ್ ವರ್ಕ

ಈ ಕಸೂತಿಯಾದರೂ ಕಟ್ ವರ್ಕಿನ ಜಾತಿಯದೇ ಆದರೆ ಇದರಲ್ಲಿ ಕಸೂತಿಯ ಚಿತ್ರವನ್ನಾರಿಸುವಾಗ ಸ್ವಲ್ಪ ಲಕ್ಷ್ಯಕೊಡಬೇಕಾಗುತ್ತದೆ. ಕಟ್ ವರ್ಕಿನಲ್ಲಿ ಡಿಝಾಯಿನು ದೊಡ್ಡದಿದ್ದಷ್ಟು, ಬಟ್ಟೆಯ ಒಳಭಾಗವನ್ನು ಕತ್ತರಿಸಲು ಅನುಕೂಲವಾಗುತ್ತದೆ. ಆದರೆ ಇದರಲ್ಲಿ ಹಾಗಲ್ಲ; ಆಯಲೆಟ್ ಕಸೂತಿ ನಯವಾಗಿ ರಿಪ್ಪೆಸಹಿತ ಕಣ್ಣಿನಂತೆ ಚೆಂದವಾಗಿರುತ್ತದೆ.




ಈ ಕಸೂತಿಯಲ್ಲಿ ಬರುವ ಡಿಝಾಯಿನಿನ ಸಣ್ಣ ಭಾಗಗಳು ಸ್ವಲ್ಪ ಉದ್ದವಾಗಿರಲೂ ಬಹುದು. ಇಲ್ಲವೆ ದುಂಡು ಕೂಡ ಆಗಿರಬಹುದು. ಇದರಲ್ಲಿ ಬಟ್ಟೆಯ ಒಳಭಾಗವನ್ನು ಕತ್ತರಿಸಲು, ನಯವಾದ ಕಸೂತಿಯ ಕತ್ತರಿಯನ್ನು ಉಪಯೋಗಿಸುವೆವಾದರೂ, ಅದರಿಂದ ಅಷ್ಟು ಚೆನ್ನಾಗಿ ಬರಲಿಕ್ಕಿಲ್ಲ

ಎಂದು, ‘ ಸ್ಟಿಲೆಟೋ ’ ಎಂಬ ಯಂತ್ರದ ಸಹಾಯದಿಂದ ಕೂಡ ಕತ್ತರಿಸ ಬಹುದು. ಈ ಯಂತ್ರದಿಂದ ಕತ್ತರಿಸಿ ಝೀಗರ್ಝಾಗ ಯಂತ್ರದಲ್ಲಿ ದುಂಡಗೆ ಸಾಟಿನ್ ಹೊಲಿಗೆಯಂತಹ ಹೊಲಿಗೆಯನ್ನು ಹಾಕಿಬಿಡುವುದೂ ಉಂಟು. ಆದರೆ ಹೊಲಿಗೆಯ ಯಂತ್ರದಲ್ಲಿಯೇ ಈ ಕಸೂತಿಯನ್ನು ಮಾಡುವದಾದರೆ, ಮೇಲಿನ ಆಕೃತಿಯಲ್ಲಿ ತೋರಿಸಿದಂತಹ ಡಿಝಾಯಿನನ್ನು ಹುಡಕಬೇಕು. ಬಳಿಕ ಈ ಡಿಝಾಯಿನು ನಡುವೆ ಬರುವಂತೆ, ಬಟ್ಟೆಯನ್ನು ರಿಂಗಿನಲ್ಲಿ ಕೂಡಿಸಬೇಕು. ಮೊದಲು ಯಾವುದೇ ಒಂದು ಸಣ್ಣಭಾಗದ ಬಾಹ್ಯರೇಷೆ ಯನ್ನು ಓಡುವ ಟಿಬ್ಬಿಯಿಂದ ಎರಡು ಸಲ ತುಂಬಿಕೊಳ್ಳಬೇಕು. ಅಲ್ಲಿಂದ ಆ ಡಿಝಾಯಿನಿನ ಭಾಗದ ಒಳಗಿನ ಬಟ್ಟೆಯನ್ನು, ನಯವಾದ ಕತ್ತರಿಯಿಂದ ಕತ್ತ ರಿಸಿ ಬಿಡಬೇಕು.ಆದಷ್ಟುಮಟ್ಟಿಗೆ ಗುಂಜು ಏಳದಂತೆ ನೋಡಿಕೊಳ್ಳಬೇಕು. ಆಮೇಲೆ, ಈ ಬಾಹ್ಯರೇಷೆಯನ್ನು ಸಾಟಿನ್ ಹೊಲಿಗೆಯಿಂದ ಗಟ್ಟಿಮಾಡಿ ಕೊಳ್ಳಬೇಕು. ಇಲ್ಲಿ ನೇಯ್ಗೆ ( ವೀವ್ಹಿಂಗ್ ) ಹೊಲಿಗೆಯನ್ನು ಒಟ್ಟಿಸಲ್ಲಿ ಹಾಕಿದಂತಾಯಿತು. ದಾರವನ್ನಿಟ್ಟು ಕಾರ್ಡಿಂಗನ್ನೂ ಮಾಡಬಹುದು ಅದೂ ಅಂದವಾಗಿರುವದು.

ಒಳಗಿನ ಬಟ್ಟೆಯನ್ನು ಕತ್ತರಿಸಿದ ಮೇಲೆ, ಮತ್ತೆ ಸಾಟಿನ್ ಹೊಲಿಗೆ ಯನ್ನು ಹಾಕಲು ಹೋದರೆ ಇಲ್ಲವೆ ಕಾರ್ಡಿಂಗ್ ಮಾಡಲು ಹೋದರೆ, ಬಟ್ಟೆ ತಿರುವಿ, ಮುದುಡಿಕೊಳ್ಳುವ ಸಂಭವವೂ ಇದೆ. ಅದಕ್ಕಾಗಿ ಮೊದಲೇ ಬಟ್ಟೆಯನ್ನು ರಿಂಗಿನಲ್ಲಿ ಕೂಡಿಸುವಾಗ, ಕೆಳಗೆ ದಪ್ಪವಾದ ಕಾಗದವನ್ನಿಟ್ಟು ಕೂಡಿಸುವದು ಒಳ್ಳೆಯದು. ಆ ಮೇಲೆ ಬಾಹ್ಯರೇಷೆಯನ್ನು ತುಂಬಿ ಒಳ ಭಾಗವನ್ನು ಕತ್ತರಿಸುವಾಗ ಕೆಳಗಿನ ಕಾಗದವನ್ನು ಮಾತ್ರ ಕತ್ತರಿಸಕೂಡದು. ಅಂದರೆ ಮತ್ತೆ ಸಾಟಿನ್ ಹೊಲಿಗೆ ಹಾಕಿ ಗಟ್ಟಿಯಾಗಿರಿಸಲು, ಆಧಾರ ದೊರೆತು, ಆ ಎರಡನೆಯ ಹೊಲಿಗೆ ಅಂದವಾಗಿ ಬೀಳುವದು.

ಈ ಬಗೆಯ ಡಿಝಾಯಿನನ್ನು ಮೊದಲು ಪ್ರಾರಂಭ ಮಾಡುವಾಗ ಸ್ವಲ್ಪೇ ವಕ್ರವಾದ ಡಿಝಾಯಿನನ್ನು ತೆಗೆದುಕೊಂಡು, ‘ ಅ ’ದಲ್ಲಿ ತೋರಿಸಿ ದಂತೆ, ಬಳಿಕ ವರ್ತುಲಾಕಾರದ ಡಿಝಾಯಿನನ್ನು ತೆಗೆದುಕೊಂಡರೂ ಅಡ್ಡಿ ಯಿಲ್ಲ. ಡಿಝಾಯಿನಿನ ಭಾಗಮುಗಿದಾಗ ಆ ದಾರವನ್ನು ಅಲ್ಲಿಯೇ ಕತ್ತರಿಸಿ ಅದರ ತುದಿಯ ಗುಂಜು ಕಾಣದಂತೆ ಮೇಲೆ ಮತ್ತೊಮ್ಮೆ ಹೊಲಿಗೆ ಹಾಕಿ

ಗಟ್ಟಿಯಾಗಿ ಮಾಡಬಹುದು. ದಾರವನ್ನಿಟ್ಟು ಕಾರ್ಡಿಂಗಿನಂತೆ ಮೇಲೆ ಹೊಲಿಗೆ ಹಾಕುವಾಗ ನಡುನಡುವೆ ಆ ದಾರ ಕಾಣದಂತೆ ಮಾತ್ರ ಎಚ್ಚರಿಕೆ ತೆಗೆದುಕೊಳ್ಳಬೇಕು.

ಈ ಬಗೆಯ ಡಿಝಾಯಿನನ್ನು ಟೇಬಲ್ ಕ್ಲಾಥಿನ ಮೂಲೆಯಲ್ಲೂ, ರೇಡಿಯೋ ಕವ್ಹರ, ಲೋಕೇಸ್, ಬಾಗಿಲು ಪಡದೆಗಳ ಮೂಲೆಯಲ್ಲೂ ತೆಗೆಯಬಹುದು.

ಇದನ್ನು ಹಾಕಲು ಮೇಲಿನ ದಾರ ೬೦ ನಂಬರಿನದೂ, ಕೆಳಗಿನದು ೪೦ ನಂಬರಿನದೂ ಇದ್ದರೆ ಸಾಕು. ಸೂಜಿ ೧೪ ನಂಬರಿನದಿದ್ದರೂ ನಡೆಯುವದು. ಆದರೆ ಮೇಲಿನ ದಾರದ ಮೇಲಿನ ಬಿಗಿತ (ಟೆನ್ಶನ್) ಮಾತ್ರ ಸಡಿಲವಾಗಿರಬೇಕು. ಕೆಳಗಿನದು ಸಾಧಾರಣ.



## ಪ್ರಕರಣ ೩

# ವಿಶಿಷ್ಟ ಕಸೂತಿಗಳು

### **'ಎಳೆಹೆಣೆದ ಕಸೂತಿ'** ( Drawn thread )

ಕೆಳಗೆ ಜಾಳಿಗೆಯ ಬಟ್ಟೆಯನ್ನಿಟ್ಟು ಮಾಡಿದಂತಹ 'ಅಪ್ಲೀಕ್ ವರ್ಕ್,' ಜಾಳಿಗೆಯ ಮೇಲೆಯೇ ತುಂಬಿದ ಕಸೂತಿಯನ್ನು ಹೆಣೆದಂತೆ ಕಾಣುತ್ತದಲ್ಲವೆ ? ಈಗ ಅಷ್ಟೇ ಅಂದವಾಗಿ ಕಾಣುವ ಇನ್ನೊಂದು ಬಗೆಯ ಕಸೂತಿಯನ್ನು ನೋಡೋಣ. ಇದು ನೋಡಲು ತುಂಬಾ ಕಠಿಣವಾಗಿ ಕಾಣಿಸಿದರೂ, ತುಂಬಲು ಸುಲಭವಾಗಿದೆ; ಅಲ್ಲದೆ ಅಂದವಾಗಿಯೂ ಇದೆ. ಇದೇ "ಎಳೆಹೆಣೆದ ಕಸೂತಿ" ( ಅಥವಾ Drawn thread ). ಇದನ್ನು 'ಕತ್ತರಿಸಿದ ಕಸೂತಿ' ಎಂತಲೂ ಹೇಳಬಹುದು; ಇದರಲ್ಲಿ ಕತ್ತರಿಸುವುದೂ ಇದೆ; ಬಳಿಕ ಎಳೆ ಜೋಡಿಸುವುದೂ ಇದೆ. ಅದಕ್ಕಾಗಿ ಇವೆರಡರಲ್ಲಿ ಯಾವ ಹೆಸರಿನಿಂದಲೂ ಇವನ್ನು ಕರೆಯಬಹುದು; ಎರಡರಲ್ಲಿಯೂ ವಿವಿಧ ಪ್ರಕಾರಗಳಿವೆ; ಆ ಪ್ರಕಾರಗಳಲ್ಲಿ ಇದೊಂದು. ಕತ್ತರಿಸುವುದಕ್ಕಿಂತ ಎಳೆ ಜೋಡಿಸುವಲ್ಲಿಯೇ ಹೆಚ್ಚು ಜಾಣತನವೂ, ವಿವಿಧ ಬಗೆಗಳೂ ಇದ್ದುದರಿಂದ, ಇದನ್ನು ಸದ್ಯಕ್ಕಂತೂ **'ಎಳೆಹೆಣೆದ ಕಸೂತಿ'** ಎಂದೇ ಕರೆಯೋಣ.

ಈ ತೆರದ ಕಸೂತಿಯಿಂದ ವಿವಿಧ ಬಗೆಯ 'ಲೇಸು'ಗಳನ್ನು ತುಂಬಬಹುದು; ಟೇಬಲ್ ಕ್ಲಾಥ್, ವಸ್ತ್ರ, ಬಾಗಿಲಿಗೆಳೆಯುವ ಪಡದೆ—ಇವುಗಳ ಅಂಚನ್ನು ಅಂದವಾಗಿ ಹೆಣೆಯಬಹುದು. ಈ ಬಗೆಯ ಕಸೂತಿ ಮಾತ್ರ ತುಂಬಾ ನಾಜೂಕಾಗಿ ಕಾಣುವುದು; ಎಳೆಗಳಲ್ಲಿಯೇ ಕಸೂತಿ ಮೂಡಬೇಕಾದ್ದರಿಂದ, ಇದು ಅಷ್ಟೊಂದು ನಾಜೂಕಾಗಿ ಕಾಣುವುದು ಸರಿಯೇ. ಬಟ್ಟೆಯ ಮೇಲೆ ಯಾವ ಭಾಗದಲ್ಲಿ ಕಸೂತಿಯನ್ನು ಹೆಣೆಯುವುದಿದೆಯೋ ಅಷ್ಟೊಂದು ಭಾಗವನ್ನು ಪ್ರಮಾಣಬದ್ಧವಾದ ವಿಶಿಷ್ಟ ಆಕೃತಿಯಲ್ಲಿ ಕತ್ತರಿಸಿ, ಬಳಿಕ ಈ ತೆರವಿನಲ್ಲಿ, ಎಳೆಗಳನ್ನು ಪ್ರಮಾಣಬದ್ಧವಾದ ವಿಶಿಷ್ಟ ಆಕೃತಿಯಲ್ಲಿ

ಕತ್ತರಿಸಿ, ಬಳಿಕ ಈ ತೆರವಿನಲ್ಲಿ, ಎಳೆಗಳನ್ನು ಪ್ರಮಾಣಬದ್ಧವಾದ ರೀತಿಯಲ್ಲಿ ಜೋಡಿಸಿಕೊಂಡು, ಬಣ್ಣದ ದಾರದಿಂದ ಯಂತ್ರದಲ್ಲಿ ಹೆಣೆಯುವುದಿರುತ್ತದೆ. ಬಳಿಕ ಈ ಎಳೆಗಳನ್ನು ಅನೇಕ ರೀತಿಯಲ್ಲಿ ಜೋಡಿಸಿಕೊಳ್ಳಬಹುದು. ಪ್ರಮಾಣಬದ್ಧವಾದ ರಂಗೋಲಿಗಳ ಅಥವಾ ಭೂಮಿತಿಯ ಜ್ಞಾನವಿದ್ದರೆ, ಈ ಕಸೂತಿಯಲ್ಲಿರುವ ಮುಖ್ಯ ತತ್ತ್ವ, ಈ ಬಗೆಯ ಒಂದೆರಡು ಕಸೂತಿಗಳನ್ನು ತುಂಬುವಷ್ಟರಲ್ಲಿಯೇ ಹೊಳೆದುಬಿಡುವುದು. ಹೆಣೆಯುವ ಸೂಜಿಯಿಂದ ಅನೇಕಬಗೆಯ ಹೂವುಗಳನ್ನೂ, ಎಲೆ, ದೇಟುಗಳನ್ನೂ ಹೆಣೆಯಬಹುದಾದಂತೆ, ಯಂತ್ರದಲ್ಲಿ ಬಟ್ಟೆಯ ಕೆಲ ಭಾಗವನ್ನು ಕತ್ತರಿಸಿ, ಅಷ್ಟೇ ಅಂದವಾಗಿ, ನಯವಾಗಿ ಹೆಣೆಯಬಹುದು.

ಈ 'ಎಳೆಹೆಣೆದ ಕಸೂತಿ'ಯನ್ನು ತಿಳಿದುಕೊಳ್ಳಲು ಮೊದಲು ಒಂದು ಸುಲಭವಾದ ರೀತಿಯನ್ನು ನೋಡೋಣ. ಇದಕ್ಕಾಗಿ ಮೊದಲು ಕಟ್ಟಿಗೆಯ ಸಣ್ಣ ರಿಂಗಿನಲ್ಲಿ ಬಿಗಿಯಾಗಿ ಕೂಡುವಂತಹ ಬಟ್ಟೆಯ ಒಂದು ಚೌಕು ತುಂಡನ್ನು ತೆಗೆದುಕೊಂಡು, ರಿಂಗಿನಲ್ಲಿ ಬಿಗಿಯಾಗಿ ಕೂಡಿಸಬೇಕು. ಅದರ ಮಧ್ಯದಲ್ಲಿ ಸುಮಾರು ಮೂರು ಇಂಚು ಉದ್ದ ಮತ್ತು ಅಷ್ಟೇ ಅಗಲವಿರುವ ಒಂದು ಚೌಕೋನವನ್ನು ಪೇನ್ಸಿಲ್ಲಿನಿಂದ ಗುರುತುಮಾಡಿಕೊಳ್ಳಬೇಕು. ಬಳಿಕ ಅದರ ನಾಲ್ಕೂಬದಿಗೆ, ಈ ಗುರುತುಹಾಕಿದ ಗೆರೆಯಿಂದ ಮೇಲೆ ಒಂದರ್ಧ ಇಂಚು ತೆಗೆದುಕೊಂಡು, ಯಂತ್ರದಲ್ಲಿಯೇ ಓಡುವ ಟಿಬ್ಬಿಯನ್ನು ಹಾಕಬೇಕು; ಗಟ್ಟಿಯಾಗುವುದಕ್ಕಾಗಿ ಟಿಬ್ಬಿಯನ್ನು ಎರಡು ಸಾಲು ಹಾಕಿದರೂ ಅಡ್ಡಿಯಿಲ್ಲ. ಬಳಿಕ ಪೆನ್ಸಿಲ್ಲಿನಿಂದ ಗುರುತು ಹಾಕಿದ ಚೌಕೋನ ಬಟ್ಟೆಯನ್ನು ಚೂಪಾದ ಕತ್ತರಿಯಿಂದ ಕತ್ತರಿಸಿಬಿಡಬೇಕು. ಮೊದುಲ ಚೌಕೋನದ ಮೂರೇ ಭಾಗಗಳನ್ನು ಕತ್ತರಿಸಿ, ಅರಿವೆಯನ್ನು ನಾಲ್ಕನೆಯ ಬದಿಗೆ ಹೊರಳಿಸಿಬಿಟ್ಟು ಆ ಮೇಲೆ ಕತ್ತರಿಸಿದರೂ ಅಡ್ಡಿಯಿಲ್ಲ. ಇನ್ನು ಈ ಚೌಕೋನದಲ್ಲಿಯ ಸ್ಥಳ ತೆರವಾಯಿತಲ್ಲವೇ ? ಈ ಸ್ಥಳದಲ್ಲಿ—ಅರ್ಧ ಇಂಚಿನ ಮೇಲೆ ಟಿಬ್ಬಿಯನ್ನು ಹಾಕಿದೆಯಲ್ಲ ! ನಾಲ್ಕೂ ಬದಿಗೆ—ಆ ಟಿಬ್ಬಿಯ ಸಾಲಿನಿಂಡ ಕೆಳಗಿನ ಟಿಬ್ಬಿಯ ಸಾಲಿನ ವರೆಗೆ—ಲಂಬವಾಗಿ (ಕಾಟಕೋನವಾಗುವಂತೆ ) ಗೆರೆಯನ್ನು ದಾರದಿಂದ ಯಂತ್ರದಲ್ಲಿ ಹೊಡೆಯಬೇಕು. ಎಂದರೆ ಮೇಲಿನ ಟಿಬ್ಬಿಯಿಂದ ಕೆಳಗಿನ ಟಿಬ್ಬಿಯ ಸಾಲಿನವರೆಗೆ,

ಮುರಿಗೆ ಮುರಿಗೆಯಾದ ಇನ್ನೊಂದು ಟಿಬ್ಬಿಯ ಸಾಲೇ ಬೀಳುವುದು. ಈ ಟಿಬ್ಬಿಯ ಸಾಲು ತೆರವುಬಿಟ್ಟ ಸ್ಥಳದೊಳಗಿಂದಲೇ ಹಾಯ್ದು ಬರುವುದ. ಈ ತೆರವುಬಿಟ್ಟ ಸ್ಥಳದಲ್ಲಿ ಮೇಲಿನ ಟಿಬ್ಬಿ ಕೆಳಗಿನ ಟಿಬ್ಬಿಗಳೆರಡೂ ಹೆಣೆದು ಕೊಂಡುಬರುವುದರಿಂದ, ಟಿಬ್ಬಿಯು ಮುರಿಗೆಮುರಿಗೆಯಾಗಿ ಕಾಣುವುದು. ಇಲ್ಲಿ ಲಕ್ಷ್ಯದಲ್ಲಿಡತಕ್ಕ ಇನ್ನೊಂದು ಮಹತ್ವದ ಮಾತೆಂದರೆ, ಯಂತ್ರದಲ್ಲಿ ಕೆಳಗಿನ ಮತ್ತು ಮೇಲಿನ ದಾರಗಳೆರಡೂ ಇಲ್ಲಿ ಒಂದೇ ಬಣ್ಣದುವಾಗಿರ ಬೇಕಾಗುವುದು.

ಕೆಳಗಿನ ಟಿಬ್ಬಿಯ ಸಾಲಿಗೆ ಲಂಬವಾಗಿ ಹಾಕಿದ ಈ ಟಿಬ್ಬಿಯು ಗೆರಿ ಯಂತೆ ಇದಕ್ಕೆ ಸಮಾನಾಂತರವಾಗಿ (ಅಷ್ಟಷ್ಟೆ ಅಂತರದಲ್ಲಿ) ಟಿಬ್ಬಿಯ ಸಾಲು ಗಳನ್ನು ಈ ಚೌಕೋನದ ಕೊನೆಯವರೆಗೂ ಹಾಕಬೇಕು. ಬಳಿಕ ರಿಂಗನ್ನು



ಎಳೆ ಹೆಣೆದ ಟಿಬ್ಬಿಯ ಮಾದರಿ

ಹೊರಳಿಸಿ, ಅಥವಾ ಎಡದಿಂದ ಬಲಕ್ಕೆ ಮತ್ತೆ ಟೆಬ್ಬಿಯ ಸಾಲುಗಳನ್ನು ಮೊದಲಿನಂತೆಯೇ ಹಾಕಿ, ಈ ದೊಡ್ಡ ಚೌಕೋನದಲ್ಲಿ ಅನೇಕ ಸಣ್ಣ ಸಣ್ಣ ಚೌಕೋನಗಳನ್ನು ಮಾಡಬೇಕು. ಈ ಚೌಕೋನಗಳನ್ನು ಮಾಡುವುದು ಮುಗಿದ ಬಳಿಕ, ಯಂತ್ರದಲ್ಲಿ ಮತ್ತೊಂದು ಬಣ್ಣದ ದಾರವನ್ನು ಹಾಕಿ, ಎರಡು ದಾರಗಳು ಕೂಡುವಲ್ಲಿ ಅಥವಾ ಕತ್ತರಿ ಗುರುತಿನ ಮಧ್ಯದ ಬಿಂದುವನ್ನು ರಂಗೋಲಿಯಲ್ಲಿ ಕಮಲವನ್ನು ತೆಗೆಯುವಾಗ ಎಳೆಗಳನ್ನು ಹಾಕುವಂತೆ ಎಳೆಗಳನ್ನು ಹಾಕಿ, ವರ್ತುಲಾಕಾರವಾಗಿ ತುಂಬಿಬಿಡಬೇಕು. ಹೀಗೆ ಮಾಡುವುದರಿಂದ ಚೌಕೋನಗಳಲ್ಲಿಯ ದಾರಗಳು ಗಟ್ಟಿಯಾಗಿ, ಚೌಕೋನದ ಆಕಾರವು ಸರಿಯಾಗಿ ಉಳಿಯುವುದು. ಮತ್ತು ಬಣ್ಣದ ದಾರದಿಂದ ತುಂಬಿಕೊಂಡ ಮಧ್ಯದ ಬಿಂದುಗಳಿಂದ ಅವುಗಳ ಅಂದವು ಹೆಚ್ಚಾಗಿ, ಕಸೂತಿಯು ಅಂದವಾಗಿ ಕಾಣುವುದು. ಇಷ್ಟೊಂದು ಮಾಡಿದ ಬಳಿಕ, ಒಟ್ಟಿನಲ್ಲಿಯೇ ಎಲಿಗಳನ್ನು ಮತ್ತು ಕಸೂತಿಯ ಕಟ್ಟಡವನ್ನು ಭದ್ರವಾಗಿರಿಸಲು ಸುತ್ತಲೂ (ನಾಲ್ಕೂ ಬದಿಗೆ) ಕಾರ್ಡಿಂಗ್ ಮಾಡಿಬಿಡಬೇಕು. ಎಂದರೆ ಹೆಣಿಕೆ ಗಟ್ಟಿಯಾಗುವುದು.

ಕಸೂತಿಯಲ್ಲಿ ಇದೊಂದು ಸುಲಭ ರೀತಿ; ಮೇಲೆ ತೋರುವ ಆಕೃತಿಯಲ್ಲಿ ಕಂಡುಬರುವುದು ಇನ್ನೊಂದು ರೀತಿ. ಒಂದೆರಡು ರೀತಿಗಳು ತಿಳಿದರೆ ಅದೆಷ್ಟೋ ರೀತಿಗಳನ್ನು ಕಲ್ಪಿಸಿ ಹೆಣೆಯಬಹುದು. ಇಲ್ಲಿ ಮೇಲೆ ಹೇಳಿದಂತೆಯೇ ನಾಲ್ಕೂ ಬದಿಗೆ ಟೆಬ್ಬಿಯ ಸಾಲುಗಳನ್ನು ಹಾಕಿಕೊಂಡು, ಒಳಗಿನ ಬಟ್ಟೆಯ ಚೌಕೋನಾಕಾರದ ತುಂಡನ್ನು ಕತ್ತರಿಸಿ ಸ್ಥಳವನ್ನು ತೆರವು ಮಾಡಿಕೊಳ್ಳಬೇಕು. ಬಳಿಕ ಆ ತೆರವಾದ ಚೌಕೋನದ ಮೂಲೆಯಿಂದ ಮೂಲೆಗೆ ಆಕೃತಿಯಲ್ಲಿ ತೋರಿಸಿದಂತೆ ಮೊದಲು ಟೆಬ್ಬಿಗಳನ್ನು ಹಾಕಿಕೊಳ್ಳಬೇಕು.

ಇವನ್ನೆಲ್ಲ ತುಂಬಿಕೊಂಡ ಬಳಿಕ, ಮೂಲೆಯಲ್ಲಿ ದಾರಗಳನ್ನೆಲ್ಲ ಹೆಣೆದುಕೊಳ್ಳಬೇಕು. ಒಂದು ದಾರವನ್ನು ಒಂದು ಟೆಬ್ಬಿಯಿಂದ ಸುತ್ತುತ್ತ ಐದು ದಾರಗಳನ್ನು ಸುತ್ತಿಕೊಳ್ಳಬೇಕು. ಹೀಗೆ ಮೂರು ಅಥವಾ ಐದು ಟೆಬ್ಬಿಗಳನ್ನು ಐದು ದಾರಗಳಿಗೂ ಹಾಕಿದ ಬಳಿಕ, ಕೊನೆಯವೆರಡು ದಾರಗಳನ್ನು ಬಿಟ್ಟುಕೊಟ್ಟು ನಡುವಿನ ಮೂರನ್ನೇ ಮೇಲೆ ಹೆಣೆದಂತೆಯೇ ಹೆಣೆದುಕೊಳ್ಳಬೇಕು. ಮೂರು ದಾರಗಳ ಸುತ್ತಲೂ ಟೆಬ್ಬಿಗಳನ್ನು ಹಾಕುತ್ತ ಮೂರು ಸಾಲಾದ ಬಳಿಕ ನಿಲ್ಲಿಸಿ ಒಂದೇ ದಾರಕ್ಕೆ ಎರಡು ಸಲ ಹಾಕಿ

ಮುಗಿಸಿ ಬಿಡಬೇಕು. ಆ ಮೇಲೆ ಉಳಿದ ಮೂರು ಮೂಲೆಗಳನ್ನಾದರೂ ಇದೇ ರೀತಿಯಾಗಿ ತುಂಬಿಕೊಳ್ಳಬೇಕು. ಎಲ್ಲ ಮೂಲೆಗಳನ್ನೂ ನಡುವಿನ ಬಿಂದುಗಳನ್ನೂ ತುಂಬಿದ ಬಳಿಕ, ಕಸೂತಿಯ ಈ ಕಟ್ಟಡವನ್ನು ಗಟ್ಟಿಯಾಗಿರಿಸುವುದಕ್ಕಾಗಿ ಸುತ್ತಲೂ ' ಕಾರ್ಡಿಂಗ್ ' ಮಾಡಬೇಕು

ದಾರಗಳನ್ನು ಈ ಆಕಾರದಲ್ಲಿ ಪ್ರಮಾಣಬದ್ಧವಾಗಿ ಹಾಕಿದಂತೆ ಇನ್ನಾವ ಆಕಾರದಲ್ಲಿ ಸಹ ಪ್ರಮಾಣಬದ್ಧವಾಗಿ ಹಾಕಿ ಹೆಣೆಯಬಹುದು.

ಬಟ್ಟೆಯಲ್ಲಿ ಸ್ಥಳವನ್ನು ಮಾಡಿಕೊಂಡು ಜಾಳಿಗೆಯನ್ನು ಮಾಡಿ ಕಸೂತಿಯನ್ನು ಹೆಣೆಯುವುದು ಮೇಲೆ ಹೇಳಿದ ರೀತಿ. ಇನ್ನು ಜಾಳಿಗೆಯ ಬಟ್ಟೆಯ ಮೇಲೆಯೇ ಮನೆ ಎಣಿಸಿ (ದುಂಡು ಮನೆಗಳಿದ್ದರೆ ಕಸೂತಿ ಒಂದು ವಿಧವಾಗಿರುವುದು; ಮನೆಗಳು ಚೌಕಾಗಿದ್ದರೆ ಇನ್ನೊಂದು ವಿಧವಾಗಿರುವುದು.) ಹಾಕುವುದು ಇನ್ನೊಂದು ವಿಧ. ಜಾಳಿಗೆಯ ಬಟ್ಟೆಯನ್ನು ತೆಗೆದುಕೊಂಡು ಅದರ ಮೇಲೆ ಯಾವ ಚಿತ್ರವನ್ನು ಮೂಡಿಸಬೇಕಾಗಿದೆಯೋ ಆ ಚಿತ್ರದ ಬಿರುಸಾದ ಕಾಗದವನ್ನು ಜಾಳಿಗೆಯ ಬಟ್ಟೆಯ ಕೆಳಗೆ, ನಡುವೆ ಬರುವಂತಿಟ್ಟು, ಎರಡನ್ನೂ ಬಿಗಿಯಾಗುವಂತೆ ರಿಂಗಿನಲ್ಲಿ ಕೂಡಿಸಬೇಕು. ಬಳಿಕ ಓಡುವ ಟೆಬ್ಬಿಯಿಂದ ಮೊದಲು ಆಕೃತಿಯ ಬಾಹ್ಯ ರೇಷೆಯನ್ನಷ್ಟು ಮೂಡಿಸಿಕೊಳ್ಳಬೇಕು. ಆ ಮೇಲೆ ಕೆಳಗಿನ ಕಾಗದವನ್ನು ಹರಿದೊಗೆದು, ಮನೆಗಳನ್ನೆಣಿಸಿಕೊಂಡು, ಒಳಗಿನ ಚಿತ್ರವನ್ನು ತುಂಬಬಹುದು; ಅಥವಾ ಬಿಗಿಯಾಗಿರುವುದಕ್ಕಾಗಿ ಕೆಳಗಿನ ಕಾಗದವನ್ನು ಹಾಗೆಯೇ ಕೂಡ ಇಟ್ಟಿರಬಹುದು.

ಇನ್ನು ಈ ಜಾಳಿಗೆಯ ಬಟ್ಟೆಯ ಮೇಲೆ ಮನೆಗಳು ಚೌಕಾಗಿದ್ದರೆ, ಅಲ್ಲಿ ಕತ್ತರಿ ಹೊಲಿಗೆ ಅಂದವಾಗಿ ಕಾಣುವುದು. ಮೇಲೆ ಹೇಳಿದಂತೆ ಕೆಳಗೆ ಕಾಗದವನ್ನಿಟ್ಟೂ ಇಲ್ಲಿ ಮಾಡಬಹುದು; ಇದಲ್ಲದೆ ಇನ್ನೂ ಒಂದು ವಿಧ ಇದರಲ್ಲಿದೆ. ಈ ಜಾಳಿಗೆಯ ಬಟ್ಟೆಯ ಸಹಾಯದಿಂದ ಬೇರೊಂದು ಬಟ್ಟೆಯ ಮೇಲೆ ಕತ್ತರಿ ಹೊಲಿಗೆಯನ್ನು ಹಾಕಿ, ಚಿತ್ರವನ್ನು ತುಂಬಬಹುದು. ಇದನ್ನು ಮಾಡಲು, ಕೆಳಗೆ ಯಾವ ಬಟ್ಟೆಯ ಮೇಲೆ ಕಸೂತಿಯನ್ನು ಹಾಕುವುದಿದೆಯೋ ಆ ಬಟ್ಟೆಯನ್ನೂ, ಮೇಲೆ ಜಾಳಿಗೆಯ ಬಟ್ಟೆಯನ್ನೂ ಇಟ್ಟು, ರಿಂಗಿನಲ್ಲಿ ಬಿಗಿಯಾಗಿ ಕೂಡಿಸಿ, ಜಾಳಿಗೆಯ ಬಟ್ಟೆಯ ಮೇಲೆ ಕತ್ತರಿ ಹೊಲಿಗೆ

ಯಿಂದ ಚಿತ್ರವನ್ನೆಲ್ಲ ತುಂಬಿಕೊಳ್ಳಬೇಕು. ಬಳಿಕ ಜಾಳಿಗೆ ಬಟ್ಟೆಯಲ್ಲಿಯ ಉದ್ದ ಎಳೆಗಳನ್ನೂ ಅಡ್ಡ ಎಳೆಗಳನ್ನೂ ತೆಗೆದುಬಿಟ್ಟರೆ, ಕೆಳಗಿನ ಬಟ್ಟೆಯ ಮೇಲೆಯೇ ಕಸೂತಿ ಮೂಡಿರುವುದು; ಅಡ್ಡ, ಉದ್ದ ಎಳೆಗಳಲ್ಲಿ ಒಂದನ್ನು ತೆಗೆದು ಇನ್ನೊಂದನ್ನು ಹಾಗೇ ಇಟ್ಟರೂ ಕಸೂತಿ ಮತ್ತೊಂದು ವಿಧದಲ್ಲಿ ಅಂದವಾಗಿ ಕಾಣುವುದು. ಅಂತೂ ಈ 'ಎಳೆ ಹೆಣೆದ ಕಸೂತಿಯಲ್ಲಿ' ಅನೇಕ ಅಂದವಾದ ರೀತಿಗಳನ್ನು ಕಲ್ಪಿಸಬಹುದು.



# ಅಪ್ಲೀಕ್ ವರ್ಕ (ಜಾಳಿಗೆಯ ಕಸೂತಿ)

ಇದುವರೆಗೆ ಓಡುವ ಟಿಬ್ಬಿ, ದುಂಡು ಟಿಬ್ಬಿ, ಉದ್ದು ಟಿಬ್ಬಿ—ಇವೇ ಮೊದಲಾಗಿ ಅನೇಕ ಬಗೆಯ ಟಿಬ್ಬಿಗಳನ್ನು ನೋಡಿದೆವಲ್ಲವೇ ? ಇವುಗಳಿಗೆ 'ಟಿಬ್ಬಿ' ಎಂದು ನಾವು ಹೇಳುವುದಾದರೂ, ಇವುಗಳನ್ನು ಒಂದರಿಂದ ಇನ್ನೊಂದನ್ನು ಬೇರೆಯಾಗಿ ತಿಳಿದುಕೊಳ್ಳಲಿಕ್ಕೆ—ಅಷ್ಟೇ. ಇಲ್ಲದಿದ್ದರೆ ಯಂತ್ರದಲ್ಲಿ ಬೀಳುವ ಟಿಬ್ಬಿಯೊಂದೇ. ಅದನ್ನೇ ವಿವಿಧ ರೀತಿಯಲ್ಲಿ ಉಪಯೋಗಿಸಿ, ಬೇರೆ ಬೇರೆ 'ಟಿಬ್ಬಿ'ಗಳೆಂದು, ನಮ್ಮ ಅನುಕೂಲತೆಗಾಗಿ ಕರೆಯುತ್ತೇವೆ.



ಇನ್ನು ಈ ಬೇರೆ ಬೇರೆ ಟಿಬ್ಬಿಗಳನ್ನು ಎಲ್ಲಿ ಉಪಯೋಗಿಸಬೇಕು ? ಎಲ್ಲಿ ಉಪಯೋಗಿಸಿದರೆ ಅವು ಅಂದವಾಗಿ ಕಾಣುವವು ? ಇನ್ನೂ ಯಾವ ವಸ್ತುಗಳ ಜೊತೆಗೆ ಈ ಟಿಬ್ಬಿಗಳು ಬಂದರೆ, ಮೂಡುವ ಕಸೂತಿಗೆ ಕಳೆ

ಕಟ್ಟುವುದು ? ಬೇರೆ ಬೇರೆ ಬಗೆಯ ಕಸೂತಿಯನ್ನು ಹೆಣೆಯಲು ಸಾಮಾನ್ಯ ವಾಗಿ ಯಾವ ವಸ್ತುಗಳನ್ನು ಉಪಯೋಗಿಸಬಹುದು ?—ಎಂಬುದನ್ನು ನೋಡೋಣ.

ಕೊಟ್ಟ ಚಿತ್ರವನ್ನು ಯಾವುದೇ ಒಂದು ಬಟ್ಟೆಯ ಮೇಲೆ ಮೂಡಿಸಿ ಕೊಂಡು, ಅದರಲ್ಲಿಯ ವಿವಿಧ ಭಾಗಗಳನ್ನು, ಎಂತಹ ರೇಶಿಮೆಯಿಂದ ತುಂಬುವುದು ? ಯಾವ ತರದ ಟಿಬ್ಬಿಗಳನ್ನು ಉಪಯೋಗಿಸುವುದು....ಅಂದರೆ ಕಸೂತಿ ಅರಳಿದಂತೆ ಕಾಣುವುದು ? ಹಸಿರು ಎಲೆಗಳು, ಗುಲಾಬಿ ಹೂಗಳು ತುಂಬಿಕೊಂಡಂತೆ ಕಾಣುವುವು ?–ಇವುಗಳನ್ನೆಲ್ಲ ಆಕೃತಿ ಸಹಿತವಾಗಿ ಹಿಂದೆ ವಿವರಿಸಿದ್ದಾಗಿದೆ. ಈಗ ಕಸೂತಿಯ ವಿವಿಧ ಬಗೆಗಳಲ್ಲಿ ಒಂದಾದ 'ಜಾಳಿ ಗೆಯ ಕಸೂತಿ,' ಎಂದರೇನೆಂಬದನ್ನು ನೋಡೋಣ.



**'ಜಾಳಿಗೆಯ ಕಸೂತಿ,'** ಎಂದರೆ ಜಾಳಿಗೆಯ ಮೇಲೆ ತೆಗೆಯುವ ಕಸೂತಿಯೋ ? ಅಥವಾ ಕಸೂತಿಯಿಂದ ಜಾಳಿಗೆಯನ್ನುಂಟು ಮಾಡಬೇಕೆ ಬಟ್ಟೆಯ ಮೇಲೆ ? 'ಜಾಳಿಗೆಯ ಕಸೂತಿ 'ಗೆ ಬೇರೆ ಜಾಳಿಗೆಯ ಬಟ್ಟೆಯನ್ನೇ ಉಪಯೋಗಿಸಬೇಕೇ ? ಅಥವಾ ಬಟ್ಟೆಯಲ್ಲಿಯೇ ಕೆಲ ಭಾಗವನ್ನು ಕತ್ತರಿಸಿ ಜಾಳಿಗೆಯಂತೆ ಉಪಯೋಗಿಸಿಕೊಳ್ಳಬಹುದೇ ? ಈ ಎಲ್ಲ ರೀತಿಯನ್ನೂ

ಉಪಯೋಗಿಸಿ ಕಸೂತಿಯನ್ನು ತುಂಬಬಹುದು ಒಂದೊಂದು ರೀತಿಯಲ್ಲಿ ತುಂಬಿದರೂ ಒಂದೊಂದು ತರದ ಅಂದಕಾಣುವುದು. ಈ ಒಂದೊಂದು ರೀತಿಗೂ ಒಂದೊಂದು ಹೆಸರನ್ನು ಕೂಡ ಇಡಬಹುದು. ಹೀಗೆ ಬೇರೆ ಬೇರೆ ಹೆಸರುಗಳನ್ನಿಟ್ಟು ಈ "ಜಾಳಿಗೆಯ ಕಸೂತಿ'ಯಲ್ಲಿ ಭಾಗಮಾಡಬಹುದಾದ (ಅ) **ಅಪ್ಲೀಕ್ ವರ್ಕ್** ( ಬಟ್ಟೆಯ ಕೆಳಗೆ ಜಾಳಿಗೆಯ ಬಟ್ಟೆಯನ್ನಿಟ್ಟು ತೆಗೆದ ಕಸೂತಿ ) (ಬ) **ಜಾಳಿಗೆಯ ಕಸೂತಿ** ( ಜಾಳಿಗೆಯ ಮೇಲೆಯೇ ತೆಗೆದ ಕಸೂತಿ ) (ಕ) **ಎಳೆತೆಗೆದ ಕಸೂತಿ** ಎಂದು ವಿಭಾಗಗಳನ್ನು ಮಾಡ ಬಹುದು. ಕತ್ತರಿಸಿದ ಕಸೂತಿಯನ್ನೂ ಕೂಡ ಇದರಲ್ಲಿಯೇ ಸೇರಿಸಿ ಹೇಳ ಬಹುದು.

'ಅಪ್ಲೀಕ್,' ಎಂದರೆ ಒಂದು ಬಟ್ಟೆಗೆ ಇನ್ನೊಂದು ಬಟ್ಟೆಯ ತುಂಡನ್ನು ಜೋಡಿಸಿ ಮಾಡುವಂತಹ ಕಸೂತಿ ಎಂದರೆ ಇದು ಜೋಡಣೆಯ ಕಸೂತಿ ( ಪ್ಯಾಚ್ ವರ್ಕ್ ) ಯಲ್ಲಿ ಬಟ್ಟೆಯ ತುಂಡುಗಳನ್ನು ಆಕೃತಿಯ ಮೇಲೆ, ಕಸೂತಿಯನ್ನು ತುಂಬಬೇಕಾದ ಚಿತ್ರಕ್ಕೆ ಸರಿಯಾಗಿ ಹೊಂದಿಕೊಳ್ಳು ವಂತೆ, ಕೂಡಿಸಬೇಕಾಗುತ್ತದೆ; ಆದರೆ, "ಅಪ್ಲೀಕ್ ವರ್ಕ್'ನಲ್ಲಿ ಬೇರೆ ಬಗೆಯ ಬಟ್ಟೆಯ ತುಂಡನ್ನು ಉಪಯೋಗಿಸುವುದಕ್ಕಿಂತ, ಬಹುತರವಾಗಿ ಜಾಳಿಗೆಯ ಬಟ್ಟೆಯನ್ನೇ ಉಪಯೋಗಿಸುವರು. ಈ ಜಾಳಿಗೆಯ ಬಟ್ಟೆಯ ಹಿನ್ನೆಲೆಯಲ್ಲಿಯೇ ವಿವಿಧ ಬಣ್ಣಗಳ ಮೆರುಗಿನ ರೇಶಿಮೆಯಿಂದ ತುಂಬಿ ಕೊಂಡ ಪಕ್ಷಿ, ಹೂ, ಎಲೆಗಳು, ಹವೆಯಲ್ಲಿ ಹಾರಾಡುತ್ತಿದ್ದಂತೆ ಅಂದವಾಗಿ ಕಾಣುವುವು.

ಈ 'ಕಸೂತಿ'ಯಲ್ಲಿ, ಯಾವ ಬಟ್ಟೆಯ ಮೇಲೆ ಕಸೂತಿಯನ್ನು ತೆಗೆ ಯುವುದಿದೆಯೋ, ಅದರ ಮೇಲೆ ಮೊದಲು ಪೇನ್ಸಿಲ್ಲಿನಿಂದ ಆ ಆಕೃತಿಯನ್ನು ಮೂಡಿಸಿಕೊಳ್ಳಬೇಕು. ಬಳಿಕ ಆ ಇಡೀ ಆಕೃತಿಗಿಂತ, ಸುತ್ತಲೂ ಒಂದೆ ರಡು ಇಂಚಿನಿಂದ ದೊಡ್ಡದಾದ ಜಾಳಿಗೆಯ ಬಟ್ಟೆಯ ತುಂಡೊಂದನ್ನು ತೆಗೆದುಕೊಂಡು, ಈ ಜಾಳಿಗೆಯ ತುಂಡನ್ನು ಕೆಳಗಿಟ್ಟು, ಅದರ ಮೇಲೆ ಕಸೂತಿಯನ್ನು ತುಂಬಬೇಕಾದ ಬಟ್ಟೆಯ ಭಾಗವನ್ನಿಟ್ಟು, ಎರಡನ್ನೂ ಬಿಗಿ ಯಾಗಿ ರಿಂಗಿನಲ್ಲಿ ಕೂಡಿಸಬೇಕು. ಕೆಳಗೆ ಕೂಡಿಸಿದ ಜಾಳಿಗೆಯ ಬಟ್ಟೆ ಬಿಗಿ ಯಾಗಿ ಕೂತಿರದಿದ್ದರೆ, ನಿರಿಗೆನಿರಿಗೆಯಾಗಿ ಕಸೂತಿಯ ಅಂದವೇ ಕೆಟ್ಟು

ಹೋಗುವುದು. ಅದಕ್ಕಾಗಿ ಲಕ್ಷ್ಯಪೂರ್ವಕವಾಗಿ ಎರಡನ್ನೂ ರಿಂಗಿನಲ್ಲಿ ಬಿಗಿಯಾಗಿ ಕೂಡಿಸತಕ್ಕದ್ದು. ಬಳಿಕ ಮೇಲಿನ ಬಟ್ಟೆಯ ಮೇಲೆ, ಆಕೃತಿಯ ಆಯಾ ಭಾಗಗಳನ್ನು ( ಆ ಭಾಗಗಳ ಬಾಹ್ಯರೇಷೆಗಳನ್ನು ಮಾತ್ರ )—ಅವುಗಳಿಗೆ ಯೋಗ್ಯವಾದ ಬಣ್ಣದ ರೇಶಿಮೆಯಿಂದ ತುಂಬಿಕೊಳ್ಳಬೇಕು. ಓಡುವ ಟೆಬ್ಬಿಯ ಎರಡು ಸಾಲುಗಳಿಂದ ಇವುಗಳ ಬಾಹ್ಯರೇಷೆಯನ್ನೂ ತುಂಬಿಕೊಳ್ಳಬಹುದು. ಆದರೆ ಎಲೆಗಳ ಬಾಹ್ಯರೇಷೆಯನ್ನು ಹಸಿರು ಬಣ್ಣದಿಂದಲೂ, ದೇಟಿನ ಬಾಹ್ಯರೇಷೆಯನ್ನು ಕಂದುಬಣ್ಣದಿಂದಲೂ, ಹೂಗಳ ಬಾಹ್ಯರೇಷೆಯನ್ನು ಅವವುಗಳಿಗೆ ಯೋಗ್ಯವೆನಿಸಿದ ಬಣ್ಣದಿಂದಲೂ ತುಂಬಿದರೆ, ಬಳಿಕ ಪೂರ್ಣವಾಗಿ ಕಸೂತಿಯನ್ನು ತುಂಬಿದ ಮೇಲೂ, ಬಣ್ಣಗಳ ಸರಿಯಾದ ಬೆರಕೆಯಿಂದ ಕಸೂತಿ ಚೆನ್ನಾಗಿ ಕಾಣುವುದು.

ಬಳಿಕ ಆಕೃತಿಯ ಆಯಾ ಭಾಗಗಳನ್ನೆಲ್ಲ ಬಾಹ್ಯರೇಷೆಗಳಿಂದ ತುಂಬಿದ ಬಳಿಕ, ಆ ಆ ಸ್ಥಳಗಳಲ್ಲಿ, ಕೆಳಗಿನ ಜಾಳಿಗೆಯ ಬಟ್ಟೆಯೂ ಅಲುಗಾಡದಂತೆ ಮೇಲಿನ ಬಟ್ಟೆಗೆ ಹೊಂದಿಕೊಂಡಿರುವುದು. ಹೀಗೆ ಕೆಳಗಿನ ಬಟ್ಟೆ ಗಟ್ಟಿಯಾಗಿ ಕೂಳಿತಬಳಿಕ, ಚಿತ್ರದ ಆಕೃತಿಯಲ್ಲಿ ಬಾಹ್ಯರೇಷೆಯಿಂದ ತುಂಬಿದ ( ಸುತ್ತುಗಟ್ಟಲ್ಪಟ್ಟ ) ಸ್ಥಳವನ್ನಷ್ಟು ಬಿಟ್ಟುಕೊಟ್ಟು, ಉಳಿದ ಸ್ಥಳವನ್ನು ಕಸೂತಿಯ ಕತ್ತರಿಯಿಂದ, ನಯವಾಗಿ ಬಾಹ್ಯರೇಷೆಯ ಅಂಚಿಗೆ ಹೊಂದಿ ಕತ್ತರಿಸಬೇಕು. ಹೀಗೆ ಕತ್ತರಿಸುವಾಗ, ಕೆಳಗಿನ ಜಾಳಿಗೆಯ ಬಟ್ಟೆಗೆ ಮಾತ್ರ ಕತ್ತರಿ ತಗಲದಂತೆ ಜಾಗರೂಕತೆಯನ್ನು ವಹಿಸಬೇಕು. ಕೆಳಗಿನ ಜಾಳಿಗೆಯ ಟೆಬ್ಬಿ ಕತ್ತರಿಸಿದರೆ ಕಸೂತಿಯ ಹದವೇ ಕೆಟ್ಟುಹೋಗುವುದು. ಈ ' ಅಪ್ಲೀಕ್ ವರ್ಕ್'ನಲ್ಲಿ ನಿಜವಾದ ಕೌಶಲ್ಯ ಈ ಮೇಲಿನ ಬಟ್ಟೆಯನ್ನು ಕತ್ತರಿಸುವುದರಲ್ಲಿಯೇ ಇದೆ. ಮೇಲಿನ ಬಟ್ಟೆಯನ್ನು ಬಾಹ್ಯರೇಷೆಯ ಅಂಚಿಗೆ ಹೊಂದಿ ಬಟ್ಟೆಯ ಎಳೆ ಎಳೆಗಳು ಹೊರಡದಂತೆ ಕತ್ತರಿಸಿದರೇನೇ ಕಸೂತಿ, ಜಾಳಿಗೆ ಬಟ್ಟೆಯ ಮೇಲೆ ಹೆಣೆದಂತೆ ಅಂದವಾಗಿ ಕಾಣುವುದು. ಆ ಮೇಲೆ, ಬಾಹ್ಯರೇಷೆಯ ಮೇಲೆ ಇನ್ನೊಂದು ಸಲ ಓಡುವ ಟೆಬ್ಬಿಯನ್ನು ಹಾಕಿ, ಬಳಿಕ ನೇಯ್ಗೆಟೆಬ್ಬಿಯನ್ನು ಹಾಕಿಬಿಡಬಹುದು. ಅಥವಾ ' ಕಾರ್ಡಿಂಗ್ ' ಕೂಡ ಮಾಡಬಹುದು. ಅಂದರೆ ಬಾಹ್ಯರೇಷೆ ಗಟ್ಟಿಯಾಗಿ ಎದ್ದು ಕಾಣುವುದು. ಬಳಿಕ ಒಳಗಿನ ಭಾಗವನ್ನು ಓಡುವ ಟೆಬ್ಬಿ, ದುಂಡುಟೆಬ್ಬಿ ಅಥವಾ ಉದ್ದ

ಟೆಬ್ಬಿಗಳಿಂದ ಪೂರ್ಣವಾಗಿ ತುಂಬಿಬಿಟ್ಟರೂ, ಕಸೂತಿ ಚೆನ್ನಾಗಿಯೇ ಕಾಣು ವುದು. ಅಂತೂ ಮೇಲಿನ ಬಟ್ಟೆಯ ಭಾಗ ಚಿತ್ರದಲ್ಲಿ ಎಲ್ಲಿಯೂ ಕಾಣದೆ, ಜಾಳಿಗೆಯ ಬಟ್ಟೆಯ ಮೇಲೆಯೇ ಕಸೂತಿಯನ್ನು ಹೆಣೆದಂತೆ ಕಾಣುವುದು. ಅಥವಾ ಜಾಳಿಗೆಯ ಬಟ್ಟೆಯೂ ಕಸೂತಿಯ ಹೆಣಿಕೆಯ ಒಂದು ಭಾಗವೇನೋ ಎಂದೆನಿಸುವುದು.

ಈ ಕಸೂತಿಯಲ್ಲಿ ಜಾಳಿಗೆಯ ಬಟ್ಟೆಗೆ ಬದಲಾಗಿ ಇನ್ನೊಂದು ಬಣ್ಣದ ಬಟ್ಟೆಯ ತುಂಡನ್ನೂ ಉಪಯೋಗಿಸಬಹುದು. ಆದರೆ ಎರಡನ್ನೂ ಸರಿಯಾಗಿ ಕೂಡಿಸಿ, ಆಕೃತಿಯನ್ನು ಬಿಟ್ಟು ಮೇಲಿನ ಬಟ್ಟೆಯಲ್ಲಿ ಅನಾವಶ್ಯಕವಾದ ಭಾಗವನ್ನೆಲ್ಲ ಕತ್ತರಿಸಿಬಿಟ್ಟಾಗ, ಕೆಳಗೆ ಒಂದೇ ಬಣ್ಣದ ಬಟ್ಟೆ ಎಲ್ಲೆಡೆಗೂ ಉಳಿದುಬಿಟ್ಟಿರುವುದು. ಉದಾಹರಣೆಗೆ ಕೆಳಗೆ ನೀಲಿಯ ಬಣ್ಣದ ಬಟ್ಟೆಯೂ ಮೇಲೆ ಬಿಳಿಯ ಬಣ್ಣದ ಬಟ್ಟೆಯೂ ಇದ್ದರೆ, ಮೇಲಿನ ಬಟ್ಟೆಯಲ್ಲಿಯ ಅನಾ ವಶ್ಯಕ ಭಾಗವನ್ನು ಕತ್ತರಿಸಿದ ಬಳಿಕ, ಮೇಲಿನ ಬಟ್ಟೆಯ ಮೇಲಿನ ಚಿತ್ರ ದಲ್ಲಿಯ ಎಲೆ, ಹೂ, ಕಾಯಿಗಳೆಲ್ಲ ನೀಲಿಯ ಬಣ್ಣದ ಹಿನ್ನೆಲೆಯಲ್ಲಿಯೇ ಬರುವವು. ಈ ನೀಲಿಯ ಬಟ್ಟೆ ಜಾಳಿಗೆಯ ಬಟ್ಟೆಯಂತೆ ವಿರಳವಾಗಿ, ನಯ ವಾಗಿ ಕಾಣಿಸದು. ಅದಕ್ಕಾಗಿ, 'ಅಪ್ಲೀಕ್ ವರ್ಕ್' ಮಾಡುವಾಗ ಹೆಚ್ಚಾಗಿ ಜಾಳಿಗೆಯ ಬಟ್ಟೆಯನ್ನೇ ಕೆಳಬದಿಗೆ ಉಪಯೋಗಿಸುವರು.

ಇನ್ನು ಈ 'ಅಪ್ಲಿಕ್ ವರ್ಕ್,'ದಲ್ಲಿ ಚಿತ್ರದ ಆಕೃತಿಯನ್ನು ಬಿಟ್ಟು ಮೇಲಿನ ಬಟ್ಟೆಯಲ್ಲಿ ಎಡಬಲಗಳಲ್ಲಿರುವಂತಹ ಅನಾವಶ್ಯಕ ಭಾಗವನ್ನೆಲ್ಲ ಕತ್ತರಿಸಿ, ಜಾಳಿಗೆಯ ಬಟ್ಟೆಯ ಮೇಲೆಯೇ ಕಸೂತಿಯನ್ನು ತುಂಬಿದೆಯೋ ಏನೋ ಎನ್ನುವಂತೆ ಹಾಕಬೇಕಾದುದರಿಂದ, ಹೆಣೆಯುವ ಕಸೂತಿಯ ಚಿತ್ರ ದೊಡ್ಡದಾಗಿರಬೇಕೆನ್ನುವುದು ಸಹಜವಾಗಿಯೇ ಉಳಿಯುವುದು. ಕಸೂತಿ ಯಲ್ಲಿಯ ಎಲೆಗಳು ಒಂದಕ್ಕೊಂದು ಹೊಂದಿಕೊಂಡಿದ್ದರೆ, ಉಳಿದ ಬಟ್ಟೆ ಯನ್ನು ಕತ್ತರಿಸುವುದು ಕಠಿಣವಾಗುತ್ತದೆ; ಕತ್ತರಿಸದೆ ಹಾಗೇ ಬಿಟ್ಟರೆ, ಮೇಲಿನ ಬಟ್ಟೆ ಕಾಣಿಸಿ, ಕಸೂತಿ ಚೆನ್ನಾಗಿ ಕಾಣಿಸದು. ಅದಕ್ಕಾಗಿ ಒಂದ ಕ್ಕೊಂದು ಹೊಂದಿಕೊಂಡ ಎಲೆ, ಹೂ, ಕಾಯಿಗಳುಳ್ಳ, ದೊಡ್ಡ ಆಕೃತಿಯ ಚಿತ್ರವನ್ನೇ ಈ, 'ಆಪ್ಲಿಕ್ ವರ್ಕ'ಕ್ಕಾಗಿ ಉಪಯೋಗಿಸಬೇಕು. ಎಂದರೆ ಈ 'ಜಾಳಿಗೆಯ ಬಟ್ಟೆಯ ಮೇಲಿನ ಕಸೂತಿ,' ಅಂದವಾಗಿ ಕಾಣುವುದು.



# ಕಟವರ್ಕ ಮತ್ತು ರಿಚೆಲ್ಯೋವರ್ಕ

ಬಟ್ಟೆಯ ಮೇಲೆ ಚಿತ್ರವನ್ನು ಮೂಡಿಸಿಕೊಂಡು ವಿವಿಧ ಬಣ್ಣಗಳ ಮೆರುಗಿನ ರೇಶಿಮೆಯಿಂದ ಎಲೆ ಹೂಗಳನ್ನು ತುಂಬಿ ಬಿಡಬಹುದು. ಅಥವಾ ದಾರತುಂಬಿ ಇಲ್ಲವೇ ನೇಯ್ಗೆ ಹೊಲಿಗೆಯನ್ನು ಹಾಕಿ ಅದನ್ನು ಇನ್ನೂ ಉಬ್ಬಿ ಬರುವಂತೆ ಮಾಡಬಹುದು. ಹೀಗೆ ಮೇಲೆ ಕಸೂತಿಯನ್ನು ಹಾಕುವಂತೆ ವಿವಿಧ ಆಕಾರಗಳಲ್ಲಿ ಚಿತ್ರ ವಿಚಿತ್ರವಾಗಿ ಕತ್ತರಿಸಿಯೂ ಕಸೂತಿಯನ್ನು ಹಾಕಬಹುದು. ಹೀಗೆ ಕತ್ತರಿಸಿ ಶೂನ್ಯದಲ್ಲಿ ಸೌಂದರ್ಯವನ್ನೂ ನಿರ್ಮಿಸುವದೇ ಕಟವರ್ಕ ಅಥವಾ ಕತ್ತರಿಸಿದ ಕಸೂತಿ !

ಕತ್ತರಿಸಿದ ಕಸೂತಿಯನ್ನು ಯಂತ್ರದಲ್ಲಿ ಮಾಡುವಾಗಲೂ, ಮೊದಲು ಒತ್ತಡವನ್ನು ತೆಗೆದು ಪ್ಲೇಟನ್ನು ಹಾಕಿ ಯಂತ್ರವನ್ನು ಸಿದ್ಧಪಡಿಸಿಕೊಳ್ಳಬೇಕು. ಬಳಿಕ ಕಸೂತಿಯನ್ನು ಹಾಕಬೇಕಾದ ಬಟ್ಟೆಯ ಮೇಲೆ ಚಿತ್ರವನ್ನು ಮೂಡಿಸಿಕೊಂಡು ರಿಂಗಿನಲ್ಲಿ ನಡುವೆ ಬರುವಂತೆ ಅದನ್ನು ಬಿಗಿಯಾಗಿ ಕೂಡಿಸಿ, ಸೂಜಿಯ ಕೆಳಗೆ ಸರಿಸಿ (ಕಸೂತಿಗಾಗಿ '೯' ನಂಬರಿನ ಸೂಜಿಯನ್ನುಪಯೋಗಿಸಬೇಕು.) ಮೊದಲು ಚಿತ್ರದ ಬಾಹ್ಯರೇಷೆಗಳನ್ನೆಲ್ಲ ಓಡುವ ಟಿಬ್ಬಿಯ ಎರಡೆರಡು ಸಾಲುಗಳಿಂದ ತುಂಬಿಕೊಳ್ಳಬೇಕು. (ಮಾತ್ರ ಚಿತ್ರದ ಆ ಆ ಭಾಗಗಳಿಗೆ ಅನುಗುಣವಾದ ಬಣ್ಣದ ರೇಶಿಮೆಯನ್ನೇ ಉಪಯೋಗಿಸಬೇಕು) ಬಾಹ್ಯರೇಷೆಗಳನ್ನು ತುಂಬಿದ ಬಳಿಕ ಕಸೂತಿಯ ಕತ್ತರಿಯಿಂದ (ಈ ಕತ್ತರಿ ತೀರ ಸಣ್ಣ ಭಾಗಗಳನ್ನೂ ಕತ್ತರಿಸಲು ಬರುವಂತೆ ಮುಂದೆ ಮಣಿದದ್ದಿರುತ್ತದೆ.) ಬಾಹ್ಯರೇಷೆಯ ಒಳಗಿನ ಭಾಗವನ್ನು ಬಿಡಬೇಕಾದ ಭಾಗವನ್ನು ಬಿಟ್ಟು ಉದಾಹರಣೆಗೆ ಎಲೆಯ ದೇಟು, ಹೂವಿನ ನಡುವಿನ ಭಾಗ, ಇವುಗಳನ್ನು ಬಿಟ್ಟು—ರೇಷೆಗೆ ಹೊಂದಿ ಕತ್ತರಿಸಿಕೊಳ್ಳಬೇಕು. ಆದರೆ ಆಗಲೂ ಅರಿವೆ ಗುಂಜುಗುಂಜಾಗಿ ಕಸೂತಿ ನಯವಾಗಿ ಕಾಣಿಸದು. ಅಲ್ಲದೆ ಚಿತ್ರದ ಸುತ್ತು ಗಟ್ಟಿಯಾಗಿ, ಅಂದವಾಗಿ ಕಾಣುವಂತೆ ಮಾಡಬೇಕಾದ್ದರಿಂದ ಇದರ ಸುತ್ತಲೂ ನೇಯ್ಗೆ ಹೊಲಿಗೆ ಅಥವಾ

ಕಾರ್ಡಿಂಗ ಆಯಾ ಬಣ್ಣದ ದಾರಗಳಿಂದ ಮಾಡಬೇಕು. ಬಟ್ಟೆ ಗುಂಜಾಗದಂತೆ ಸುತ್ತಲೂ ಗಟ್ಟಿಮುಟ್ಟಾಗಿ ಹೊಲಿದರೆ ಈ ಕತ್ತರಿಸಿದ ಕಸೂತಿ ಅಂದವಾಗಿ ಕಾಣುವದು.

ಕತ್ತರಿಸಿದ ಕಸೂತಿಯನ್ನು ಪ್ರೋಪ್ಲಿನ್ ಬಟ್ಟೆಯ ಮೇಲೆ ಮಾಡಿದರೆ, ಅದೊಂದೇ ಬಟ್ಟೆಯನ್ನು ರಿಂಗಿನಲ್ಲಿ ಹಾಕಿ ಕತ್ತರಿಸಿದ ಕಸೂತಿಯನ್ನು ಮಾಡಬಹುದು. ಅಲ್ಲದೆ ಪ್ರೋಪ್ಲಿನ್ ಬಟ್ಟೆಯ ಮೇಲೆಯೇ ಈ ಕತ್ತರಿಸಿದ ಕಸೂತಿಯನ್ನು ಹಾಕುವದು ಒಳ್ಳೇದು. ವಾಯಿಲ್, ಆರ್ಗಂಡಿ ಇಂತಹ ಬಟ್ಟೆಯ ಮೇಲೆ ಕಟ್ ವರ್ಕ ಮಾಡುವದಾದರೆ ಅದೊಂದೇ ಬಟ್ಟೆ ಬಹಳ ತಿಳುವಾಗಿರುವದರಿಂದ ಅದರ ಕೆಳಗೆ ಕಾಗದವನ್ನಿಡಬೇಕಾಗುತ್ತದೆ; ಬಟ್ಟೆ ತಿಳುವಾಗಿದ್ದಾಗ, ಬಟ್ಟೆಯ ಮೇಲೆ ಚಿತ್ರವನ್ನು ಮೂಡಿಸಿಕೊಳ್ಳುವ ಅವಶ್ಯಕತೆಯೂ ಇಲ್ಲ. ಬಿಳಿಯ ಕಾಗದದ ಮೇಲೆಯೇ ಚಿತ್ರವನ್ನು ಮೂಡಿಸಿಕೊಂಡು ಅದನ್ನು ಬಟ್ಟೆಯ ಕೆಳಗೇ ಇಟ್ಟು ರಿಂಗಿನಲ್ಲಿ ಕೂಡಿಸಿ ಬಾಹ್ಯರೇಷೆಗಳನ್ನು ತುಂಬಿಕೊಂಡು, ಕತ್ತರಿಸಿ ಬಳಿಕ ಸುತ್ತಲೂ ಗಟ್ಟಿಮುಟ್ಟಾದ ಹೊಲಿಗೆಯನ್ನು ಹಾಕಬೇಕು ಸಿಲ್ಕ ಬಟ್ಟೆಯಿದ್ದರೆ ರಿಂಗಿನ ಎರಡು ವರ್ತುಲಗಳ ಮಧ್ಯದಲ್ಲಿಯೂ, ನೂಲಿನ ಬಟ್ಟೆಯ ತುಂಡನ್ನು ಸುತ್ತಲೂ ಹಾಕಿ ಗಟ್ಟಿಯಾಗಿ ಕೂಡಿಸಬೇಕಾಗುತ್ತದೆ. ಕಟವರ್ಕಿನ ಡಿಝಾಯಿನ ಮಾತ್ರ ಕತ್ತರಿಸಲು ಬರುವಂತೆ ದೊಡ್ಡ ಭಾಗಗಳಿಂದ ಕೂಡಿರಬೇಕು.




ಈ ಕಟ್ ವರ್ಕ ಕಸೂತಿಯಲ್ಲಿ ವಿಧಗಳು ಅನೇಕ. ಡಿಝಾಯಿನಿನ ಒಳಭಾಗವನ್ನು ಕತ್ತರಿಸಿದರೆ ಅದು ಕಟ್ ವರ್ಕ. ಚಿತ್ರದ ಸುತ್ತಲೂ

ಚೌಕೋನಾಕಾರದಲ್ಲಿ ಗಟ್ಟಿಯಾಗಿ ಓಡುವ ಟಿಬ್ಬಿಯನ್ನು ಹಾಕಿ, ಚಿತ್ರದ ಭಾಗವನ್ನು ಬಿಟ್ಟು ಉಳಿದ ಭಾಗವನ್ನು ಕತ್ತರಿಸಿದರೆ ಅದು ' ರಿಚೆಲೊ ಎಂಬ್ರೊಯಡರಿ ' (ವಿವರ ಬೇರೆ ಪುಟದಲ್ಲಿ) ಚಿತ್ರವು ಸಣ್ಣ ಸಣ್ಣ ಎಲೆ ಹೂಗಳಿಂದ ಕೂಡಿದ್ದರೆ ಅದರಲ್ಲಿ ಕಟ್‌ವರ್ಕ ಮಾಡಿದರೆ ಅದು ಆಯಲೆಟ್ ಎಂಬ್ರೊಯಡರಿ. ಕೆಳಗೆ ಜಾಳಿಗೆಯ ಬಟ್ಟೆಯನ್ನಿಟ್ಟು, ತುಂಬಿ, ಚಿತ್ರವನ್ನು ಬಿಟ್ಟು ಉಳಿದ ಭಾಗವನ್ನು ಕತ್ತರಿಸಿ, ಜಾಳಿಗೆಯ ಬಟ್ಟೆಯ ಮೇಲೆ ಕಸೂತಿಯ ಬಟ್ಟೆಯನ್ನು ಹಾಕಿದೆಯೋ ಎಂಬಂತೆ ತೋರಿದರೆ ಅದು ಅಪ್ಲೀಕ ವರ್ಕ; ಸುತ್ತಲೂ ಚೌಕೋನವನ್ನು ಭದ್ರಪಡಿಸಿ ಚೌಕೋನದ ಒಳಗಿನ ಭಾಗವನ್ನು ಕತ್ತರಿಸಿ, ಬಳಿಕ, ವಿಶಿಷ್ಟ ಪ್ರಮಾಣಬದ್ಧ ಚಿತ್ರಗಳ ಆಕಾರದಲ್ಲಿ ದಾರಗಳನ್ನು ತುಂಬಿ, ಯಂತ್ರದಲ್ಲಿ ಕಸೂತಿಯನ್ನು ಹಾಕಿದರೆ ಎಳೆ ಹೆಣೆದ ಕಸೂತಿ. ಈ ಎಲ್ಲ ಕಟ್‌ವರ್ಕಗಳಲ್ಲಿಯೂ ಅದಕ್ಕೇ ವಿಶಿಷ್ಟವಾದ ಒಂದೊಂದು ಬಗೆಯ ಅಂದವಿರುತ್ತದೆ.

---

## (೩) ರಿಚಿಲೋವರ್ಕ

'ರಿಚೆಲೋ ವರ್ಕ' ದಲ್ಲಿ ಡಿಝಾಯಿನ ಹೇಗಿದ್ದರೂ ಸರಿ. ಡಿಝಾಯಿನನ್ನು ಬಿಟ್ಟು ಉಳಿದ ಬಟ್ಟೆ ಮಾತ್ರ ಕತ್ತರಿಸಲು ಬರುವಂತಿರಬೇಕು. ಚಿತ್ರದಲ್ಲಿ ತೋರಿಸಿದಂತೆ ಮೊದಲು ಬಟ್ಟೆಯ ಮೇಲೆ ಡಿಝಾಯಿನ ಮೂಡಿಸಿಕೊಂಡು ಅದರ ನಾಲ್ಕೂ ಬದಿಗೆ ಸ್ವಲ್ಪ ದೂರದಲ್ಲಿ ಗೆರೆ ಹೊಡೆದುಕೊಳ್ಳಬೇಕು. ಈ ನಾಲ್ಕೂ ಗೆರೆಗಳು, ನಾಲ್ಕೂ ಬದಿಗೆ ಡಿಝಾಯಿನಿನ ಯಾವದೇ ಭಾಗಕ್ಕೆ ಅಂಟಿಕೊಂಡಿರಬೇಕು. ಇಲ್ಲದೇ ಹೋದರೆ ಡಿಝಾಯಿನಿಗೂ ತುಂಬಿದ ಬಟ್ಟೆಗೂ ಸಂಬಂಧವೇ ಉಳಿಯಲಿಕ್ಕಿಲ್ಲ.

ಬಟ್ಟೆಯನ್ನು ರಿಂಗಿನಲ್ಲಿ ಸೇರಿಸಿ, ಓಡುವ ಟೆಬ್ಬಿ ಕಾರ್ಡಿಂಗ ನೇಯ್ಗೆ ಟೆಬ್ಬಿ ಸಾಟಿನ್ ಹೊಲಿಗೆ ಯಾವುದಾದರೂ ಸರಿ—ಒಂದರಿಂದ ಆ ನಾಲ್ಕೂ ಗೆರೆಗಳನ್ನು ತುಂಬಿಕೊಳ್ಳಬೇಕು. ಬಳಿಕ ಡಿಝಾಯಿನಿನ ಭಾಗಗಳನ್ನೆಲ್ಲ ವಿವಿಧ ಬಣ್ಣಗಳ ರೇಶಿಮೆಯಿಂದ ಒಳಗೆಲ್ಲ ತುಂಬಿಕೊಂಡು ಬಿಡಬೇಕು. ಬಳಿಕ ಡಿಝಾಯಿನನ್ನು ಬಿಟ್ಟು ಆ ಚೌಕಿನಲ್ಲಿ ಬರುವ ಬಟ್ಟೆಯ ಭಾಗವನ್ನೆಲ್ಲ ಕತ್ತರಿಸಿಬಿಡಬೇಕು. ಚಿತ್ರದಲ್ಲಿ 'ಅ' ಭಾಗವನ್ನು ಕೆಂಪು ರೇಶಿಮೆಯಿಂದ ತುಂಬಿ 'ಕ' ಭಾಗವನ್ನು ಕಸೂತಿಯ ಕತ್ತರಿಯಿಂದ ನಿಧಾನವಾಗಿ ಕತ್ತರಿಸಬೇಕು.

ಬೇಕಾಗುವ ಸಾಹಿತ್ಯ

ಬಟ್ಟೆ : ಪೋಪ್ಲಿನ್ (ಇನ್ನಾವುದಾದರೂ ನಡೆಯುಬಹುದು. ಆದರೆ ಪೋಪ್ಲಿನ್ ಉತ್ತಮ.

ಯಂತ್ರದ ಸೂಜಿ : '೯' ನಂಬರು.

ಯಂತ್ರದ ಬಿಗಿತ : ಮೇಲಿನ ದಾರ ಕೊಂಚ ಸಡಿಲು.

ವಿವಿಧ ಬಣ್ಣಗಳ ರೇಶಿಮೆ, ಕಸೂತಿ ಕತ್ತರಿ ಇತ್ಯಾದಿ.

# (೪) ಪಿನ್‌ವರ್ಕ

ಸಾಟಿನ್ ಹೊಲಿಗೆ, ಕಾರ್ಡಿಂಗ ಇವುಗಳನ್ನು ಮಾಡಲು ಬರುವದಾದರೆ ಈ ಪಿನ್‌ವರ್ಕ ಮಾಡುವದು ಬಹುಸುಲಭ; ಕಾರ್ಡಿಂಗಿನಲ್ಲಿ ಡಿಝಾಯಿನ ಎದ್ದು ಕಾಣುವಂತೆ ಪಿನ್‌ವರ್ಕಿನಲ್ಲಿಯೂ ಕಸೂತಿ ತುಂಬಿಕೊಂಡು ಎದ್ದು ಕಾಣುವುದು. ಚಿತ್ರದ ಒಳಭಾಗವನ್ನೆಲ್ಲ ಪಿನ್‌ವರ್ಕಿನಿಂದ ತುಂಬಿಬಿಡುವದರಿಂದ ಅಷ್ಟೇ ಭಾಗ ಹೆಚ್ಚು ಉಬ್ಬಿ ಬರುವದು.

ಪಿನ್‌ವರ್ಕಿಗೆ ಡಿಝಾಯಿನ್ ಆರಿಸುವದಾದರೆ, ಸ್ವಲ್ಪ ಬಿಡಿಬಿಡಿಯಾಗಿದ್ದ ಸಣ್ಣ ಭಾಗಗಳಿಂದ ಕೂಡಿದ ಡಿಝಾಯಿನೇ ಉತ್ತಮವಾದುದು. ಉದಾಹರಣೆಗೆ ಚಿತ್ರದಲ್ಲಿಯ ಒಂದು ಹೂವನ್ನೇ ತೆಗೆದುಕೊಳ್ಳೋಣ. ಈ ಹೂವಿನ ಪ್ರತಿಪಕಳೆಯನ್ನೂ ಪಿನ್‌ವರ್ಕಿನಿಂದ ತುಂಬಬೇಕಾಗುವದು. ಅದೂ ಇಲ್ಲಿ ಕೈಸೂಜಿಗಳನ್ನುಪಯೋಗಿಸುವದರಿಂದ,, ಚಿತ್ರದ ಭಾಗಗಳು ಬಿಡಿಬಿಡಿಯಾಗಿರುವದೇ ಹೆಚ್ಚು ಒಳ್ಳೇದು.



ಚಿತ್ರವನ್ನು ಪೋಪ್ಲಿನ್ ಬಟ್ಟೆಯ ಮೇಲೆ ಮೂಡಿಸಿಕೊಂಡು, ರಿಂಗಿನಲ್ಲಿ ಬಿಗಿಯಾಗಿ ಕೂಡಿಸಬೇಕು. ಯಂತ್ರದಲ್ಲಿ '೯' ನಂಬರಿನ ಸೂಜಿಯನ್ನೇ

ಉಪಯೋಗಿಸುವದು ಒಳ್ಳೆಯದು. ಕಲಿಯುವ ಮುಂದೆ ೧೩, ೧೪ ನಂಬರಿನ ಸೂಜಿಗಳನ್ನೂ ಉಪಯೋಗಿಸಬಹುದು. ಹೂ, ಎಲೆಗಳಿಗೆ ಯೋಗ್ಯವಾದ ರೇಶಿಮೆಯನ್ನೇ ಉಪಯೋಗಿಸಬೇಕು.

ಪಕಳೆಯ ಮಧ್ಯದಿಂದ ಪಿನ್‌ವರ್ಕ ಪ್ರಾರಂಭಿಸಬಹುದು; ಒಂದು ತುದಿಯಿಂದ ಪ್ರಾರಂಭಿಸಬೇಕು. ಕೈಸೂಜಿಯ ನಡುವಿನ ಭಾಗ ಆ ಪಕಳೆಯ ಮೇಲ್ಭಾಗದಲ್ಲಿ ಬರುವಂತೆ ಸೂಜಿಯನ್ನು ಚುಚ್ಚಬೇಕು; ಅದರಂತೆಯೇ ಕೆಳಗಡೆಗೆ ಇನ್ನೊಂದು ಸೂಜಿಯನ್ನೂ (ಚಿತ್ರದಲ್ಲಿ ತೋರಿಸಿದಂತೆ) ಪಕಳೆಯ ಭಾಗವಷ್ಟೇ ಬರುವಂತೆ ಚುಚ್ಚಬೇಕು. ಬಳಿಕ ಕಾರ್ಡಿಂಗ ಮಾಡಿದಂತೆ ಸೂಜಿಯ ಮೇಲೆ ಆಚೆಯುಂದೀಚೆಗೆ ಅಂತರವನ್ನು ಬಿಡದೆ ಸಾಟಿನ್ ಸ್ಟಿಚ್ ಹಾಕಬೇಕು. ಒಂದು ಸೂಜಿಯ ಕೆಲಸ ಮುಗಿದೊಡನೆ ಅದನ್ನು ಮತ್ತೆ ಕೆಳಗಡೆಗೆ ಚುಚ್ಚಿಕೊಳ್ಳಬೇಕು. ಇದರಂತೆಯೇ ಕಸೂತಿಯ ಚಿತ್ರದ ಎಲ್ಲ ಭಾಗಗಳನ್ನೂ ಬೇರೆ ಬೇರೆ ರೇಶಿಮೆಯಿಂದ ತುಂಬಿಕೊಳ್ಳಬೇಕು. ಪಿನ್‌ವರ್ಕಿನಿಂದ ರೇಶಿಮೆಯ ಮೆರುಗು ಇನ್ನೂ ಹೆಚ್ಚುವದು.

ಬಟ್ಟೆ : ಪೋಪ್ಲಿನ್.

ಬೇರೆ ಬೇರೆ ಬಣ್ಣದ ರೇಶಿಮೆ.

ಯಂತ್ರದ ಸೂಜಿ '೯' ನಂಬರು.

ದಾರದ ಬಿಗಿತ : ಮೇಲಿನ ದಾರ ಸಡಿಲು.

ಕೈಸೂಜಿಗಳು, ಕತ್ತರಿ, ರಿಂಗು ಇತ್ಯಾದಿ.

(ಬ) ಪಿನ್ ವರ್ಕಿನದೇ ಸ್ವಲ್ಪ ದೊಡ್ಡ ಪ್ರಮಾಣವೆಂದರೆ ಮುಖಮುಲ ವರ್ಕ. ಇದರಲ್ಲಿ ಡಿಝಾಯಿನದ ಭಾಗಗಳು ದೊಡ್ಡವಾಗಿದ್ದರೇ ಇದು ಅಂದವಾಗಿರುವದು.

'ಮುಖಮುಲ್' ವರ್ಕ ಮುಖಮುಲ್ಲಿನಂತೆಯೇ ನಯವಾಗಿ ಎದ್ದು ಕಾಣುವದು. ರೇಶಿಮೆ ಎಳೆಗಳನ್ನು ಒಂದೇ ಪಾತಳಿಯಲ್ಲಿ ಕತ್ತರಿಸುವದರಿಂದ, ಕಸೂತಿ ಬಹಳ ನಯವಾಗಿ ಕಾಣುವದು. ಈ ಮುಖಮುಲ್ ವರ್ಕಿನಲ್ಲಿ ಕೈಸೂಜಿಯನ್ನು ಉಪಯೋಗಿಸದೆ, ಯಂತ್ರದ ಸೂಜಿಯನ್ನೇ ಉಪಯೋಗಿಸಬೇಕು. ಯಂತ್ರದ ಎರಡು ಸೂಜಿಗಳನ್ನು ತೆಗೆದುಕೊಂಡು, ಸೂಜಿಯ ನಡುವಿನ ಭಾಗವು ಎಲೆಯನ್ನು ತುಂಬುವ ಭಾಗದಲ್ಲಿ ಬರುವಂತೆ

ತುದಿಯಿಂದ ತುದಿಗೆ ಚುಚ್ಚಬೇಕು. ಬಳಿಕ ಯಂತ್ರದಲ್ಲಿ ಮೇಲಿನಿಂದ ಕೆಳಗೂ ಕೆಳಗಿನಿಂದ ಮೇಲೂ ಕಾರ್ಡಿಂಗ ಮಾಡಿದಂತೆ, ಎಳೆಗಳನ್ನು ಹಾಕಬೇಕು. ಎಳೆಗಳು ಒಂದರ ಮೇಲೊಂದು ಬರಕೂಡದು. ಆದರೆ ಒಂದಕ್ಕೊಂದು ಅಂಟಿಕೊಂಡಿರಬೇಕು. ಬಳಿಕ ಸೂಜಿಯನ್ನು ಹೊರದೆಗೆದು ಮತ್ತೆ ಕೆಳಗೆ ಚುಚ್ಚಿಕೊಳ್ಳಬೇಕು. ಹೀಗೆಯೇ ಎಲೆ ಮುಗಿಯುವವರೆಗೂ.

ಯಂತ್ರದ ಸೂಜಿಯನ್ನು ಉಪಯೋಗಿಸುವದರಿಂದ ಹೆಣಿಕೆ ಉಬ್ಬಿ ಬರುವದು. ಈ ರೀತಿಯಾಗಿ ಸೂಜಿಯ ಕೆಲಸವೆಲ್ಲ ಮುಗಿದ ಮೇಲೆ ಡಿಝಾಯಿನಿನ ಹಿಂಬದಿಗೆ ತುಂಬ ಅಂಟು ಹಚ್ಚಿ ಒಣಗಲು ಬಿಡಬೇಕು. ಬಳಿಕ ಉಬ್ಬಿ ಬಂದ ಆ ಸೂಜಿಯ ಹೆಣಿಕೆಯಲ್ಲಿ ಯಂತ್ರದ ಸೂಜಿಯನ್ನು ಮತ್ತೆ ಸೇರಿಸಿ, ಬ್ಲೇಡಿನಿಂದ ಆ ಎಳೆಗಳ ನಡುವಿನ ಭಾಗವನ್ನು ಸಮಪಾತಳಿಯಲ್ಲಿ, (ನಡುವೇ ಬರುವಂತೆ) ಕತ್ತರಿಸಬೇಕು.

ಹೀಗೆ ಹೂ ಎಲೆಗಳ ರೇಶಿಮೆಯನ್ನೆಲ್ಲ ಕತ್ತರಿಸಿದರೆ, ಅದು ಮಖಮಲ್ಲಿನಂತೆ ಅಂದವಾಗಿ ಕಾಣುವದು. ಕನ್ನಡಿಯ ಕಟ್ಟಿನಲ್ಲಿ ಹಾಕಿಸಿಟ್ಟರೇ ಇದರ ಅಂದ! ಈ ಬಗೆಯ ಕಸೂತಿಯನ್ನು ನೀರಿನಲ್ಲೆದ್ದಿ ಸ್ವಚ್ಛಮಾಡುವದು ಮಾತ್ರ ಸಾಧ್ಯವಿಲ್ಲ.

ಈ ಕಸೂತಿಗಾದರೂ ಯಂತ್ರದಲ್ಲಿ '೯' ನಂಬರಿನ ಸೂಜಿ ಬೇಕು. ಮೇಲೆ '೮೦' ನಂಬರಿನ ರೇಶಿಮೆ, ಕೆಳಗೆ '೬೦' ನಂಬರಿನದಿದ್ದರೂ ಸಾಕು. ಮೇಲಿನ ದಾರ ಮಾತ್ರ ಸಡಿಲಾಗಿರಬೇಕು. ಈ ಬಗೆಯ ಕಸೂತಿಯನ್ನು ಪ್ರೋಪ್ಲಿನ್ ಬಟ್ಟೆಯ ಮೇಲೆ ಮಾಡಿ ಟೇಬಲ್ ಕ್ಲಾಥ, ರೇಡಿಯೋ ಕವ್ಹರುಗಳಿಗೆ ಉಪಯೋಗಿಸಬಹುದು.

---

# ಪ್ಯಾಚ್ ವರ್ಕ (ಜೋಡಣೆಯ ಕಸೂತಿ)

ಬಟ್ಟೆಯ ಮೇಲೆ ಯಾವುದೇ ಚಿತ್ರವನ್ನು ಮಾಡಿಸಿಕೊಂಡು, ಯೋಗ್ಯ ವಾದ ರೇಶಿಮೆಯಿಂದ ತುಂಬಿ ಅಂದಗೊಳಿಸುವಂತೆ, ಬೇರೆ ಬೇರೆ ಬಣ್ಣದ ಹೊಳೆಹೊಳೆವ ಬಟ್ಟೆಯ ತುಂಡುಗಳನ್ನು ಆ ಆ ವಿವಿಧ ಆಕಾರಗಳಲ್ಲಿ ಜೋಡಿಸಿಯೂ, ಹೆಣೆದ ಕಸೂತಿಯಂತೆ ಬಟ್ಟೆಯನ್ನು ಅಂದಗೊಳಿಸಬಹುದು. ಈ ಜೋಡಣೆಯ ಕಸೂತಿಯನ್ನು ಯಂತ್ರದಲ್ಲಿಯೂ ಮಾಡಬಹುದು, ಕೈಯ್ಯಿಂದಲೂ ಮಾಡಬಹುದು.

ಮೊದಲು ಬಟ್ಟೆಯ ಮೇಲೆ ಚಿತ್ರವನ್ನು ಮೂಡಿಸಿಕೊಂಡು, ಆ ಚಿತ್ರ ದಲ್ಲಿ ಬರುವ ಹೂ, ಎಲೆ, ಪಕ್ಷಿಗಳಿಗೆ ಯೋಗ್ಯವಾದ ಬಣ್ಣದ ಬಟ್ಟೆಗಳನ್ನು ಆರಿಸಿಕೊಳ್ಳಬೇಕು. ಬಳಿಕ ಆ ಎಲೆಯ ಅಥವಾ ಹೂವಿನ ಆಕಾರದ ಕಾಗ ದದ ತುಂಡನ್ನು ಆ ಬಟ್ಟೆಯ ಮೇಲಿಟ್ಟು, ಬಾಹ್ಯರೇಷೆಯಲ್ಲಿ ಒಂದೆರಡು ಗೆರೆ ಹೆಚ್ಚಿಗಿಟ್ಟು ಕತ್ತರಿಸಿಕೊಳ್ಳಬೇಕು. ಕತ್ತರಿಸಿದ ಆ ತುಂಡನ್ನು, ಕಸೂತಿ ಹಾಕಬೇಕಾದ ಬಟ್ಟೆಯ ಹೂವಿನ ಮೇಲಿಟ್ಟು, ಬಾಹ್ಯರೇಷೆಯನ್ನು ಎಳೆಯಿಂದ ತುಂಬಿ ಗಟ್ಟಿ ಮಾಡಿಕೊಳ್ಳಬೇಕು. ಉಳಿದ ಭಾಗಗಳನ್ನೂ ಇದೇ ರೀತಿ ಕತ್ತರಿಸಿ, ಎಳೆಯಿಂದ ಬಟ್ಟೆಗೆ ಹಚ್ಚಿಕೊಳ್ಳಬೇಕು. ವಾಯಿಲಿನಂತಹ ತೆಳು ವಾದ ಬಟ್ಟೆಯಿಂದ ತುಂಡುಗಳನ್ನು ಆರಿಸಿಕೊಂಡಿದ್ದರೆ, ಆ ತುಂಡನ್ನೇ ಬಟ್ಟೆಯ ಮೇಲಿಟ್ಟು ಡಿಝಾಯಿನಿನ ಆಕಾರದಂತೆ, ಬಾಹ್ಯರೇಷೆಯನ್ನು ಎಳೆ ಯಿಂದ ಗಟ್ಟಿ ಮಾಡಿಕೊಳ್ಳಬಹುದು. ಆದರೆ ಸಾಟಿನ್, ಸಿಲ್ಕು ಬಟ್ಟೆಗಳಲ್ಲಿ ತುಂಡುಗಳನ್ನು ಆರಿಸಿಕೊಂಡಿದ್ದರೆ, ಕಾಗದದ ಆಕೃತಿಯನ್ನಿಟ್ಟೇ ಕತ್ತರಿಸಿ ಕೊಳ್ಳಬೇಕಾಗುವದು.

ಎಲ್ಲ ತುಂಡುಗಳನ್ನು ಡಿಝಾಯಿನಿನಲ್ಲಿ ಹೊಂದಿಸಿದ ಮೇಲೆ, ಅಷ್ಟಷ್ಟೆ ಭಾರವನ್ನು ರಿಂಗಿನಲ್ಲಿ ಕೂಡಿಸಿ, ಸಾಟಿನ್ ಹೊಲಿಗೆ, ನೇಯ್ಗೆ ಹೊಲಿಗೆ ಅಥವಾ ಕಾರ್ಡಿಂಗ ಯಾವುದಾದರೊಂದರಿಂದ ಯಂತ್ರದಲ್ಲಿ ಬಾಹ್ಯರೇಷೆ ಯನ್ನು ತುಂಬಿಕೊಳ್ಳಬೇಕು. ಆ ಆ ತುಂಡುಗಳ ಬಣ್ಣದ ರೇಶಿಮೆಯನ್ನೇ

ಉಪಯೋಗಿಸಿದರೆ ಹೆಚ್ಚು ಒಳ್ಳೆಯದು. ಬಾಹ್ಯರೇಷೆಗಳನ್ನು ತುಂಬಿದ ಮೇಲೆ, ಅಲ್ಲಲ್ಲಿ ನಡುವೆ ಬರುವ ಎಲೆಯ ಶಿರಗಳನ್ನೋ, ಪಕಳೆಯ ಗೆರೆಗಳನ್ನೋ ಉಚಿತವಾದ ಬಣ್ಣದಿಂದ ಯಂತ್ರದಲ್ಲಿಯೇ ತುಂಬಿಬಿಡಬೇಕು.

ಈ ಜೋಡಣೆಯ ಕಸೂತಿಯಲ್ಲಿ ಕಸೂತಿಯ ಮೇಲ್ಭಾಗದಲ್ಲಿಯೇ ತುಂಡುಗಳನ್ನು ಹಚ್ಚಿ ಹೆಣೆದರೆ ಅದೊಂದು ವಿಧ; ಒಟ್ಟೆ ತೆಳ್ಳಗಾಗಿದ್ದರೆ, ಹಿಂಭಾಗದಲ್ಲಿ ಜೋಡಿಸಿ ಕೇವಲ ಆ ತುಂಡುಗಳ ನೆರಳು ಮಾತ್ರ ಮೇಲ್ಭಾಗದಲ್ಲಿ ಕಾಣಿಸುವಂತೆ ಹಚ್ಚಿದರೆ ಇನ್ನೊಂದು ವಿಧ; ಈ ಎರಡನೆಯ ವಿಧದಲ್ಲಿ ದಟ್ಟವಾದ ಬಣ್ಣದ ತುಂಡುಗಳನ್ನು ಹಿಂಬದಿಗೆ ಉಪಯೋಗಿಸಬೇಕು : ಇದೇ ಛಾಯಾಕಸೂತಿ ಅಥವಾ ಶಾಡೋ ವರ್ಕ.

ಈ ಪ್ಯಾಚವರ್ಕಿನಿಂದ ನಾಯಿ, ಕುದುರೆ, ಆನೆ, ಪಕ್ಷಿ, ಮನುಷ್ಯರುಗಳನ್ನು ಅಂದವಾಗಿ ತುಂಬಬಹುದು. ಇದರಿಂದ ಅಂದವಾದ ಬಾಗಿಲು, ಕಿಟಕಿಯ ಪರದೆಗಳು, ಟೇಬಲ್ ಕ್ಲಾಥಿನ ಮಧ್ಯಭಾಗ, ರೇಡಿಯೋ ಕವ್ಹರ್ ಬಹಳ ಅಂದವಾಗಿ ಕಾಣುವವು.

ಈ ಕಸೂತಿಗೆ ಯಂತ್ರದಲ್ಲಿ ' ೯ ' ನಂಬರಿನ ಸೂಜಿಯನ್ನೂ, ' ೮೦ ' ನಂಬರಿನ ದಾರವನ್ನೂ ಉಪಯೋಗಿಸಬೇಕು. ಕೆಳಗೆ ' ೬೦ ' ನಂಬರಿನ ದಾರವಾದರೂ ನಡೆದೀತು. ಮೇಲಿನ ದಾರ ಮಾತ್ರ ಕೊಂಚ ಸಡಿಲಾಗಿರಬೇಕು.



ಪ್ಯಾಚವರ್ಕದ ಮಾದರಿ

# ಬೀಡ ವರ್ಕ (ಮಣಿ ಕಸೂತಿ)

ಕಸೂತಿಗೆ ಬೇರೆ ಬೇರೆ ಬಣ್ಣದ ರೇಶಿಮೆಯನ್ನು ಉಪಯೋಗಿಸುವಂತೆ ಇಲ್ಲಿ ಬೇರೆ ಬೇರೆ ಬಣ್ಣದ ಮಣಿಗಳನ್ನುಪಯೋಗಿಸುವದಿರುತ್ತದೆ. ಡಿಝಾಯಿನನ್ನು ಮೊದಲು ಬಟ್ಟೆಯ ಮೇಲೆ ಮೂಡಿಸಿಕೊಂಡು ಬಳಿಕ ಆ ಡಿಝಾಯಿನಿಗೆ ಯೋಗ್ಯ ಬಣ್ಣದ ಮಣಿಗಳನ್ನು ಆರಿಸಿಕೊಳ್ಳಬೇಕು. ಆ ಮಣಿಗಳನ್ನು ಅದೇ ಬಣ್ಣದ ರೇಶಿಮೆಯಲ್ಲಿ ಮೊದಲು ಕೈಯಿಂದ ಪೋಣಿಸಿಕೊಳ್ಳಬೇಕು. ಆಮೇಲೆ ರಿಂಗಿನಲ್ಲಿ ಕೂಡಿಸಿದ ಕಸೂತಿಯ ಬಟ್ಟೆಯನ್ನು, ಯಂತ್ರದ ಸೂಜಿಯ ಕೆಳಗೆ ಸರಿಸಿ ಪೋಣಿಸಿದ ಮಣಿಗಳನ್ನು ಬಾಹ್ಯರೇಷೆಯಗುಂಟ ಇಟ್ಟು ಅದೇ ಬಣ್ಣದ ರೇಶಿಮೆಯಿಂದ ಯಂತ್ರದಲ್ಲಿಯೇ ಅಲ್ಲಲ್ಲಿ ಎಳೆಗಳನ್ನು ಹಾಕಬೇಕು. ಈ ಮಣಿಗಳಿಂದ ಎಲೆ, ಹೂಗಳನ್ನು ತುಂಬುವದಕ್ಕಿಂತ ಪ್ರಮಾಣಬದ್ಧ ಕಸೂತಿಗಳನ್ನು ತುಂಬಿದರೆ ರಂಗವಲ್ಲಿಯಂತೆ ಕಾಣುವದು.



ಹಿಂದೆ ಇವೇ ಮಣಿಗಳನ್ನು ತಂತಿಯಲ್ಲಿ ಪೋಣಿಸಿ, ಮಲ್ಲಿಗೆಯ ಮಂಟಪವನ್ನೇ ಮಾಡುತ್ತಿದ್ದರು. ತಾಟುಗಳನ್ನು ಹೆಣೆಯುತ್ತಿದ್ದರು. ಇವೂ ಬಹಳ ಅಂದವಾಗಿರುತ್ತಿದ್ದವು. ಆದರೆ ಇಂದು ಯಂತ್ರದಲ್ಲಿ ಹೆಣೆಯುವದು

ಬಹಳ ಬೇಗ ಆಗುತ್ತದೆ. ಉದಾಹರಣೆಗೆ ಮೇಲಿನ ಆಕೃತಿಯನ್ನೇ ನೋಡ ಬಹುದು. ಮೊದಲನೆಯ ಸಾಲಿನಲ್ಲಿ ನೀಲೀ ಮಣಿಗಳನ್ನು ಪೋಣಿಸಿ ಕೊಂಡು, ಎರಡೆರಡು ಮಣಿಗಳ ನಡುವೆ ಯಂತ್ರದಲ್ಲಿಯೇ ಒಂದೊಂದು ಹೊಲಿಗೆಯನ್ನು ಹಾಕಬೇಕು. ಆಮೇಲೆ ಬಿಳಿಯ ಅಥವಾ ಹಳದಿಯ ಮಣಿ ಗಳನ್ನು ಪೋಣಿಸಿಕೊಂಡು ಅಂಕಡೊಂಕಾಗಿ ಚಿತ್ರದಲ್ಲಿ ತೋರಿಸಿದಂತೆ ಇಟ್ಟು ನಡುನಡುವೆ ಒಂದೊಂದು ಹೊಲಿಗೆಯನ್ನು ಹಾಕಬೇಕು. ಬಳಿಕ ನೀಲೀ ಮಣಿಗಳ ನಾಲ್ಕು ಸಾಲುಗಳನ್ನು ಹೆಣೆದು ಕೆಳಗೆ ಬಿಳೀ ಮಣೆಗಳ ತ್ರಿಕೋಣವನ್ನೇ ಮಾಡಬೇಕು. ಇಲ್ಲಿ ಮಣಿಗಳನ್ನು ಅತ್ತಿತ್ತ ಹೊರಳಿಸ ಬೇಕಾದ್ದರಿಂದ, ದಾರ ಸ್ವಲ್ಪ ಉದ್ದವಾಗಿಯೇ ಇರಬೇಕು. ಇಲ್ಲಿ ದಾರ ವನ್ನು ಆದಷ್ಟು ಹರಿಯಬಾರದು. ದಾರದ ತುದಿಯನ್ನು ಹಾಗೆಯೇ ಬದಿಗೆ ಹೊಲಿಗೆಯಿಂದ ಗಟ್ಟಿಯಾಗಿರಿಸಿ ಮತ್ತೆ ಬೇಕಾದಾಗ ಎಳೆದುಕೊಳ್ಳಬೇಕು.

ಈ ಬಗೆಯ ಕಸೂತಿಯನ್ನು ಜಾರ್ಜೆಟ್ಟಿನಂತಹ ತೆಳುವಾದ ಬಟ್ಟೆಯ ಮೇಲೆ ಮಾಡಬಹುದಾದರೂ, ಸ್ವಲ್ಪ ಗಟ್ಟಿಯಾದ ಮೇಲೆಯೇ ಮಾಡು ವದು ಒಳ್ಳೆಯದು. ಬಟ್ಟೆಯ ಅಂಚಿಗೂ, ಹೆಣ್ಣುಮಕ್ಕಳ ಕೈಚೀಲದ ಡಿಝಾಯಿನಿಗೂ ಈ ಹೆಣಿಕೆಯನ್ನು ಉಪಯೋಗಿಸುವರು. ಇದಕ್ಕಾದರೂ ಯಂತ್ರದಲ್ಲಿ '೯' ನಂಬರಿನ ಸೂಜಿ ಬೇಕು. ಮೇಲಿನ ದಾರ '೮೦' ಕೆಳಗಿ ನದು '೬೦' ನಂಬರಿನದು. ಈ ಕಸೂತಿ ನೋಡಲು ಅಂದವಾಗಿದೆ, ಆದರೆ ತೊಳೆಯಲು ಬಾರದು !

# ಚರ್ಮದ ಮೇಲಿನ ಕಸೂತಿ
## ( ಎಂಬ್ರೊಯಡರಿ ಆನ್ ಲೆದರ್ )

ಚರ್ಮದ ಮೇಲೆ ಕಸೂತಿ ಹಾಕುವದು, ಬಟ್ಟೆಯ ಮೇಲೆ ಹಾಕಿದಂತಲ್ಲ ಹಾಕುವದು ಛಾಯಾಪ್ರಧಾನ ಕಸೂತಿಯ ಹಿನ್ನೆಲೆಯನ್ನು ಮೊದಲು ತಿಳಿದುಕೊಂಡಿರಬೇಕು. ಬಣ್ಣಗಳ ಬೆರಕೆಯಲ್ಲಿ ಮತ್ತು ಹೊಲಿಗೆ ಹಾಕುವಲ್ಲಿ ಹೆಚ್ಚು ಜಾಗರೂಕರಾಗಿರಬೇಕು.

ಕಸೂತಿಗೆ ಯಾವ ಬಗೆಯ ತೊಗಲಾದರೂ ಸರಿ, ಆದರೆ ಹದ ಮಾಡಿದ್ದಿರಬೇಕು. ಇದಕ್ಕೆ ಆಧಾರವಾಗಿ ಹಿಂಬದಿಗೆ ಅರ್ಗಂಡಿಯನ್ನು ಅಥವಾ ಮತ್ತಾವುದಾದರೂ ಗಟ್ಟಿ ನೇಯ್ಗೆಯ ಬಟ್ಟೆಯನ್ನು ಹಾಕಬೇಕು. ರಿಂಗಿನಲ್ಲಿ ಕೂಡಿಸಿ ಯಂತ್ರದ ಸೂಜಿಯ ಕೆಳಗೆ ಸರಿಸಿ, ಮೊದಲು ಬಾಹ್ಯರೇಷೆಯನ್ನು ಓಡುವ ಟೆಬ್ಬಿಯಿಂದ ತುಂಬಬೇಕು. ಇದರ ಮೇಲಿನ ಡಿಝಾಯಿನನ್ನು ಮೂಡಿಸುವ ರೀತಿ ಮಾತ್ರ ಕೊಂಚ ಬೇರೆಯಾಗಿದೆ. ಉಳಿಯಿಂದ ಒತ್ತಿ ಚಿತ್ರವನ್ನು ಮೂಡಿಸುವದಿರುತ್ತದೆ. ಒಂದು ಸಲ ಬಾಹ್ಯರೇಷೆಯನ್ನು ತುಂಬಿದ ಮೇಲೆ ಯಂತ್ರದಿಂದಲೇ ದಾರವನ್ನೆಳೆದು, ನೇಯ್ಗೆ ಟೆಬ್ಬಿಯಲ್ಲಿ ಹಾಕಿದಂತೆ, ಮೇಲೆ ಮತ್ತೊಂದು ಸಲ, ಟೆಬ್ಬಿಯನ್ನು ಹಾಕಬೇಕು. ಇದರಿಂದ ತೊಗಲಿನ ತುದಿಯೂ ಸೀಳಿಹೋಗುವದಿಲ್ಲ.

ಬಳಿಕ ಛಾಯಾಪ್ರಧಾನ ರೇಶಿಮೆಯಿಂದ ಉಳಿದ ಭಾಗವನ್ನೆಲ್ಲ ತುಂಬಿಕೊಳ್ಳಬೇಕು ತುದಿಗೆ ಸ್ವಲ್ಪ ಎತ್ತರವಾಗಿ, ಕಸೂತಿ ಅಂದವಾಗಿ ಕಾಣಿಸುವದು. ಕಸೂತಿಯನ್ನು ಹಾಕುವದಾದ ಮೇಲೆ, ಇಸ್ತ್ರಿಯಿಂದ ಅದನ್ನು ಸ್ವಲ್ಪ ಒತ್ತಿದರೆ, ಕಸೂತಿಯ ರೇಸಿಮೆ ಸಮಪಾತಳಿಯಲ್ಲಿ ಬರುವದು.

ತೊಗಲಿನ ಮೇಲೆ ರೇಶಿಮೆಯಿಂದ ಹಾಕಿದಂತೆ ಉಣ್ಣೆ (ವೂಲ್) ಯಿಂದಲೂ ಹಾಕಬಹುದು. ಉಚಿತವಾದ ಬಣ್ಣದ ಉಣ್ಣೆಯನ್ನು ತೆಗೆದುಕೊಂಡು, ತುಂಡುಮಾಡಿ, ಉದ್ದವಾಗಿಟ್ಟು ಅದೇ ಬಣ್ಣದ ರೇಶಿಮೆಯಿಂದ ಯಂತ್ರದಲ್ಲಿ ಆ ಉಣ್ಣೆಯನ್ನು ಗಟ್ಟಿಯಾಗಿರಿಸಲು ಎಳೆಗಳನ್ನು ಹಾಕಬೇಕು.

ಬಣ್ಣಗಳ ಬೆರಕೆ ಸರಿಯಾದರೆ ಈ ಕಸೂತಿಯೂ ಅಂದವಾಗಿ ಕಾಣುವದು. ಉಣ್ಣೆಯ ಸಹಾಯದಿಂದಾದ ತೊಗಲಿನ ಮೇಲಿನ ಕಸೂತಿಯನ್ನು ಕನ್ನಡಿಯ ಕಟ್ಟಿನಲ್ಲಿ ಹಾಕಿಡುವದೇ ಹೆಚ್ಚು ಉತ್ತಮ. ಆದರೆ ತೊಗಲಿನ ಮೇಲೆ ರೇಶಿಮೆಯಿಂದ ತೆಗೆದ ಕಸೂತಿಯನ್ನು ಮಾತ್ರ, ಹೆಣ್ಣುಮಕ್ಕಳ ಕೈಚೀಲ, ಹಣದ ಚೀಲಗಳಿಗೂ ನಾಟಕದಲ್ಲಿ ನಟಿಯರ ಪಾದರಕ್ಷೆಗಳಿಗೂ ಉಪಯೋಗಿಸುವದು ರೂಢಿಯಲ್ಲಿದೆ.

ಈ ಕಸೂತಿಗಾದರೂ ಯಂತ್ರದಲ್ಲಿ '೯' ನಂಬರಿನ ಸೂಜಿಯೇ ಬೇಕು ಮೇಲೆ '೪೦' ಕೆಳಗೆ '೬೦' ನಂಬರಿನ ದಾರವಾದರೆ ಸಾಕು. ಮೇಲಿನ ದಾರದ ಬಿಗಿತ ಸಾಧಾರಣ. ಕೆಳಗಿನದು ಕೊಂಚ ಬಿಗಿ.

ಉಣ್ಣೆಯನ್ನುಪಯೋಗಿಸಿದರೆ, ಮೇಲಿನ ದಾರ ಕೊಂಚ ಬಿಗಿಯಾಗಿರಬೇಕು.

## ಕಟ್ಟಿಗೆಯ ಮೇಲಿನ ಕಸೂತಿ

ತೊಗಲಿನ ಮೇಲೆ ಕಸೂತಿ ಹಾಕುವಂತೆ, ಕಟ್ಟಿಗೆಯ ಫಳಿಯ ಮೇಲೆಯೂ ಹಾಕಬಹುದು. ಈ ಕಟ್ಟಿಗೆ ತೀರ ಹೆಚ್ಚೆಂದರೆ ⅛ ಇಂಚು ದಪ್ಪವಾಗಿರಬಹುದು. ಅದಕ್ಕೂ ಹೆಚ್ಚಿಗಿರಕೂಡದು. ಸೂಜಿಯು ತೊಂದರೆಯಿಲ್ಲದೆ ಸರಿದಾಡುವಂತೆ, ಮತ್ತು ಸೂಜಿಯ ಸರಿದಾಟದಿಂದ ಕಟ್ಟಿಗೆಯ ತುಂಡು ಸೀಳದಂತೆ, ಕಟ್ಟಿಗೆಯ ತುಂಡನ್ನು ಮೊದಲು ನುಣುಪಾಗಿರಿಸಿರಬೇಕು. ಈ ಕಟ್ಟಿಗೆಯ ತುಂಡಿಗೂ ಕೆಳಗೆ ಆಧಾರವಾಗಿ ಆರ್ಗಂಡಿಯಂತಹ ಬಟ್ಟೆಯಿದ್ದರೆ ನೆಟ್ಟಗೆ.

ಫಳಿಯ ಮೇಲೆ ಡಿಝಾಯಿನನ್ನು ಪೆನ್ಸಿಲ್ಲಿನಿಂದಲೇ ಗುರುತಿಸಿ, ಯಂತ್ರದಲ್ಲಿ ಮೊದಲು ಅದರ ಬಾಹ್ಯರೇಷೆಗಳನ್ನು ತುಂಬಿಕೊಳ್ಳಬೇಕು. ಯೋಗ್ಯವಾದ ಬಣ್ಣದ ರೇಶಿಮೆಯಿಂದ ಇನ್ನುಳಿದ ಭಾಗಗಳನ್ನು ಸಾಟಿನ್ ಹೊಲಿಗೆಯಿಂದಲೇ, ಓಡುವ ಟೆಬ್ಬಿಯಿಂದಲೇ ತುಂಬುವಾಗ ಅವು ಒಂದೇ ದಿಕ್ಕಿನಲ್ಲಿ ಬಂದರೆ ಹೆಚ್ಚು ಒಳ್ಳೆಯದು. ಇಲ್ಲಿ ಛಾಯಾಪ್ರಧಾನ ರೇಶಿಮೆಯನ್ನು

ಉಪಯೋಗಿಸಿದರೆ ಹೆಚ್ಚು ಅಂದವಾಗಿ ಕಸೂತಿ ನಿರ್ಮಿತವಾಗುವದು. ಈ ಬಗೆಯ ಡಿಝಾಯಿನನ್ನು, ಅಲಂಕಾರ ಪೆಟ್ಟಿಗೆಗಳ ಮೇಲ್ಭಾಗಕ್ಕೆ ಉಪಯೋಗಿಸಬಹುದು.

ಈ ಕಸೂತಿಗಾದರೂ ಯಂತ್ರದಲ್ಲಿ '೯' ನಂಬರಿನ ಸೂಜಿ ಬೇಕು. ಮೇಲಿನ ದಾರ '೮೦' ಕೆಳಗಿನದು '೬೦' ನಂಬರಿನದು. ಮೇಲಿನ ದಾರ ಸ್ವಲ್ಪ ಸಡಿಲಾಗಿರಬೇಕು.

## ಜೀಗಿನ ಕಸೂತಿ

ಜೀಗಿನ ಕಸೂತಿಯನ್ನು ಕೈಯಿಂದ ಮಾಡುವಂತೆ, ಯಂತ್ರದಲ್ಲಿಯೂ ಮಾಡಬಹುದು. ಆದರೆ ಯಂತ್ರದಲ್ಲಿ ಉಪಯೋಗಿಸುವ ಜೀಗು ಮಾತ್ರ ರೇಶಿಮೆಯಂತೆ ನಯವಾಗಿ, ತೆಳ್ಳಗಾಗಿರುತ್ತದೆ. ಇದು ಬಂಗಾರದ ಕಡ್ಡಿಯಂತೆಯೂ ಇರಬಹುದು, ಬೆಳ್ಳಿಯ ಕಡ್ಡಿಯಂತೆಯೂ ಇರಬಹುದು. ಬಂಗಾರದ ಕಡ್ಡಿಯಲ್ಲಿ ಮಾಡಿದ ಕಸೂತಿಯು ಬನಾರಸಿ ಜರದ ಕಸೂತಿಯಂತೆ ಅಂದವಾಗಿ ಕಾಣುತ್ತದೆ.

ಯಂತ್ರದಲ್ಲಿ ಜೀಗಿನ ಕಸೂತಿಯನ್ನು ಮಾಡಲು, ಜೀಗನ್ನು ಬಾಬಿನ್‌ದಲ್ಲಿ ಸುತ್ತಬೇಕಾಗುತ್ತದೆ. ಇದನ್ನು ಸೂಜಿಯಲ್ಲಿ ಪೋಣಿಸಲು ಬರುವದಿಲ್ಲ. ಯಂತ್ರದಲ್ಲಿ ಮೇಲೆ ಬಿಳೀದಾರ ಅಥವಾ ಬಣ್ಣದ ರೇಶಿಮೆಯನ್ನೇ ಉಪಯೋಗಿಸಬೇಕು. ಆದರೆ ಇದಕ್ಕೆ ತಕ್ಕಂತೆ ಬಟ್ಟೆಯನ್ನು ಮಾತ್ರ ರಿಂಗಿನಲ್ಲಿ ವಿರುದ್ಧ ದಿಕ್ಕಿನಿಂದ ಕೂಡಿಸಬೇಕು. ಕಸೂತಿ ತುಂಬುವ ಭಾಗ ಕೆಳಗೆ ಬಂದರೆ ಜೀಗು ಕೆಳಗೆ ಬಂದು ಮೇಲೆ ಬಿಳೀ ದಾರ ಬರುವದು. ಜೀಗಿನ ಕಸೂತಿಯನ್ನು ಹಾಕುವಾಗ ಬಾಬಿನ್ನದ ಸ್ಕ್ರೂ ಮೊಳೆಯನ್ನು ಸ್ವಲ್ಪ ಸಡಿಲಾಗಿಟ್ಟರೆ, ಟಿಕ್ಕಿ ಅಂದವಾಗಿ ಬೀಳುವದು.

## ಲೋಕರಿ ( ಉಣ್ಣೆಯ) ಕಸೂತಿ

ಸಾಟಿನ್, ಸಾದಾ, ಕ್ಯಾನವ್ಹಸ್, ಅಥವಾ ಪೋಪ್ಲಿನ್—ಯಾವುದೇ ಬಟ್ಟೆಯ ಮೇಲೆ ಡಿಝಾಯಿನನ್ನು ತೆಗೆದುಕೊಳ್ಳಬೇಕು. ಬಳಿಕ ಆ ಡಿಝಾಯಿನಿಗೆ ಯೋಗ್ಯವೆನಿಸಿದ ಲೋಕರಿಯನ್ನು ತೆಗೆದುಕೊಳ್ಳಬೇಕು. ಅಥವಾ

ಮಿಶ್ರ ಬಣ್ಣ ಬೇಕಾಗಿದ್ದರೆ ಬೇರೆ ಬೇರೆ ಬಣ್ಣದ ಲೋಕರಿಯ ಎರಡು ಎಳೆಗಳನ್ನೂ ಕೂಡಿಸಬಹುದು. ಈ ಎಳೆಗಳನ್ನು ಡಿಝೈನಿನ ಬಾಹ್ಯರೇಷೆಯ ಮೇಲಿಟ್ಟು, ಅದೇ ಬಣ್ಣದ ರೇಶಿಮೆಯಿಂದ ಯಂತ್ರದಲ್ಲಿ ಓಡುವ ಟಿಬ್ಬಿ ಹಾಕಬೇಕು. ಬಳಿಕ ಟಿಬ್ಬಿಯ ನಡುವೆ ಬರುವ ಲೋಕರಿಯ ಎಳೆಗಳನ್ನು ಕೊಕ್ಕೆಸೂಜಿಯಿಂದ ಎತ್ತಿ ಲೋಕರಿಯ ಟಿಬ್ಬಿಗಳು ಪೋಳ್ಯಾಗುವಂತೆ ಮಾಡಬೇಕು. ಈ ಟಿಬ್ಬಿಗಳು ಎಷ್ಟೆಷ್ಟು ಸಮೀಪ ಬರುವವೋ ಅಷ್ಟು ಸುಂದರವಾಗಿ ಕಸೂತಿ ಕಂಡುಬರುವದು. ಆಮೇಲೆ, ಒಂದೇ ಸಮನಾಗಿ ಇದರಂತೆ ಒಳಗೂ ತುಂಬಿ, ಕಸೂತಿಯ ಕತ್ತರಿಯಿಂದ ಮೇಲಿದ್ದ ಲೋಕರಿಯನ್ನು ಒಂದೇ ಪಾತಳಿಯಲ್ಲಿ ಕತ್ತರಿಸಿದರೆ ಈ ಕಸೂತಿ ಬಹಳ ಅಂದವಾಗಿ ಕಾಣುವದು.

## ಸಿನೇಲವರ್ಕ

ಸಿನೇಲ, ಕಸೂತಿ ತುಂಬುವ ಒಂದು ಬಗೆಯ ರೇಶಿಮೆ. ಗುಂಜು ಗುಂಜಾಗಿ ಇರುವದು. ಮಿಶ್ರಬಣ್ಣಗಳಲ್ಲೂ ಇದು ದೊರೆಯುತ್ತದೆ. ಹಸಿರು, ಕೆಂಪು, ತಿಳಿಹಸಿರು, ಮಿಶ್ರ ಎಲ್ಲ ಬಣ್ಣಗಳೂ ಇದರಲ್ಲಿ ದೊರೆಯುತ್ತವೆ. ಯಂತ್ರದಲ್ಲಿ ಸಿನೇಲ ಕಸೂತಿ ಹಾಕುವಾಗ, ಆ ಸೀನೇಲಿನಂತಹ ಬಣ್ಣದ ರೇಶಿಮೆಯನ್ನೇ ಮೇಲೆ ಸೂಜಿಯಲ್ಲಿ ಪೋಣಿಸಬೇಕು. ಯಂತ್ರದ ಸೂಜಿ '೯' ನಂಬರಿನದು. ಕೆಳಗೆ ಬಾಬಿನ್‌ದಲ್ಲಿ '೬೦' ನಂಬರಿನ ದಾರಹಾಕಿದರೂ ನಡೆಯುವದು. ಕಸೂತಿಯಲ್ಲಿ ತುಂಬಬೇಕಾದ ಎಲೆ ಅಥವಾ ಹೂವಿನ ಸರಪಳಿಯಲ್ಲಿ ಒಂದು ಇಂಚಿನಲ್ಲಿ ನಾಲ್ಕೈದು ಭಾಗಗಳಾಗುವಂತೆ ಮಾಡಿ, ಆ ಆ ಗೆರೆಗಳ ಮೇಲೆ ಸಿನೇಲ ಇಟ್ಟು ಬಿಚ್ಚಿ ಹಾಕಬೇಕು. ಬಳಿಕ ಉಳಿದ ಸ್ಥಳದಲ್ಲಿ, ಅದೇ ಬಣ್ಣದ ರೇಶಿಮೆಯಿಂದ ಎರಡು ಸಾಲುಗಳ ನಡುವಿನ ಭಾಗದಲ್ಲಿ ಸಾಟಿನ್ ಹೊಲಿಗೆ ಹಾಕಬೇಕು. ಅಥವಾ ಸಿನೇಲಿನಿಂದ ಪೂರ್ಣ ತುಂಬಿದರೂ ಕಸೂತಿ ಅಂದವಾಗುವದು.

---

# ೪. ಯಂತ್ರದ ಪರಿಚಯವು



ದೊಡ್ಡ ಪ್ರಮಾಣದಲ್ಲಿ ಕೈಯಿಂದ ಹೊಲಿಗೆಯನ್ನು ಹಾಕುವದು ಅಸಾಧ್ಯವಾದಾಗ, ಹೊಲಿಗೆಯ ಯಂತ್ರವನ್ನು ಅವಶ್ಯವಾಗಿ ಉಪಯೋಗಿಸಲೇ ಬೇಕಾಗುತ್ತದೆ. ಇದರಿಂದ ವೇಳೆ, ಉತ್ಸಾಹಗಳೆರಡರ ಉಳಿತಾಯವೂ ಆಗುತ್ತದೆ. ಆದರೆ ಹೀಗೆ ಯಂತ್ರವನ್ನು ಉಪಯೋಗಿಸುವಾಗ, ಉಪಯೋಗಿಸುವವರಿಗೆ ಆ ಯಂತ್ರದ ಸಂಪೂರ್ಣ ಜ್ಞಾನ ವಿವರ ವಿವರವಾಗಿರುವದು ಅವಶ್ಯ; ಯಾವದೇ ಕಾರಣದಿಂದ ಯಂತ್ರದಲ್ಲಿ ಹೊಲಿಗೆ ಸರಿಯಾಗಿ ಬೀಳದಿದ್ದರೆ, ಗಾಲಿ ತಿರುಗದಿದ್ದರೆ, ಅಥವಾ ತಿರುಗಿದಾಗ ಬಹಳ ಜೋರಿನಿಂದ ಸಪ್ಪಳವಾಗುತ್ತಿದ್ದರೆ, ಮೇಲಿಂದ ಮೇಲೆ ದಾರ ಹರಿಯುತ್ತಿದ್ದರೆ, ಅಥವಾ ಸೂಜಿ ಮುರಿದರೆ, ಅದರ ಕಾರಣವನ್ನು ತಿಳಿದುಕೊಂಡು ಅದನ್ನು ಸರಿಪಡಿಸುವ ಶಕ್ತಿ, ಆ ಯಂತ್ರವನ್ನು ಉಪಯೋಗಿಸುವವನಲ್ಲಿ ಇರಬೇಕಾಗುತ್ತದೆ. ಯಂತ್ರವು

ಬಹಳವಾಗಿಯೇ ಕೆಟ್ಟಿದ್ದರೆ ಅದನ್ನು ಸರಿಪಡಿಸಲಂತೂ ಯಂತ್ರತಜ್ಞರು ಬೇಕೇ ಬೇಕು; ಆದರೆ ನಿತ್ಯದ ಅಲ್ಪಸ್ವಲ್ಪ ದುರಸ್ತಿಯ ವಿಚಾರ, ಯಂತ್ರ ವನ್ನು ಉಪಯೋಗಿಸುವ ಎಲ್ಲರಿಗೂ ಗೊತ್ತಿರಬೇಕಾಗುತ್ತದೆ.

ಹೊಲಿಗೆಯ ಯಂತ್ರವನ್ನು ಕೊಳ್ಳುವಾಗ, ಯಂತ್ರದ ವಿವಿಧ ಭಾಗಗಳ ವಿವರವಾದ ಪರಿಚಯವುಳ್ಳ ಒಂದು ಚಿಕ್ಕ ಪುಸ್ತಕವನ್ನೂ ಅದರ ಜೊತೆಗೆ ಕೊಡುತ್ತಾರೆ. ಆದರೆ ಅದು ನಮ್ಮ ಭಾಷೆಯಲ್ಲಿಲ್ಲದ್ದರಿಂದ ಹಲವರಿಗೆ ತಿಳಿ ಯದು; ತಿಳಿದರೂ ಹಲವರು ಆ ಪುಸ್ತಕವನ್ನು ಓದುವಗೊಡವೆಗೆ ಹೋಗರು. ಅವರಿಗೆ ಮುಖ್ಯವಾದುದು ಯಂತ್ರದ ಕೆಲಸವೊಂದೇ; ಅದಕ್ಕೆ ಬೇಕಾಗುವ ಪೂರ್ವತಯಾರಿ ಇಲ್ಲ. ಹೀಗಾಗಿ ಯಂತ್ರದ ಚಿಕ್ಕಪುಟ್ಟ ದುರಸ್ತಿಗಾಗಿ ಕೂಡ ಇತರರನ್ನು ಅವಲಂಬಿಸಬೇಕಾಗುತ್ತದೆ.

ಯಂತ್ರದಲ್ಲಿ ಕಸೂತಿಯನ್ನು ಹಾಕುವಾಗ, ಸಾದಾ ಹೊಲಿಗೆಯನ್ನು ಹಾಕುವಾಗಿನಕಿಂತ ಹೆಚ್ಚು ಲಕ್ಷ್ಯವನ್ನು ಯಂತ್ರದ ಕಡೆಗೆ ಪೂರೈಸಬೇಕಾಗು ತ್ತದೆ. ನಿತ್ಯದ ಹೊಲಿಗೆಯಲ್ಲಿ ಟಿಬ್ಬಿಯ ಅಳತೆಯನ್ನು ಸರಿಮಾಡುವ ಗುಂಡಿ ಯನ್ನು ಒಂದು ಸಲ ಸರಿಯಾಗಿಟ್ಟು, ಒತ್ತಡದ ಪ್ಲೇಟಿನ (Pressure bar) ಕೆಳಗೆ ಹೊಲಿಯುವ ಬಟ್ಟೆಯನ್ನಿಟ್ಟು ಬಿಟ್ಟರೆ, ಬಟ್ಟೆ ತನ್ನಿಂದ ತಾನೇ ಮುಂದ್ಸ ವರಿದು ಟಿಬ್ಬಿಗಳು ಒಂದೇ ಸಮನಾಗಿ ಬೀಳುವವು. ಆದರೆ ಕಸೂತಿಯನ್ನು ಹಾಕುವಾಗ ಮಾತ್ರ ಕಸೂತಿಯ ಪ್ಲೇಟು, ದಾರಗಳ ಬಿಗಿತ, ಒತ್ತಡ ಇವುಗಳ ವಿಷಯಕ್ಕೆಲ್ಲ ಹೆಚ್ಚು ಲಕ್ಷ್ಯವನ್ನು ಪೂರೈಸಬೇಕಾಗುತ್ತದೆ. ಒಂದು ಸಲ ಕಸೂತಿಯನ್ನು ಹಾಕಿ ಮತ್ತೆ ಬಿಚ್ಚಿದರೆ ಅದರ ಅಂದವೇ ಕೆಟ್ಟು ಹೋಗು ತ್ತದೆ; ಅದಕ್ಕಾಗಿ ಮೊದಲೇ ಜಾಗ್ರತೆ ವಹಿಸುವದು ಒಳ್ಳೆಯದು.

ಯಂತ್ರದಲ್ಲಿ, ಒಂದು ನಿಮಿಷಕ್ಕೆ ೨೦೦ರಿಂದ ಸುಮಾರು ೪೦೦ರವರೆಗೆ ಟಿಬ್ಬಿಗಳು ಬೀಳುತ್ತವೆ. ಈ ಸಂಖ್ಯೆ ಟಿಬ್ಬಿಗಳ ಅಂತರದ ಮೇಲೆಯೂ ಅವ ಲಂಬಿಸಿದೆ ಎನ್ನುವದನ್ನು ಬೇರೆ ಹೇಳಬೇಕಾಗಿಲ್ಲ. ಬಲಗಡೆಯ ಗಾಲಿಯ ಹತ್ತಿರ, ಮೇಲ್ಗಡೆಗೆ ಅಂಕಿಗಳಂತೆ ಮೇಲೆ ಕೆಳಗೆ ಸರಿಸಾಡಲು ಬರುವ ಒಂದು ಗುಂಡಿಯಿರುತ್ತದೆ; ಇದೇ ಟಿಬ್ಬಿಗಳ ಅಂತರವನ್ನು ಸರಿಪಡಿಸುವ ಗುಂಡಿ; ಬಹುತರವಾಗಿ ಮೇಲೆ ಸರಿಸಿದರೆ ಟಿಬ್ಬಿಗಳು ದೊಡ್ಡವಾಗುತ್ತವೆ;

( ಈ ತರಹದ ಹೊಲಿಗೆಯನ್ನು, ನಿರಿಗೆ ಹಿಡಿಯುವಾಗ ಉಪಯೋಗಿಸುವದುಂಟು;) ಮತ್ತೆ ಕೆಳಗೆ ಸರಿಸಿದರೆ ಟೆಬ್ಬಿಗಳು ತೀರ ಸಣ್ಣವಾಗಿ ಬಿಡುವವು. ಅದಕ್ಕಾಗಿ ದಿನದ ಹೊಲಿಗೆಯನ್ನು ಹೊಲಿಯುವಾಗ ಈ ಗುಂಡಿಯನ್ನು ಸಾಮಾನ್ಯವಾಗಿ ಮಧ್ಯದಲ್ಲಿಡುವರು. ಆದರೆ ಕಸೂತಿಯನ್ನು ಹಾಕುವಾಗ ಈ ಗುಂಡಿಯ ಪ್ರಶ್ನೆ ವಿಶೇಷವಾಗಿ ಉದ್ಭವಿಸುವದೇ ಇಲ್ಲ.

ಹೊಲಿಯುವಾಗ ಯಂತ್ರದ ವೇಗವನ್ನೂ ಒಂದೇ ಸಮನಾಗಿಡಬೇಕು. ಯಂತ್ರವನ್ನು ಭರ್ರನೆ ತಿರುವಿ, ಒಮ್ಮೆಲೇ ನಿಲ್ಲಿಸಿ ಬಿಡುವದರಿಂದ, ಯಂತ್ರದ ಕೆಲ ಭಾಗಗಳಿಗೆ ಧಕ್ಕೆ ತಗಲುವ ಸಂಭವವಿರುತ್ತದೆ. ಅಲ್ಲದೆ ಸೂಜಿಯಲ್ಲಿ ದಾರವನ್ನು ಪೋಣಿಸಿ, ಕೆಳಗೆ ಬಟ್ಟೆಯನ್ನಿಡದೆ ಎಂದೂ ಹೊಲಿಯಕೂಡದು. ದಾರವನ್ನು ಪೋಣಿಸದೆಯೂ ಕೂಡ, ಸುಮ್ಮನೆ ಗಾಲಿಯನ್ನು ತಿರುಗಿಸಕೂಡದು; ಇದರಿಂದ ಸೂಜಿಯ ತುದಿಯೂ ಮೊಂಡವಾಗಿ, ಶಟಲ್ಲಿಗೆ ಕೂಡ ಧಕ್ಕೆ ತಗಲುವದು.

ಯಂತ್ರದ ವಿವಿಧ ಭಾಗಗಳೆಲ್ಲ ಸರಿಯಾಗಿ ಕೆಲಸ ಮಾಡಲು ಅವುಗಳನ್ನು ಸ್ವಚ್ಛವಾಗಿರಿಸಿ ಮೇಲಿಂದ ಮೇಲೆ ಎಣ್ಣೆ ಹಾಕುವದು ಅವಶ್ಯ; ಎಣ್ಣೆ ಹಾಕುವದರಿಂದ, ಯಂತ್ರವು ಸಪ್ಪಳ ಮಾಡದೆ, ಸರಾಗವಾಗಿ ಕೆಲಸ ಮಾಡುವದು. ಮತ್ತು ಯಂತ್ರದ ಬೇರೆ ಬೇರೆ ಭಾಗಗಳು ಒಂದಕ್ಕೊಂದು ತಿಕ್ಕಿ ಸವೆಯುವದಿಲ್ಲ. ಯಂತ್ರಕ್ಕೆ ಜಂಗು ಹಿಡಿಯುವದಿಲ್ಲ.

ಯಂತ್ರಕ್ಕೆ ಎಣ್ಣೆ ಹಾಕುವದಕ್ಕಿಂತ ಮೊದಲು ಯಂತ್ರವನ್ನು ಸ್ವಚ್ಛವಾಗಿ ಒರೆಸಬೇಕು. ಇಲ್ಲದಿದ್ದರೆ ಯಂತ್ರದ ಒಳಗಡೆಯಲ್ಲಿ ಧೂಳು ಎಣ್ಣೆ ಕಲೆತು ಗಟ್ಟಿಯಾಗಿ ಹತ್ತಿಕೊಂಡು ಬಿಡುವದು. ಯಂತ್ರದ ಮೇಲ್ಗಡೆಗೆ ಇರುವ ತೂತುಗಳೆಲ್ಲ ಸಾಮಾನ್ಯವಾಗಿ, ಎಣ್ಣೆಯನ್ನು ಒಳಗೆ ಬಿಡುವದಕ್ಕಾಗಿಯೇ ಇವೆ; ಎಣ್ಣೆ ಹಾಕುವಾಗ ಎಡದಿಂದ ಬಲಕ್ಕೆ (ಅಥವಾ ಬಲದಿಂದ ಎಡಕ್ಕೆ) ಕ್ರಮವನ್ನು ತಪ್ಪದಂತೆ ಪ್ರತಿಯೊಂದು ತೂತಿನಲ್ಲೂ ಎಣ್ಣೆಯನ್ನು ಹನಿಹನಿಯಾಗಿ ಬಿಡುತ್ತ ಹೋಗಬೇಕು; ಧಾರೆಗಟ್ಟಿ ಸುರುವಬಾರದು. ಮತ್ತು ಎಣ್ಣೆಯನ್ನು ಹಾಕುತ್ತಿರುವಾಗ, ಯಂತ್ರದ ಗಾಲಿಯನ್ನು ಸಾವಕಾಶವಾಗಿ ತಿರುಗಿಸುತ್ತಿರಬೇಕು. ಇದರಿಂದ ಎಣ್ಣೆ ಎಲ್ಲ ಭಾಗಗಳಿಗೂ ಸರಿಯಾಗಿ ಹತ್ತಿಕೊಳ್ಳುವದು.

ಯಂತ್ರದ ಮೇಲಿನ ತೂತುಗಳಿಂದ ಎಣ್ಣೆ ಕೆಳಗಿಳಿದರೂ, ಯಂತ್ರದ ಕೆಲವೊಂದು ಭಾಗಗಳಿಗೆ ನೇರವಾಗಿ ಎಣ್ಣೆ ಮುಟ್ಟುವದಿಲ್ಲ; ಇದಕ್ಕಾಗಿ ಆಯಾ ಭಾಗಗಳನ್ನು ಎತ್ತಿ ಎಣ್ಣೆಯನ್ನು ಹಾಕಬೇಕಾಗುತ್ತದೆ. ಉದಾಹರಣೆಗೆ ಸೂಜಿಯ ಹತ್ತರ ಎಡಗಡೆಗಿರುವ ಕವ್ಹರ (ಫೇಸಪ್ಲೇಟ) ನ್ನು ತೆಗೆದು, ಒಳಗೆ ತಿರುಗುವ ಭಾಗಗಳಿಗೆಲ್ಲ ಎಣ್ಣೆಯನ್ನು ಹಾಕಬೇಕಾಗುತ್ತದೆ; ಯಂತ್ರದ ಹಿಂಬದಿಗಿರುವ ದುಂಡನ್ನ ಪ್ಲೇಟನ್ನು ಸಡಿಲು ಮಾಡಿ ಅಲ್ಲಿಯೂ ಒಳಗೆ ಎಣ್ಣೆಯನ್ನು ಹಾಕಬೇಕಾಗುತ್ತದೆ. ಆಮೇಲೆ ಯಂತ್ರದ ಮೇಲ್ಭಾಗವನ್ನು ಪೂರ್ಣವಾಗಿ ಹೊರಳಿಸಿಯೂ ಕೆಳಗಿನ ಭಾಗಗಳಿಗೆ ಎಣ್ಣೆಯನ್ನು ಹಾಕಬೇಕಾಗುತ್ತದೆ; ಕೈಯಂತ್ರವಿದ್ದರೆ ಎಣ್ಣೆ ಹಾಕುವದು ಇಷ್ಟಕ್ಕೆ ಮುಗಿಯುವದು; ಆದರೆ ಕಾಲಿನ ಯಂತ್ರದಲ್ಲಿ ಎಣ್ಣೆಯನ್ನು ಕೆಳಗಡೆಯ ಸ್ಟ್ಯಾಂಡಿನಲ್ಲಿಯೂ ಹಾಕಬೇಕಾಗುವದು. ಗಾಲಿ, ಫೂಟಬೋರ್ಡ (ಕಾಲನ್ನಿಡುವ ಫಳಿ) ತಿರುಗುವಲ್ಲೆಲ್ಲ ಎಣ್ಣೆಯನ್ನು ಬಿಡಬೇಕಾಗುತ್ತದೆ; ಅಂತೂ ಯಂತ್ರದಲ್ಲಿ ತಿರುಗುವ ಭಾಗಗಳಿಗೆಲ್ಲ ಎಣ್ಣೆಯನ್ನುಣಿಸುವದು ಅವಶ್ಯವಾದದ್ದು ಮತ್ತು ಮಹತ್ವವಾದದ್ದು.

ಯಂತ್ರದಲ್ಲಿ ಶಟಲ್ ಮುಖ್ಯವಾದದ್ದು; ಸ್ಕ್ರೂಗಳನ್ನು ಸಡಿಲುಮಾಡಿ ತೆಗೆದು, ಶಟಲನ್ನೂ ಮೇಲಿಂದ ಮೇಲೆ ಸ್ವಚ್ಛಮಾಡುವದು ಅವಶ್ಯವಿರುವದು ಅದರಂತೆಯೇ ನೀಡಲ್ ಪ್ಲೇಟನ್ನು ಕೂಡ; ಆದರೆ ಇದರ ಕೆಳಗೆ ಎಣ್ಣೆಯನ್ನು ಮಾತ್ರ ಹಾಕುವ ಕಾರಣವಿಲ್ಲ.

**ಹೊಲಿಯುವದಾದ ಮೇಲೆ:**

ಮಶೀನದಲ್ಲಿ ಹೊಲಿಯುವದಾದ ಮೇಲೆ ಸೂಜಿಯಲ್ಲಿ ಪೋಣಿಸಿದ ದಾರವನ್ನು ತೆಗೆದುಬಿಡಬೇಕು. ಇಲ್ಲದಿದ್ದರೆ ದಾರವು ಮೇಲೆ ಕೆಳಗೆ ಹೋಗಿ (ಬಟ್ಟೆಯಿಲ್ಲದ್ದರಿಂದ) ಕೆಳಗೆ ಶಟಲ್‌ದಲ್ಲಿ ಸಿಕ್ಕಿಕೊಳ್ಳುವದು. ಹೀಗಾಗಿ ಮತ್ತೆ ಹೊಲಿಯಲು ಹೋದರೆ ಹೊಲಿಗೆ ಸರಿಯಾಗಿ ಬೀಳದೆ ಗಂಟು ಗಂಟಾಗುವದು. ಅದಕ್ಕಾಗಿ ಮೊದಲೇ ಲಕ್ಷ್ಯಕೊಡುವದು ಒಳ್ಳೆಯದು.

**ಯಂತ್ರಕ್ಕಾಗಿ ಉಪಯೋಗಿಸುವ ಎಣ್ಣೆ:**

ಯಂತ್ರದಲ್ಲಿ ಯಾವದೇ ವನಸ್ಪತಿಜನ್ಯ ಎಣ್ಣೆಯನ್ನು ಉಪಯೋಗಿಸುವದು ಒಳ್ಳೆಯದಲ್ಲ. ಯಾಕಂದರೆ ಅಂತಹ ಎಣ್ಣೆಯು ಹವಾಮಾನಕ್ಕನುಸರಿಸಿ

ಹೆಪ್ಪುಗಟ್ಟುತ್ತಲೂ, ಕರಗುತ್ತಲೂ ಹೋಗುತ್ತದೆ; ಉದಾಹರಣೆಗೆ ಕೊಬ್ಬರೀ ಎಣ್ಣೆಯು ಚಳಿಗಾಲದಲ್ಲಿ ಹೆಪ್ಪುಗಟ್ಟುತ್ತದೆ; ಮತ್ತು ಬೇಸಿಗೆಯಲ್ಲಿ ಕರಗಿ ಬಿಡುತ್ತದೆ. ಎಣ್ಣೆ ಹೆಪ್ಪುಗಟ್ಟುವದರಿಂದ, ಯಂತ್ರವು ಜಡವಾಗುತ್ತದೆ; ಕರಗಿ ಬಿಡುವದರಿಂದ ಯಂತ್ರದ ಯಾವ ಭಾಗಗಳಿಗೂ ಎಣ್ಣೆಯನ್ನು ಪೂರೈಸುವದು ಸಾಧ್ಯವಾಗುವದಿಲ್ಲ. ಅದಕ್ಕಾಗಿ ಎಷ್ಟೋ ಜನರು ಕೊಬ್ಬರಿ ಎಣ್ಣೆಯಲ್ಲಿ ಚಿಮಣಿಎಣ್ಣೆಯನ್ನು ಕೂಡಿಸಿ ಯಂತ್ರಕ್ಕೆ ಹಾಕುವರು. ಆದರೆ ಇದೂ ಕೂಡ ಯಂತ್ರಕ್ಕೆ ಅಷ್ಟೊಂದು ಒಳ್ಳೆಯದಲ್ಲ; ಅದಕ್ಕೆಂದು ಯಂತ್ರಕ್ಕೆ ಕಾಲ್ಟೆಕ್ಸ ಎಣ್ಣೆಯಂತಹ ಎಣ್ಣೆಯು ಅತ್ಯಂತ ತಿಳಿಯಾದ ಥರವನ್ನು–ಇದಕ್ಕೇ ಸ್ಪಿಂಡಲ್ ಆಯಿಲ್ ಎಂದು ಹೇಳುವರು–, ಉಪಯೋಗಿಸುವದು ಬಹಳ ಒಳ್ಳೇದು. ಇದರಿಂದ ಯಂತ್ರವೂ ಬಹುಕಾಲ ಬಾಳುವದು.

### ಯಂತ್ರದಲ್ಲಿ ಮೇಲಿನ ಮತ್ತು ಕೆಳಗಿನ ದಾರಗಳ ಬಿಗಿತ (Tension)

ಹೊಲಿಯುವಾಗ ಈ ಎರಡೂ ದಾರಗಳ ಬಿಗಿತ ಸರಿಯಾಗಿದ್ದರೆ ಮಾತ್ರ ಟಿಬ್ಬಿಗಳು ಸರಿಯಾಗಿ ಬೀಳುತ್ತವೆ. ಮೇಲಿನ ದಾರ ಸಡಿಲಾಗಿದ್ದರೆ ಕೆಳಗಿನ ಟಿಬ್ಬಿಗಳು ಸಡಿಲಾಗಿಯೂ, ಕೆಳಗಿನ ದಾರ ಸಡಿಲಾಗಿದ್ದರೆ ಮೇಲಿನ ಟಿಬ್ಬಿಗಳು ಸಡಿಲಾಗಿಯೂ ಬೀಳುತ್ತವೆ. ಎಡೆಗಡೆಗಿರುವ ಸ್ಕ್ರೂವೊಳೆ ಸಡಿಲಾಗಿ ಹೊರಬದಿಗೆ ಬಂದಿರುವದರಿಂದ ಮೇಲಿನ ದಾರವು ಸಡಿಲಾಗುವದು. ಹಾಗಾದಾಗ ಅದನ್ನು ಕೊಂಚ ಒಳಗಡೆಗೆ ತಿರುವಿ ಬಿಗಿ ಮಾಡಬಹುದು. ಅದರಂತೆಯೇ ಕೆಳಗಡೆಗೆ ಡಬ್ಬಿಯಲ್ಲಿ ಬಾಬಿನ್ನು ಸರಿಯಾಗಿ ಕೂಡದಿದ್ದರೆ ಇಲ್ಲವೆ ದಾರ ಹಾಯ್ದು ಬರುವಲ್ಲಿ ಕಸರು ಕೂತಿದ್ದರೆ, ಕೆಳಗಿನ ದಾರ ಸಡಿಲಾಗಿ ಮೇಲಿನ ಟಿಬ್ಬಿಗಳು ಸಡಿಲಾಗುವವು. ಕೆಳಗಿನ ದಾರವನ್ನು ಪುನಃ ಸರಿ ಮಾಡಿ ಕೂಡಿಸಿದರೆ, ಮತ್ತೆ ಟಿಬ್ಬಿಗಳು ಸರಿಯಾಗಿ ಬೀಳುವವು.

ದಾರಗಳ ಈ ಬಿಗಿತ, ಮೇಲಿನ ಮತ್ತು ಕೆಳಗಿನ ದಾರಗಳ ನಂಬರು, ಹೊಲಿಯಬೇಕಾದ ಬಟ್ಟೆ, ಮತ್ತು ಹಾಕಬೇಕಾದ ಹೊಲಿಗೆ ಈ ಮೂರನ್ನೂ ಅವಲಂಬಿಸಿರುತ್ತದೆ. ಯಂತ್ರದಲ್ಲಿ ಕಸೂತಿಯನ್ನು ಹಾಕುವಾಗ ವಿಶೇಷವಾಗಿ, ಈ ದಾರಗಳ ಬಿಗಿತದ ಕಡೆಗೆ ಹೆಚ್ಚಾಗಿ ಲಕ್ಷ್ಯವನ್ನು ಪೂರೈಸಬೇಕಾಗುತ್ತದೆ. ಯಂತ್ರದಲ್ಲಿ ಕಸೂತಿಯನ್ನು ಹಾಕುವಾಗ ಬಹುತರವಾಗಿ ಮೇಲಿನ ಮತ್ತು ಕೆಳಗಿನ ದಾರಗಳ ನಂಬರು ಒಂದೇ ಆಗಿರುವದಿಲ್ಲ. ಮೇಲಿ

೮೦ ನಂಬರಿನ ದಾರವೂ ಕೆಳಗೆ ೬೦ ನಂಬರಿನ ದಾರವೂ ಇರುತ್ತವೆ. ಎರಡೂ ಬದಿಗೆ ಸರಿಯಾದ ಟಿಬ್ಬಿಗಳು ಬೀಳಬೇಕಾದರೆ, ಕೆಳಗಿನ ದಾರ ಮೇಲಿನ ದಾರಕ್ಕಿಂತ ಕೊಂಚ ಸಡಿಲಾಗಿರಬೇಕಾಗುತ್ತದೆ. ಅಥವಾ ಸ್ಯಾಟಿನ್ ಸ್ಟಿಚ್ ದಂತಹ ಹೊಲಿಗೆಯನ್ನು ಹಾಕುವಾಗ, ಮೇಲಿನ ದಾರವನ್ನು ಕೊಂಚ ಸಡಿಲಾಗಿಡಬೇಕಾಗುತ್ತದೆ.

ಅದಕ್ಕಾಗಿ ಈ ಎರಡೂ ದಾರಗಳ ಬಿಗಿತದ ಬಗ್ಗೆ ಹೆಚ್ಚು ಲಕ್ಷ್ಯವನ್ನು ಪೂರೈಸಿ, ಸರಿಯಾಗಿ ತಿಳಿದುಕೊಳ್ಳುವದು ಅವಶ್ಯವಾಗಿರುತ್ತದೆ. ಯಂತ್ರದಲ್ಲಿ ಮೇಲೆ ಕೆಳಗೆ ಒಂದೇ ನಂಬರಿನ ದಾರವನ್ನು ಅಥವಾ ರೇಶಿಮೆಯನ್ನು ಉಪಯೋಗಿಸಿದರೆ ಈ ಪ್ರಶ್ನೆ ಸಾಧಾರಣವಾಗಿ ಬರುವದಿಲ್ಲ. ಆದರೆ ಮಿತವ್ಯಯದ ದೃಷ್ಟಿಯಿಂದ ಕೆಳಗೆ ಕಡಿಮೆ ನಂಬರಿನ ದಾರವನ್ನೂ ಉಪಯೋಗಿಸಬಹುದು. ಹಲವು ಸಲ ಕೆಳಗಿನ ಡಬ್ಬಿಯಲ್ಲಿ ಬಾಬಿನ್ ಸರಿಯಾಗಿ ಕೂಡದ್ದರಿಂದ ಅಥವಾ ದಾರವು ಹೊರಬರುವಲ್ಲಿ ಡಬ್ಬಿಯ ನಾಲಿಗೆಯಲ್ಲಿ ಕಸರು ಕೂತಿರುವದರಿಂದ, ದಾರ ಸರಿಯಾಗಿ ಬರದೆ ಮೇಲಿನ ಟಿಬ್ಬಿಗಳು ಸಡಿಲಾಗಿ ಬೀಳಬಹುದು. ಅಜಾಗರೂಕತೆಯಿಂದಾಗಿ ಬೀಳುವ ಈ ಸಡಿಲುಟಿಬ್ಬಿ ಕಸೂತಿಯಲ್ಲಿಯೂ ಹೆಚ್ಚು ಕೆಲಸಕ್ಕೆ ಬಾರದು. ಕಾರ್ಡಿಂಗ, ನೇಯ್ಗೆ ಟಿಬ್ಬಿ, ಸಾಟಿನ್ ಹೊಲಿಗೆಗಳಲ್ಲಿ ಮೇಲಿನ ದಾರ ಹೆಚ್ಚು ಅಂತರವನ್ನು ಆಕ್ರಮಿಸಬೇಕಾದ್ದರಿಂದ, ಸಡಿಲಾಗಿರಬೇಕಾಗುತ್ತದೆ. ಬಟ್ಟೆ ತೀರ ದಪ್ಪವಾಗಿದ್ದರೆ, ಗಾತ್ರಕ್ಕನುಸಾರವಾಗಿ ಮೇಲಿನ ದಾರ ಆಗಲೂ ಸಡಿಲಾಗಿರಬೇಕಾಗುತ್ತದೆ. ದಾರದ ಬಿಗಿತ, ಹಾಕುವ ಹೊಲಿಗೆ, ಬಟ್ಟೆ, ದಾರದ ನಂಬರುಗಳನ್ನು ಅವಲಂಬಿಸಿರುವಂತೆ, ಬೀಳುವ ಹೊಲಿಗೆ ಸೂಜಿಯ ನಂಬರನ್ನೂ ಅವಲಂಬಿಸಿದೆ. ಹೊಲಿಗೆ ನಯವಾಗಬೇಕಾಗಿದ್ದರೆ ದಾರದ ನಂಬರು ಹೆಚ್ಚಾಗಿದ್ದರೆ ೭-೮-೯ ನಂಬರಿನ ಯಂತ್ರದ ಸೂಜಿಗಳನ್ನೇ ಉಪಯೋಗಿಸುವದು ಒಳ್ಳೆಯದು.

**ಯಂತ್ರವನ್ನು ಸರಿಪಡಿಸುವ ಕೆಲ ಉಪಾಯಗಳು :**

ಯಂತ್ರವು ಜಡವಾಗಿ ಸರಿದಾಡುತ್ತಿದ್ದರೆ—ಯಂತ್ರದ ಚಕ್ರದಲ್ಲಿ ಸಿಕ್ಕಿಸಿದ ತೊಗಲಿನ ಪಟ್ಟಿ ಬಹಳ ಸಡಿಲಾಗಿದ್ದರೆ, ಚಕ್ರವನ್ನು ಬಹಳ ಕಸುವಿನಿಂದ ತಿರುಗಿಸಬೇಕಾಗುವದು; ತೀರ ಬಿಗಿಯಾಗಿದ್ದರೂ ಹಲವು ಸಲ ಹಾಗೇ ಆಗುವದು. ಪಟ್ಟಿ ಸಾಧಾರಣ ಬಿಗಿಯಾಗಿರಬೇಕು. ಸದ್ಯ ಪ್ರಚಾರದಲ್ಲಿರುವ

ಯಂತ್ರಗಳಿಗೆ ಸುಮಾರಾಗಿ ೬ ಫೂಟು ಉದ್ದದ ತೊಗಲಿನ ಪಟ್ಟಿ ಬೇಕಾಗುವದು.

ಶಟಲಿನಲ್ಲಿ ಕಸರು ಕೂತಿದ್ದರೂ ದಾರ ಸರಿಯಾಗಿ ಬರದೆ ಯಂತ್ರ ಜಡವಾಗಿ ನಡೆಯುವದು. ಅದಕ್ಕಾಗಿ ಶಟಲನ್ನೂ ಅದರ ಭಾಗಗಳನ್ನೂ ಹೊರ ದೆಗೆದು ಸ್ವಚ್ಛಮಾಡಿ, ಎಣ್ಣೆ ಹಾಕಿ ಮತ್ತೆ ಸರಿಯಾಗಿ ಕೂಡಿಸಬೇಕು. ಯಂತ್ರದ ಬೇರೆ ಬೇರೆ ಭಾಗಗಳಲ್ಲಿ ಕಸರು ಕೂತಿರುವದೇ ಅನೇಕ ಸಲ ಇದಕ್ಕೆ ಕಾರಣವಾಗಿರುತ್ತದೆ.

**ಯಂತ್ರದ ದಾರ ಹರಿಯುತ್ತಿದ್ದರೆ**— (ಅ) ದಾರದಲ್ಲಿ ಕಸುವಿಲ್ಲದಿದ್ದರಂತೂ ಸರಿಯೇ ಸರಿ; ಜೊತೆಗೆ ಯಂತ್ರದಲ್ಲಿ ಮೇಲಿನ ದಾರ ಪೋಣಿಸುವದು ತಪ್ಪಿದ್ದರೂ ದಾರ ಹರಿಯುವದು ಹೊಲಿಗೆ ಗಂಟು ಗಂಟಾಗುವದು. ಕೆಳಗೆ ಕೊಟ್ಟ ಚಿತ್ರದಲ್ಲಿ ತೋರಿಸಿದಂತೆ ದಾರವನ್ನು ಜಾಗರೂಕತೆಯಿಂದ ಪೋಣಿಸಬೇಕು.



(ಬ) ಸೂಜಿಯು ಸರಿಯಾಗಿ ಕೂತಿರದಿದ್ದರೂ ದಾರ ಹರಿಯುವದು; ಸೂಜಿಯ ಮೇಲಿನ ಚಪ್ಪಟೆಯಾದ ಭಾಗ ಯಂತ್ರಕ್ಕೆ ಹೊಂದಿಕೊಂಡಿದ್ದು, ದುಂಡಾದ ಭಾಗ ಹೊರಗಡೆಗೆ ಬರುವಂತೆ ಸೂಜಿಯನ್ನು ಕೂಡಿಸಬೇಕು. ಸೂಜಿಯ ತುದಿ ಧಕ್ಕೆಯಾಗದಂತೆ ಸರಿಯಾಗಿ ಕೆಳಗಿಳಿಯುತ್ತಿರಬೇಕು.

ಸೂಜಿ ಮಣಿದಿದ್ದರೆ, ಅಥವಾ ತುದಿ ಮೊಂಡಾಗಿದ್ದರೆ ಆಗಲೂ ದಾರ ಹರಿಯುವದು. ಇಲ್ಲವೆ ಸೂಜಿಯ ಗಾತ್ರ, ದಾರದ ಗಾತ್ರ ಒಂದಕ್ಕೊಂದು

ಸರಿಯಾಗಿರದಿದ್ದರೆ ಆಗಲೂ ದಾರ ಹರಿಯುವದು. ಡಬ್ಬಿಯಲ್ಲಿ ಬಾಬಿನ್ನನ್ನು ಸರಿಯಾಗಿ ಕೂಡಿಸಿ, ಮೇಲೆ ಹೇಳಿದ ಸಂಗತಿಗಳ ಕಡೆಗೆ ಲಕ್ಷ್ಯ ಪೂರೈಸಿದರೆ, ಯಂತ್ರವು ಸರಿಯಾಗಿಯೇ ನಡೆಯುವದು.

ಶಟಲ್ಲು ಸವೆದಿದ್ದರೆ ಅದರ ತುದಿ ಹದನಾಗಿ ದಾರ ಹರಿಯುತ್ತಿರುತ್ತದೆ. ಆಗ ಹೊಸ ಶಟಲನ್ನು ಹಾಕುವದೊಂದೇ ಉಪಾಯ.

ಬಟ್ಟೆಯನ್ನು ದಾರದಿಂದ ಬಿಡಿಸಿ ಹೊರದೆಗೆಯುವಾಗ, ಅನೇಕರು ಹಾಗೇ ಅದನ್ನು ಎಳೆದುಬಿಡುವದರಿಂದ ಸೂಜಿಯ ತುದಿ ಮಣಿಯುತ್ತದೆ. ಸೂಜಿಯನ್ನು ಮೇಲಕ್ಕೆತ್ತಿ ಬಟ್ಟೆಯನ್ನು ಬಿಡಿಸಿಕೊಂಡರೆ, ಸೂಜಿ ಮಣಿಯುವ ಸಂಭವ ಹೆಚ್ಚಾಗಿರುವದಿಲ್ಲ.

ಬಹುತರವಾಗಿ ಎಲ್ಲ ಹೊಲಿಗೆಯ ಯಂತ್ರಗಳ ಗಾಲಿಗಳೂ ನಮ್ಮ ಬದಿಗೆ ಹೊರಳಿ ತಿರುಗುತ್ತವೆ. ಹೀಗೆ ತಿರುಗುವ ಚಕ್ರ ಹಾಗೆ ವಿರುದ್ಧ ತಿರುವಿದರೆ ಆಗಲೂ ದಾರ ಹರಿಯುತ್ತದೆ. ಇನ್ನು ಕೆಲವೊಂದು ಯಂತ್ರಗಳಲ್ಲಿ ಗಾಲಿ ನಮ್ಮ ವಿರುದ್ಧ ದಿಕ್ಕಿಗೆ ತಿರುಗುವ ವಿರ್ಪಾಟೇ ಇರುತ್ತದೆ; ಆಗಿನ ಮಾತು ಬೇರೆ.

**ಸೂಜಿ ಮುರಿಯುವದು**—ಬಟ್ಟೆಯನ್ನು ಎಳೆದು ಹೊರದೆಗೆದರೆ ಸೂಜಿ ಮುರಿಯುವ ಸಂಭವ ಹೆಚ್ಚು; ಸೂಜಿಯನ್ನು ಕೂಡ್ರಿಸುವ ಸ್ಕ್ರೂವೊಳೆ ಗಟ್ಟಿಯಾಗಿ ಕೂತಿರದಿದ್ದರೆ, ಅಥವಾ ಸೂಜಿಯೇ ಕೆಳಗೆ ಸರಿದು ಬಿಟ್ಟಿದ್ದರೆ, ಆಗಲೂ ಮುರಿಯುವ ಸಂಭವವಿದೆ. ಕಸೂತಿಯಲ್ಲಿ ' ಪಿನ್ ವರ್ಕ ' ಮಾಡುವಾಗ ಕೈಸೂಜಿಗೆ ತಗಲಿ ಯಂತ್ರದ ಸೂಜಿ ಮುರಿಯುತ್ತದೆ.

## ಟಿಬ್ಬಿ ಸರಿಯಾಗಿ ಬೀಳದಿದ್ದರೆ—

ಟಿಬ್ಬಿ ಹಾಕುವದು : ಯಂತ್ರದ ಸೂಜಿ ಮೇಲೆ ಸರಿದಿದ್ದರೆ, ನಡುನಡುವೆ ಟಿಬ್ಬಿಗಳು ಹಾರುವವು. ಆಗ ಸೂಜಿಯನ್ನು ಸ್ವಲ್ಪ ಕೆಳಗಿಳಿಸಬೇಕು. ಈ ಸೂಜಿಯನ್ನು ಎಷ್ಟು ಮೇಲೆ ಕೂಡಿಸಬೇಕು ಎಂಬುದಕ್ಕೂ ಪ್ರಮಾಣವಿದೆ. ಈ ಪ್ರಮಾಣವನ್ನೇ ಅಲ್ಲಿರುವ ತಂತಿ ತೋರಿಸುವದು.

**ಮೇಲಿನ ಟಿಬ್ಬಿ ಸರಿಯಾಗಿಡುವದು**: ಬಾಬಿನ್‌ದಿಂದ ದಾರ ಸರಿಯಾಗಿ ಹೊರಬಂದಿದ್ದರೆ, ಈ ದಾರದ ಮೇಲಿನ ಬಿಗಿತ ಕಡಿಮೆಯಾಗಿದ್ದರೆ,

ಮೇಲಿನ ಟೆಬ್ಬಿ ಸಡಿಲಾಗಿ ಗಂಟುಗಂಟಾಗಿ ಬೀಳುವದು. ಕೆಳಗಿನ ಟೆಬ್ಬಿ ಸಡಿಲಾಗಿದ್ದರೆ ಮೇಲಿನ ದಾರವನ್ನು ಬಿಗಿ ಮಾಡಬೇಕು.

ಮೇಲೆ ಕೆಳಗೆ ಒಂದೇ ನಂಬರಿನ ದಾರವಿಲ್ಲದಿದ್ದರೆ, ಬಿಗಿತಗಳನ್ನು ಸರಿಪಡಿಸಿಕೊಳ್ಳಬೇಕಾಗುವದು. ಅಲ್ಲದೆ ದಾರಗಳ ಮೇಲಿನ ಬಿಗಿತ, ಹೊಲಿಯ






ತಕ್ಕ ಬಟ್ಟೆಯನ್ನೂ ಅವಲಂಬಿಸಿವೆ. ಬಟ್ಟೆ ಬಹಳ ತೆಳ್ಳಗಿದ್ದರೆ, ಮೊದಲು ಟೆಬ್ಬಿಗಳು ಚೆನ್ನಾಗಿ ಬೀಳುತ್ತಿದ್ದರೂ, ಆ ಬಟ್ಟೆಯು ಮೇಲೆ ಟೆಬ್ಬಿ ಎಳೆದಂತೆ ಮುದ್ದೆ ಮುದ್ದೆಯಾಗಿ ಬೀಳುವವು. ಇದಕ್ಕಾಗಿ ತೆಳುವಾದ ಬಟ್ಟೆಯು ಕೆಳಗೆ ಬಿರುಸಾದ ಕಾಗದವನ್ನಿಟ್ಟು ಹೊಲಿಯಬೇಕು. ಆರ್ಗಂಡಿ, ವಾಯಿಲ್ ಬಟ್ಟೆಗಳ ಮೇಲೆ ಕಸೂತಿಯನ್ನು ಹಾಕುವಾಗ ಕೆಳಗೆ ಕಾಗದವನ್ನಿಡುವದು ಇದೇ ಕಾರಣಕ್ಕಾಗಿಯೇ.



ಬಾಬಿನ್‌ದಲ್ಲಿ ದಾರವನ್ನು ಸರಿಯಾಗಿ ಸಮಪಾತಳಿಯಲ್ಲಿ ಸುತ್ತಿರದಿದ್ದರೆ, ಆಗಲೂ ಟೆಬ್ಬಿಗಳು (ಮೇಲಿನ) ಸರಿಯಾಗಿ ಬೀಳುವದಿಲ್ಲ. ಅದಕ್ಕಾಗಿ ಬಾಬಿನ್ನನ್ನು ಯಂತ್ರದಲ್ಲಿಯೇ ಸುತ್ತುವದು ಒಳಿತು.

**ಯಂತ್ರದಲ್ಲಿ ಸರಿಸಿದ ಬಟ್ಟೆ ಮುಂದೆ ಸರಿಯದಿದ್ದರೆ**— ನಿತ್ಯದ ಹೊಲಿಗೆಯಲ್ಲಿ ಬಟ್ಟೆ

ಯನ್ನು ಮುಂದೆ ಸರಿಸಲು ಯಂತ್ರದಲ್ಲಿ ಹಲ್ಲುಗಳಿರುತ್ತವೆ. ಕಸೂತಿಯಲ್ಲಿ ಬಟ್ಟೆಯನ್ನು ನಮಗೆ ಬೇಕಾದತ್ತ ಸರಿಸುವದಿರುವದರಿಂದ ಈ ಹಲ್ಲುಗಳನ್ನು ಮುಚ್ಚಿಬಿಡುತ್ತೇವೆ; ಪ್ಲೇಟಿನ ಉಪಯೋಗ ಇದಕ್ಕಾಗಿಯೇ; ಪ್ಲೇಟನ್ನು ಹಾಗೇ ಇಟ್ಟರೆ ದಿನದ ಹೊಲಿಗೆ ಮಾತ್ರ ಸಾಗದು;

ಎಷ್ಟೋ ಸಲ ಟೆಬ್ಬಿಗಳನ್ನು ದೊಡ್ಡದು ಸಣ್ಣದು ಮಾಡಲೆಂದಿದ್ದ ಬಲ ಬದಿಯ ಮೊಳೆ ಶೂನ್ಯ ನಂಬರಿನ ಮೇಲಿದ್ದರೆ ಬಟ್ಟೆ ಮುಂದೆ ಸರಿಯುವದೇ ಇಲ್ಲ. ಅದೇ ಸ್ಥಳದಲ್ಲಿ ಟೆಬ್ಬಿಗಳು ಮತ್ತೆ ಮತ್ತೆ ಬೀಳುತ್ತವೆ.

ಸೂಜಿಯ ತುದಿ ಮೊಂಡಾಗಿದ್ದರೂ, ಬಟ್ಟೆ ಮುದ್ದೆಯಾಗತೊಡಗುತ್ತದೆ; ಅಂತಹ ಸೂಜಿ ಎಳೆಗಳನ್ನು ಜಗ್ಗುತ್ತದೆ; ಆಗ ಹೊಸ ಸೂಜಿಯನ್ನೇ ಹಾಕಬೇಕು.

ಬಟ್ಟೆಯ ಮೇಲಿನ ಒತ್ತುವಿಕೆ (Pressure foot) ಕಡಿಮೆಯಾದರೂ ಬಟ್ಟೆ ಮುಂದೆ ಸರಿಯುವದಿಲ್ಲ. ಈ ಒತ್ತುವಿಕೆಯನ್ನು ಹೆಚ್ಚು ಕಡಿಮೆ ಮಾಡಲು ಎಡಗಡೆಗೆ ಫೇಸ್‌ಪ್ಲೇಟಿನ ಮೇಲ್ಬದಿಗೆ ಒಂದು ಸ್ಕ್ರೂ ಇದೆ. ಅದನ್ನು ಕೆಳಗೆ ಮೇಲೆ ಸರಿಸಿ ಒತ್ತುವಿಕೆಯನ್ನು ಹೆಚ್ಚು ಕಡಿಮೆ ಮಾಡಬಹುದು. ಒತ್ತುವಿಕೆ ಬಟ್ಟೆಯ ಮೇಲೆ ಬಹಳ ಹೆಚ್ಚಾದರೆ ಬಟ್ಟೆ ಹರಿಯುವ ಸಂಭವವಿರುತ್ತದೆ ಒತ್ತುವಿಕೆ ಪ್ರಮಾಣಬದ್ಧವಾಗಿರಬೇಕು.

**ಯಂತ್ರ ತಿರುಗದೆ ಒಮ್ಮೆಲೆ ನಿಂತುಬಿಡುತ್ತಿದ್ದರೆ**— ಗಾಲಿಯ ಸ್ಕ್ರೂ ಮೊಳೆಯನ್ನು ಯಾವುದೇ ಕಾರಣದಿಂದ ಸಡಿಲು ಮಾಡಿದ್ದು, ವಿರುದ್ಧ ದಿಕ್ಕಿಗೆ ತಿರುಗಿಸಿ ಪುನಃ ಗಟ್ಟಿಯಾಗಿ ಕೂಡಿಸಿರದಿದ್ದರೆ, ಗಾಲಿಯನ್ನು ತಿರುಗಿಸಿ ಸುರು ಮಾಡಿದ ಮೇಲೆಯೂ ಯಂತ್ರವು ಫಕ್ಕನೆ ನಿಂತುಬಿಡುವದು; ಅದಕ್ಕಾಗಿ ಮೊದಲು ಆ ಮೊಳೆಯನ್ನು ಗಟ್ಟಿಯಾಗಿ ಕೂಡಿಸಬೇಕು.

ಗಾಲಿಯ ತೊಗಲಿನ ಪಟ್ಟಿ ಬಹಳ ಸಡಿಲಾಗಿದ್ದರೆ, ಯಂತ್ರವು ಜಡವಾಗಿ ನಡೆದು ಒಮ್ಮೊಮ್ಮೆ ನಿಂತುಬಿಡುತ್ತದೆ. ಈ ಪಟ್ಟಿಗೆ ಎಣ್ಣೆ ಹತ್ತಿದ್ದರೆ, ಆಗಲೂ ಅದು ಚಕ್ರವನ್ನು ಸರಾಗವಾಗಿ ತಿರುಗಿಸಲಾರದು. ಈ ಪಟ್ಟಿಗೆ ಎಣ್ಣೆ ಹತ್ತದಂತೆ ನೋಡಿಕೊಳ್ಳಬೇಕು. ಹೊಸದಾಗಿದ್ದಾಗ ಈ ಪಟ್ಟಿ ಬಿಗಿಯಾಗಿದ್ದರೂ, ಮುಂದೆ ತಾನೇ ಸಡಿಲಾಗುವದು. ಬಹಳ ಸಡಿಲಾದರೆ ಒಂದೆರಡು ಇಂಚು ಕತ್ತರಿಸಿ ಮತ್ತೆ ಕಟ್ಟಬಹುದು.

ಇದಲ್ಲದೆ ಶಟಲ್ಲಿನಲ್ಲಿ ದಾರ ಸಿಕ್ಕು ಕಸರು ಕೂಡಿಬಿದ್ದಿದ್ದರೆ, ಹೊಲಿಯುವ ದಾರ ಗಂಟುಗಂಟಾಗಿ, ಬಟ್ಟೆ ಮುಂದೆ ಸರಿಯದೆ ಯಂತ್ರ ನಿಂತು ಬಿಡುವದು.

ಸುಮಾರಾಗಿ ಇವೆಲ್ಲ ಕಾರಣಗಳಿಗೂ ಲಕ್ಷ್ಯಕೊಟ್ಟರೆ, ಯಂತ್ರ ಕೆಡುವ ಸಂಭವ ಕಡಿಮೆ. ಯಂತ್ರದ ಆರೋಗ್ಯವನ್ನು ಕಾಪಾಡಿದರೆ ಅದರ ಶಕ್ತಿಯೂ ವಿಪುಲವಾಗುವದು; ದುಡಿಮೆಯೂ ಇಮ್ಮಡಿಯಾಗುವದು.

---



ಯಂತ್ರದ ಕಸೂತಿಯ ಮಾದರಿ

# ಕೈ-ಕಸೂತಿಯು ಕಲಾವೈಭವ



'ಓ ಭೂದೇವಿಯು ಹಚ್ಚ ಹಸಿರು ಸೀರೆಯನ್ನುಟ್ಟಂತೆ ಕಾಣುತ್ತಿದೆ; ನಡುನಡುವೆ ಎದ್ದು ಕಾಣುವ ಹಳದಿಯ ಹೂಗಳು ಆ ಸೀರೆಯೊಳಗಿನ ಕಸೂತಿಯಂತೆ ಕಾಣುತ್ತಿವೆಯಲ್ಲ !' ಎಂಬ ಉದ್ಗಾರ, ಮಳೆಗಾಲದಲ್ಲಿ ಹಸಿರಿನಿಂದ ಮುಚ್ಚಿದ ಭೂದೇವಿಯನ್ನು ನೋಡಿದಾಗ, ತೀರ ಸರಳವಾಗಿಯೇ ನಮ್ಮ ಬಾಯಿಂದ ಹೊರಡುವದಲ್ಲವೇ ! ಸುತ್ತಲೂ ಕತ್ತಲೆ ಮುಸುಕಿದಾಗ, ಮೇಲೆ ತಲೆಯೆತ್ತಿ ನೋಡಿದರೆ, ಅದೇನು ಚೆಲುವಾದ ನೋಟ ! ಬಂಗಾರದ ಹೂಗಳಿಂದ ಕೂಡಿದ ನೀಲಾಂಬರವನ್ನೇ ಮೇಲೆ ಹಾಸಿದಂತಿದೆ ! ಇನ್ನು ಅರುಣೋದಯದ ವೇಳೆಯಲ್ಲಿದ್ದು, ಪೂರ್ವದಿಕ್ಕಿನ ಕಡೆಗೆ ಕಣ್ಣು ಹೊರಳಿಸಿದರೆ! ಅಲ್ಲಿಯೂ ರಮ್ಯದರ್ಶನ !

ಬಟ್ಟೆಯ ಮೇಲೆ ಬೇರೆ ಬೇರೆ ಬಣ್ಣದ ದಾರದಿಂದ ಕಸೂತಿಯನ್ನು ತೆಗೆಯುವದು ರೂಢಿಯಲ್ಲಿ ಬಂದಬಳಿಕ ಈ ಕಲ್ಪನೆಗಳು ತಲೆದೋರಿದವೇ? ಇಲ್ಲ. ಬಣ್ಣಬಣ್ಣದ ಸುಂದರ ಸಮ್ಮಿಲನವನ್ನು ಸೃಷ್ಟಿಯಲ್ಲಿ ನೋಡಿಯೇ ಮನುಷ್ಯನು, ಕೃತ್ರಿಮ ರೀತಿಯಲ್ಲಿ, ತನಗೆ ತಿಳಿದಮಟ್ಟಿಗೆ ಅದನ್ನು ಅನುಕರಿಸುತ್ತಿದ್ದಾನೆ. ಈ ಅನುಕರಣೆಯನ್ನು ಮನುಷ್ಯ ಅದೆಂದೋ ಪ್ರಾರಂಭ ಮಾಡಿದ್ದಾನೆ. ಸೃಷ್ಟಿಯಲ್ಲಿಯ ಬಣ್ಣದ ಗುಟ್ಟನ್ನು ಕಣ್ಣಿನಿಂದ ಒಬ್ಬನು ತಿಳಿಯಲೆತ್ನಿಸಿದರೆ, ಹೃದಯದಿಂದ ಒಬ್ಬನು ತಿಳಿಯಲೆತ್ನಿಸುವನು; ಇನ್ನೊಬ್ಬನು ಕೈಯಿಂದ ತಿಳಿಯಲೆತ್ನಿಸಿದರೆ, ಮತ್ತೊಬ್ಬನು ಕಿವಿಯಿಂದ ತಿಳಿಯಲೆತ್ನಿಸುವನು! ಅವರಲ್ಲಿ ಒಬ್ಬನು ಚಿತ್ರಕಾರನಾಗಬಹುದು. ಒಬ್ಬನು ಕವಿಯಾಗಬಹುದು, ಇನ್ನೊಬ್ಬ ಶಿಲ್ಪಿ—ಶಿಲಾಶಿಲ್ಪಿಯೋ, ಸೂಚಿಶಿಲ್ಪಿಯೋ, ಆಗಬಹುದು. ಮತ್ತೊಬ್ಬ ಗಾಯಕನಾಗಬಹುದು. ಯಾರಿಗೆ ಯಾವ ಅಭಿರುಚಿಯೋ, ಅದರಿಂದಲೇ ಅವರು ವಿಶಿಷ್ಟ ಕಲೆಯ ಸಾಧನೆಯಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರಿಸುವರು. ಬಳಿಕ ಈ ಎಲ್ಲ ಕಲೆಗಳ ಅರ್ಥವೇನು? ಆ ಆ ಕಲಾವಿದರ ಭಾವನೆಗಳ ಪ್ರತಿಬಿಂಬಗಳಲ್ಲವೇ ಅವು? ಸೃಷ್ಟಿಯ ಹುಟ್ಟನ್ನು ಕಿವಿಯಿಂದ ತಿಳಿಯಲು ಆಶೆಪಟ್ಟ ಮನುಷ್ಯನೊಬ್ಬ—ಅವನು ಸಂಗೀತದ ಅಭ್ಯಾಸವನ್ನು ಮಾಡಿರದಿದ್ದರೂ ಸರಿ—ಕೇಳುವವರ ಹೃದಯ ತುಂಬಿಬರುವಂತೆ ರಾಗವಾಗಿ ಹಾಡಿಬಿಡಬಹುದು. ಬಳಿಕ ಈ ಕಲೆಗಳೆಲ್ಲ ದೇಶ, ಕಾಲ, ಜಾತಿ ವಿರಹಿತವಾದ ಮಾನವಜಾತಿಯ ಅಂತರ್ಗತ ಭಾವನೆಗಳ ಅನಂತಕಾಲದ ಅವ್ಯಕ್ತ ಭಾಷೆಗಳೇ ಅಲ್ಲವೇ? ನಿಜ, ಕಸೂತಿಯೂ ಅಂತಹದೊಂದು ಭಾಷೆ. ಸೂಜಿಯ ನೆರವಿನಿಂದ ಕಲಾವಿದನು ಬಟ್ಟೆಯ ಮೇಲೆ, ಬಣ್ಣಬಣ್ಣದ ರೇಶಿಮೆಯಿಂದ ತನ್ನ ಭಾವನೆಗಳನ್ನು ಮೂಡಿಸುವ ರೀತಿಯದು. ಆಂಗ್ಲನಿರಲಿ, ಹಿಂದೀಯನಿರಲಿ, ಮಹಮ್ಮದೀಯನಿರಲಿ, ಕಸೂತಿಯ ಮೂಲಕ ಭಾವನೆಗಳನ್ನು ವ್ಯಕ್ತಪಡಿಸುವದು ಎಲ್ಲರಲ್ಲಿಯೂ, ಎಂದಿನಿಂದಲೂ ನಡೆದೇ ಇದೆ. ಆದರೆ ಆ ಭಾವನೆಗಳೇ ದೇಶಕಾಲಗಳನ್ನನುಸರಿಸಿ ಬೇರೆ ಬೇರೆ ಆದರೆ, ಮೂಡುವ ಕಸೂತಿಯಲ್ಲಿಯೂ ಬದಲಾವಣೆಯಾಗುವದು ಸ್ವಾಭಾವಿಕ. ಆ ಭಾವನೆಗಳೂ ಭೌಗೋಲಿಕ, ಧಾರ್ಮಿಕ, ದೇಶಕಾಲಗಳ, ಪರಿಸ್ಥಿತಿಯ ಮೂಲಕ ಬೇರೆ ಬೇರೆ ವೇಷಗಳನ್ನು ಧರಿಸುವ ಸಂಭವ

ವಿದೆ; ಉದಾಹರಣೆಗೆ ಕನ್ನಡ ನಾಡಿನಲ್ಲಿ ಪ್ರಚಲಿತವಿದ್ದ ನಮ್ಮ ಕಸೂತಿಯನ್ನೇ ನೋಡಬಹುದು. ಧಾರ್ಮಿಕ ವೃಷ್ಟಿಯಿಂದ ಬಟ್ಟೆಯ ಮೇಲೆ ಕಸೂತಿ ಮೂಡಿದರೆ, ಕೊಳಲೂದುವ ಶ್ರೀಕೃಷ್ಣನೋ, ಬಸವನನ್ನು ಮುಂದಿರಿಸಿಕೊಂಡಿರುವ ಶಿವನೋ ಮೂಡಬಹುದು. ದೇಶಭಕ್ತಿಯ ಭಾವನೆ ಜನತೆಯಲ್ಲಿ ಉಕ್ಕುತ್ತಿದ್ದಾಗ, ಭಾರತಮಾತೆಯ ಚಿತ್ರವೋ, ಬಾಪೂಜಿಯ ಚಿತ್ರವೋ ಹೊರಬರಬಹುದು. ಇದ್ದಕ್ಕಿದಂತೆ ನಿಸರ್ಗಸೌಂದರ್ಯವನ್ನು ಅನುಕರಿಸುವದೇ ಶೀರ ಸಹಜವಾಗಿ ಕಲೆಯನ್ನು ವ್ಯಕ್ತಗೊಳಿಸುವ ಮಾರ್ಗ ಎಂಬ ಭಾವನೆಗೆ ಅವಕಾಶ ಸಿಕ್ಕಾಗ, ಕ್ರಮಬದ್ಧವಾಗಿ ಎಳೆಗಳನ್ನೋ, ಮನೆಗಳನ್ನೋ ಎಣಿಸಿ ಹಾಕುವ ಕಸೂತಿ ಹಿಂದೆ ಬೀಳಬಹುದು. ಕಲೆಯು ಮನುಷ್ಯನ ಭಾವನೆಯ ನೆಳಲೆಂದಾಗ, ಆ ಭಾವನೆಯನ್ನೇ ಅದು ಅನುಸರಿಸುವದು ಸಹಜವಾಗಿದೆ.

ದೂರದ ದೇಶಗಳನ್ನಂತೂ ಬಿಟ್ಟುಕೊಡೋಣ : ಹಿಂದುಸ್ಥಾನದಲ್ಲಿಯೇ ಕಸೂತಿ ಉತ್ತರದಲ್ಲಿ ಒಂದು ವಿಧವಾಗಿದ್ದರೆ, ದಕ್ಷಿಣದಲ್ಲಿ ಇನ್ನೊಂದು ವಿಧವಾಗಿರುವದು. ಉತ್ತರದಲ್ಲಿ ಸಿಕ್ಕಷ್ಟು ಅವಕಾಶ ಕಸೂತಿಯ ಕಲೆಗೆ ದಕ್ಷಿಣದಲ್ಲಿ ಸಿಕ್ಕಿಲ್ಲ. ಇದಕ್ಕೆ ಉತ್ತರ ದಕ್ಷಿಣಗಳಲ್ಲಿರುವ ಭೌಗೋಲಿಕ ವ್ಯತ್ಯಾಸಗಳೇ ಕಾರಣ. ಆಹಾರದ ಸಮಸ್ಯೆ ಸುಲಭವಾಗಿ ಬಿಟ್ಟರೆ, ಉಳಿದ ವೇಳೆಯನ್ನೆಲ್ಲ ಯಾವದೊಂದು ಕಲೆಯ ಅಭ್ಯಾಸದಲ್ಲಿ ಸಹಜವಾಗಿಯೇ ವಿನಿಯೋಗಿಸಬಹುದಲ್ಲ! ಕಸೂತಿಯ ಕಲೆ ನಯವಾದುದು; ಭಾವನಾಪ್ರಧಾನವಾದುದು; ಅಲ್ಲದೆ ಮನೆಯಲ್ಲಿಯೇ ಕುಳಿತು ಮಾಡಲು ಬರುವಂತಹದು. ಅದಕ್ಕೆಂತಲೇ ಮಹಿಳೆಯರು, ಅದರಲ್ಲೂ ಉತ್ತರದ ಮಹಿಳೆಯರು, ಈ ಕಲೆಯ ವಿಕಾಸಕ್ಕೆ ಹೆಚ್ಚಿನ ಅವಕಾಶವನ್ನು ಕೊಟ್ಟಿದ್ದಾರೆ. ಕಲೆಗಾಗಿ ಕಲೆ, ಆನಂದಕ್ಕಾಗಿ ಕಲೆ ಎಂಬುದೂ ನಿಜವೆಂದು ಇಲ್ಲಿ ಕಂಡುಬರುವದು. ಉತ್ತರದಲ್ಲಿ ಅನೇಕ ಸಿರಿವಂತ ಮಹಿಳೆಯರು ಕೂಡ ತಮ್ಮ ಬಿಡುವಿನ ವೇಳೆಯಲ್ಲಿ, ಬಂಗಾರದ ಕಡ್ಡಿಗಳಿಂದ ಟೊಪ್ಪಿಗೆಯನ್ನೋ, ಕುಪ್ಪುಸದ ಅಂಚನ್ನೋ ತುಂಬುವದನ್ನು ಕಾಣಬಹುದು. ಆ ಒಂದು ಹೂವನ್ನೋ, ಎಲೆಯನ್ನೋ, ಬಳ್ಳಿಯನ್ನೋ ತುಂಬುತ್ತಿದ್ದರೆ, ಅದು ತುಂಬುತ್ತ ಬಂದಂತೆ, ಅದನ್ನು ತುಂಬುವ ಕಲಾವಿದನ

ಮನಸ್ಸೂ ಸಂತೃಪ್ತಿಯ ಆನಂದದಿಂದ ತುಂಬುವದನ್ನು ನೋಡಿದರೆ, ಇದನ್ನು ಬರೀ ನೋಡಿ ತಿಳಿದರೆ ಸಾಲದು ಎಂದೆನಿಸಿಬಿಡುತ್ತದೆ.

ಸದ್ಯದ ಯುಗವು ಯಾಂತ್ರಿಕ ಯುಗವು; ಮನುಷ್ಯನ ಕಾರ್ಯಗಳಲ್ಲಿ ಬಹುಭಾಗವನ್ನು ಯಂತ್ರವೇ ಪೂರೈಸಿ ಬಿಡುತ್ತದೆ. ಯಂತ್ರವಾದರೂ ಮನುಷ್ಯನ ಭಾವನೆಗಳನ್ನೇ ಅನುಸರಿಸಿ ಕಾರ್ಯ ಮಾಡಬೇಕಾಗುವದು. ಮನುಷ್ಯನು ಕಾಡುಸ್ಥಿತಿಯಲ್ಲಿದ್ದಾಗ ಅವನ ಅವಶ್ಯಕತೆಗಳೂ ಹೆಚ್ಚಾಗಿರಲಿಲ್ಲ. ಅವಶ್ಯಕತೆಗಳು ಹೆಚ್ಚಾದಂತೆ ಬುದ್ಧಿಯೂ ಮುಂದೆ ಓಡಿತು. ಹತ್ತಿಯಿಂದ ಬಟ್ಟೆಯನ್ನು ತಯಾರಿಸಬಹುದೆಂದು ಕಂಡುಹಿಡಿದ ಮನುಷ್ಯ ಅದನ್ನು ತುಂಡು ತುಂಡಾಗಿ ಕತ್ತರಿಸಿ ಮೈಗೆ ಸರಿಯಾಗುವಂತೆ ಸೂಜಿಯ ನೆರವಿನಿಂದ ಹೊಲಿಯಲೂ ಕಲಿತ; ಕ್ರಮೇಣ ಹೀಗೆ ಹೊಲಿಯುವದರಲ್ಲಿಯೂ ಅವನು ತನ್ನ ಕೌಶಲ್ಯವನ್ನು ವ್ಯಕ್ತಮಾಡತೊಡಗಿದ. ಮನುಷ್ಯನ ಬುದ್ಧಿ ಇನ್ನೂ ಮುಂದುವರಿದಂತೆ ಈ ಕಾರ್ಯವನ್ನೂ ಅವನು ಯಂತ್ರಕ್ಕೇ ಬಿಟ್ಟುಕೊಟ್ಟಿದ್ದಾನೆ. ಇಂದಿಗೆ ಸುಮಾರು ಒಂದು ಶತಮಾನದ ಕಾಲ ಉರುಳಿರಬಹುದು–ಯಂತ್ರವೇ ಈ ಕಾರ್ಯವನ್ನು ಮಾಡುತ್ತಿದೆ. ಆದರೆ ಕಸೂತಿಯ ಕ್ಷೇತ್ರದಲ್ಲಿ ಮಾತ್ರ ಹಸ್ತಕೌಶಲ್ಯಕ್ಕೆ ಇನ್ನೂ ಪ್ರಾಧಾನ್ಯವಿದೆ. ವಧುವೆನ್ನಿಸಿಕೊಳ್ಳುವ ಪ್ರತಿಯೊಬ್ಬ ಕನ್ಯೆಯೂ ಕಸೂತಿಯನ್ನು ಹೆಣೆಯುವದರಲ್ಲಿ ನುರಿತವಳಾಗಿರಬೇಕು. ಅಥವಾ ಕೆಲವೊಂದು ಅಂದವಾದ ಕಸೂತಿಯಿಂದ ಸುಶೋಭಿತವಾದ ಬಟ್ಟೆಗಳನ್ನು ಅವಳು ಸಿದ್ಧಗೊಳಿಸಿರಬೇಕು ಎಂಬ ನಿರ್ಬಂಧವುಳ್ಳ ಆ ಕಾಲ ಇಂದು ಕೆಲಮಟ್ಟಿಗೆ ಕಾಣದಂತಾಗಿದೆ ನಿಜ; ಆದರೂ ಭಾರತದ ಹಲವು ಜನಾಂಗಗಳಲ್ಲಿಯೇ ನಾವು ಈ ನಿರ್ಬಂಧವು ಸಜೀವವಾಗಿದ್ದುದನ್ನು ಕಾಣಬಹುದು. ಕ್ರೈಸ್ತಮತದ ಕನ್ಯೆಯು, ಮದುವೆಗೆ ಪೂರ್ವದಲ್ಲಿ ವಿಧವಿಧದ ಕಸೂತಿಯಿಂದ ಕಂಗೊಳಿಸುವ ಅದೆಷ್ಟೋ ಬಟ್ಟೆಗಳನ್ನು ಸಿದ್ಧಗೊಳಿಸಿಡುವಳು. ಶೀಖರೂ ಹಾಗೆಯೇ; ಗುಜರಾಥಿಗಳಲ್ಲಿ ಮದುಮಗಳ ಬಟ್ಟೆಗಳು ಕಸೂತಿಯಿಂದಲೇ ಸುಶೋಭಿತವಾಗಿರಬೇಕೆಂಬ ನಿರ್ಬಂಧವಿದೆ; ಕನ್ನಡ ನಾಡಿನಲ್ಲಿ ಅಚ್ಚಕರಿಯ ಅಥವಾ ಅಚ್ಚ ಬಿಳಿಯ ಬಣ್ಣದ ಬಟ್ಟೆಯ ಮೇಲೆ ಕಸೂತಿಯಿರುವದು ಶುಭಸೂಚಕವೆನಿಸುತ್ತದೆ. ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ರೂಪಗಳಿಂದ ವ್ಯಕ್ತವಾಗುವ ಈ ನಿರ್ಬಂಧವನ್ನು ನೋಡಿದರೆ

ಒಂದು ಕಾಲಕ್ಕೆ ಕಸೂತಿಯ ಕಲೆ ಎಲ್ಲ ಜನಾಂಗಗಳಲ್ಲಿಯೂ ನಿರ್ಬಂಧ ವಾಗಿಯೇ ಇದ್ದಿರಬೇಕು. ಅಥವಾ ನಿರ್ಬಂಧವೋ ಎನಿಸುವಷ್ಟು ಹೆಚ್ಚಾಗಿ ಪ್ರಚಾರದಲ್ಲಿರಬೇಕು ಎಂದು ಸಹಜವಾಗಿಯೇ ಊಹಿಸಬಹುದು.

ಇತ್ತೀಚೆಗೆ ಯಂತ್ರದಲ್ಲಿ ಕಸೂತಿಯನ್ನು ಹೆಣೆಯುವದೂ ಪ್ರಚಾರದಲ್ಲಿ ಬಂದಿದೆ. ಹೊತ್ತು ಸಾಲದು; ಆದರೆ ಕಸೂತಿಯನ್ನು ಹೆಣೆಯಲೇಬೇಕೆಂಬ ಹವ್ಯಾಸವಾದರೋ ಉತ್ಕೃತ್ತಿದೆಯೆಂದಾಗ ಯಂತ್ರದಲ್ಲಿಯ ಕಸೂತಿಯನ್ನೂ ಮೆಚ್ಚೋಣ; ಆದರೂ ಕೈಕಸೂತಿಯಲ್ಲಿಯ ಅಂದ ಅದಕ್ಕೆ ಬರಲಾರದು. ಒಂದು ನಯವಾದುದು, ಭಾವನಾಪ್ರಧಾನವಾದುದು; ಇನ್ನೊಂದು ಕೊಂಚ ಒರಟಾದುದು, ಯಾಂತ್ರಿಕವಾದುದು. ಕೈಕಸೂತಿಯಲ್ಲಿ ನಯನಾಜೂಕು, ಹಸ್ತಕೌಶಲ್ಯಗಳಡಗಿದ್ದರೂ ಕಸೂತಿಯನ್ನು ಹೆಣೆಯುವವಳಿಗೆ ಅದೇ ಗುರಿ ಯಾಗಲಾರದು. ಕಸೂತಿಯು ಅವಳ ಭಾವನೆಗಳನ್ನು ಎತ್ತಿ ತೋರಿಸುವ ಸಾಧನ ಮಾತ್ರ. ಆದರೆ ನಿರ್ಜೀವ ವಸ್ತುಗಳನ್ನೂ ಕೂಡ ಸಜೀವಗೊಳಿಸ ಬಲ್ಲ ಶಕ್ತಿ ಆ ಸಾಧನದಲ್ಲಿದೆ. ಭಾವನೆಗಳನ್ನು ರೂಪಿಸಿ, ಸಜೀವಗೊಳಿಸುವ ದರಲ್ಲಿಯೇ ಅದೊಂದು ಅಮಿತವಾದ ಆನಂದವಡಗಿದೆ. ಬೇಸರವಾಗಿ ಒಂದರೆ ಗಳಿಗೆ, ದಿಂಬಿಗೆ ಒರಗಿ ಕುಳ್ಳಿರಬೇಕೆಂದರೆ! ಮನಸ್ಸೇ ಆಗದು; ಅದರ ಎದುರಿನಲ್ಲಿಯೇ ಕುಳಿತಿರಬೇಕೆನಿಸುತ್ತದೆ. ಅಂತಹ ರಮ್ಯ ದರ್ಶನ! ಸುತ್ತಲೂ ಕವಿದ ನೀಲಛಾಯೆ! ಶೀತಲನಾದ ಚಂದ್ರ! ಮಿನುಗುತ್ತಿರುವ ನಕ್ಷತ್ರಗಳು! ಓಡಿ ಗೂಡು ಸೇರುತ್ತಿರುವ ಪಕ್ಷಿಗಳು! ಭೋರ್ಗರೆಯುತ್ತಿರುವ ಸಮುದ್ರ! ದೂರದಲ್ಲಿ ತೇಲುತ್ತಿರುವ ಅದೊಂದು ನಾವೆ! ನೋಡನೋಡುತ್ತಿರುವಂತೆಯೇ ಮೈಮರೆಸಿ ಬಿಡುವಂತಿದೆ ಮೂಡಿದ ನಿಸರ್ಗಸೌಂದರ್ಯ! ತಲೆಗೆ ಆಸರೆ ಯನ್ನಿಟ್ಟುಕೊಂಡು ಹಾಯಾಗಿ ನಿದ್ರಿಸಬೇಕೆಂದರೆ ಅಲ್ಲಿಯೂ ಕಸೂತಿಯ ಹಾವಳಿ! ಕಸೂತಿ, ಹೆಣೆಯುವ ಕಲಾವಿದ, ನೋಡುವ ರಸಿಕರೀರ್ವರಿಗೂ ಆಂತರಿಕ ಆನಂದವನ್ನು ನೀಡಬಲ್ಲಂತಹ ಶಕ್ತಿಯುಳ್ಳದ್ದು.

'ಕಸೂತಿ' ಎಂದಾಗ ನಮ್ಮೆದುರು ಮೊದಲಿಗೆ ನಿಲ್ಲುವದು ಕೈಲಿ ಹೆಣೆದ ಕಸೂತಿಯೇ. ಹೆಣೆಯುವ ಯಂತ್ರ ಒಂದೇ ಆಗಿರುವಾಗ, ಯಂತ್ರ ದಲ್ಲಿ ಹೆಣೆದ ಕಸೂತಿ, ಎಲ್ಲೆಡೆಯಲ್ಲಿಯೂ ಒಂದೇ ಆಗಿರುವ ಸಂಭವವಿದೆ. ಆದರೆ ಕೈಕಸೂತಿಯಲ್ಲಿ ಹಾಗಿಲ್ಲ; ಒಂದೊಂದು ಜನಾಂಗಕ್ಕೆ ಒಂದೊಂದು

ವೈಶಿಷ್ಟ್ಯ ! ಹೆಣೆಯುವ ಚಿತ್ರದಲ್ಲಿಯೂ ವೈಶಿಷ್ಟ್ಯ, ರೀತಿಯಲ್ಲಿಯೂ ವೈಶಿಷ್ಟ್ಯ ! ಈ ವೈಶಿಷ್ಟ್ಯ ಆಯಾ ಭಾಗಗಳ ಭೌಗೋಲಿಕ, ಧಾರ್ಮಿಕ ಪರಿಸ್ಥಿತಿಗಳನ್ನೇ ಅವಲಂಬಿಸಿದೆ; ಭಾರತ ಮತ್ತು ಚೈನಾಗಳ ಕಸೂತಿ ತೀರ ಪ್ರಾಚೀನವೂ ಅಹುದು, ನಿಸರ್ಗಸೌಂದರ್ಯಕ್ಕೆ ತೀರ ಸಮೀಪವಾದುದೂ ಅಹುದು. ಭಾರತದಲ್ಲಿಯೇ ಉತ್ತರದಲ್ಲಿ ವಿವಿಧ ಬಣ್ಣಗಳಲ್ಲಿ ನಿಸರ್ಗ ಸೌಂದರ್ಯದ ಐಸಿರಿ ಕಸೂತಿಯಲ್ಲಿ ಮೂಡಿದರೆ, ದಕ್ಷಿಣದಲ್ಲಿಯೂ ಬಿಳಿಯ ಬಣ್ಣದಲ್ಲಿ ಕಸೂತಿ ವೈಭವಪೂರ್ಣವಾಗಿ ಹೊರಹೊರಟಿದೆ. ಇನ್ನು ಹೆಣೆಯುವ ರೀತಿಯಲ್ಲಿಯೂ ಅಷ್ಟೇ. ಮಣಿಪುರದ ಸ್ತ್ರೀಯರು ಮಾಡುವ ರೇಶಿಮೆ (ಸಾಟಿನ್) ಹೊಲಿಗೆ, ಕಾಮಟಿ, ಸಿಂಗಪೋಗಳ ಸುಳಿವು ಹೊಲಿಗೆ, ಕಚ್ಛೀ ಜನರ ಸರಪಳಿ ಹೊಲಿಗೆ ಅವರ ಕಸೂತಿಯಲ್ಲಿ ಪ್ರಾಮುಖ್ಯತೆಯಿಂದ ಎದ್ದು ಕಾಣುವಂತಹವು. ಇನ್ನು ಬೆಳ್ಳಿ ಬಂಗಾರದ ಕಡ್ಡಿಗಳಿಂದ ಅರಳಿಸಿದ ಕಸೂತಿಯೂ ಭಾರತದ ವೈಶಿಷ್ಟ್ಯ. ಬಂಗಾರದ ಕಡ್ಡಿಯ ಕಸೂತಿಯ ಪ್ರತೀಕವಾದ ಬನಾರಸದ ಸೀರೆ ಭಾರತೀಯ ಮಹಿಳೆಯ ಮನವನ್ನೇ ಸೂರೆಗೊಂಡಿದೆ.

ದಕ್ಷಿಣದ ಕಸೂತಿಯ ಪ್ರತಿನಿಧಿಯಾಗಿ ಕನ್ನಡ ಕಸೂತಿಯನ್ನೇ ನಾವು ನೊಡಬಹುದು; 'ಕನ್ನಡ ಕಸೂತಿ' ಎಂದರೆ ಕನ್ನಡ ನಾಡಿನಲ್ಲಿ ಪ್ರಚಾರದಲ್ಲಿದ್ದ ಕಸೂತಿಯೆಂದಿಷ್ಟೇ ಅರ್ಥ. ಈ ಕಸೂತಿ ಕನ್ನಡ ನಾಡಿನ ಹೊರಗೂ ಕೂಡ, 'ಕನ್ನಡ ಕಸೂತಿ' ಎಂಬ ಹೆಸರಿನಿಂದಲೇ ಪ್ರಚಾರದಲ್ಲಿದ್ದುದನ್ನು ನೋಡಿದರೆ ಕನ್ನಡ ಕಸೂತಿಯ ವೈಶಿಷ್ಟ್ಯದ ಅರಿವಾಗದಿರದು. ಕನ್ನಡ ನಾಡಿನಲ್ಲಿ ಕಸೂತಿಯ ಕಲೆ ಬಹಳ ಹಿಂದಿನಿಂದಲೇ ತೀರ ಸೂಕ್ಷ್ಮವಾದ ರೀತಿಯಲ್ಲಿಯೇ ಪ್ರಚಾರದಲ್ಲಿದ್ದುದು ಕಂಡುಬರುವದು. ಈ ಭಾಗಕ್ಕೇ ವಿಶಿಷ್ಟವಾದ ಕರಿಯ ಚಂದ್ರಕಾಳಿಯ ಸೀರೆಯುದ್ದಕ್ಕೂ, ಕಣ್ಣಲ್ಲಿ ಕಣ್ಣಿಟ್ಟು ತುಂಬುದಕ್ಷತೆಯನ್ನು ವಹಿಸಿ, ಎಳೆಗಳನ್ನು ಒಂದೊಂದಾಗಿ ಎಣಿಸಿ, ಕಸೂತಿಯನ್ನು, ಬೇಸರವಿಲ್ಲದೆ ಇಡೀ ವರ್ಷಕಾಲ ತೆಗೆದುದನ್ನೂ ನಾವಿಲ್ಲಿ ಕಾಣಬಹುದು. ಇದಕ್ಕಾಗಿ ತಮ್ಮ ದೃಷ್ಟಿಯನ್ನೇ ಮೀಸಲಾಗಿರಿಸಿದ ಮಹಿಳೆಯರೂ ಕನ್ನಡ ನಾಡಿನಲ್ಲಿದ್ದರು. ಇದೀಗ—ಸ್ವಲ್ಪ ಒರಟಾದರೂ ಸರಿ—ಅಲ್ಪ ವೇಳೆಯಲ್ಲಿ ಸಿದ್ಧವಾಗುವ ಕಸೂತಿಯ ಮುಂದೆ, ಎಳೆ ಎಣಿಸಿ ಹಾಕುವ ಕಸೂತಿ ಹಿಂದೆಬಿದ್ದಿದೆ. ಇದರ ಪರಿಣಾಮವಾಗಿ, ಕನ್ನಡ ಕಸೂತಿಯ ವೈಭವದ

ಪ್ರತೀಕವಾದ ಅಂತಹದೊಂದು ಸೀರೆ ವಸ್ತುಸಂಗ್ರಹಾಲಯುವನ್ನೂ ಸೇರಿರ ಬಹುದು. ಆದರೆ ಕಲೆಗಳ ಪುನರುಜ್ಜೀವನದ ದೃಷ್ಟಿಯಿಂದ ಈ ಕಲೆಗೆ ಪ್ರೋತ್ಸಾಹ ದೊರೆಯುುವದು ಅತ್ಯವಶ್ಯ.

ಕನ್ನಡ ನಾಡಿನ ಲಂಬಾಣೀ ಜನರಲ್ಲಿ ಪ್ರಚಾರದಲ್ಲಿರುವ ಕಸೂತಿಯನ್ನು ನೋಡಿದರೆ ಯಾರಿಗೂ ಆಶ್ಚರ್ಯವಾಗದಿರದು ! ಅವರ ನಿತ್ಯದ ಉಡುಪೇ ಕಸೂತಿಯಿಂದ ಕೂಡಿದ್ದು ! ಸಣ್ಣ ಸಣ್ಣ ಕಾಜಿನ ತುಂಡುಗಳನ್ನು, ಬಟ್ಟೆಯಲ್ಲಿ ಸೇರಿಸಿ, ಸುತ್ತಲೂ ಸರಪಳಿ ಹೊಲಿಗೆಯಿಂದ ಹೊಲಿಯುುವದು, ಕಾಜಿನ ಮಣಿಗಳಿಂದ ಅಂಚನ್ನು ಸಿಂಗರಿಸುವದು, ಅವರ ಕಸೂತಿಯ ವೈಶಿಷ್ಟ್ಯ. ಕಸೂತಿ ಕನ್ನಡ ನಾಡಿನ ಜನರ ರಕ್ತಗತವಾದ ಕಲೆ; ವಿಧವಿಧವಾದ ಕಸೂತಿಯನ್ನು ತೆಗೆದು ಸಿಂಗರಿಸಲು ಅವರ ಹವ್ಯಾಸ. ನೆಲವನ್ನು ಉಳುವ ಬಸವಣ್ಣನಿಗೆ ಕಿಕ್ಕಿರಿದ ಕಸೂತಿಯ ಬಟ್ಟೆಯಿಂದಲೇ ಅಲಂಕಾರ ! ಕಸೂತಿಯ ಕ್ಷೇತ್ರದಲ್ಲಿ ಯಂತ್ರ ಕಾಲಿಟ್ಟಿದ್ದರೂ ಕೈಕಸೂತಿಯ ಹಿರಿಮೆಯನ್ನು ಅದು ಪಡೆಯಲಾರದೆಂದು, ಕನ್ನಡ ಕಸೂತಿಯೇ ಸ್ಪಷ್ಟವಾಗಿ ಹೇಳುತ್ತಿದೆ. ಅಲ್ಲದೆ ಕೆಲವು ಬಗೆಯ ಹೊಲಿಗೆಗಳು ನಿಜವಾಗಿಯೂ ಯಂತ್ರಕ್ಕೆ ಅಸಾಧ್ಯವೇ ಆಗಿವೆ.

ಯಂತ್ರದಲ್ಲಿ ಕಸೂತಿಯನ್ನು ಹೆಣೆಯಲು ಅಭ್ಯಾಸವೊಂದಿದ್ದರೆ, ಯಾರು ಬೇಕಾದರೂ ಹೆಣೆಯಬಹುದು; ಅಭ್ಯಾಸವಿರದಿದ್ದರೆ ಮಾತ್ರ ತುಂಬ ಕಠಿಣ. ಅಲ್ಲದೆ ಜೊತೆಗೆ ಹೊಲಿಗೆಯ ಯಂತ್ರದ ಜ್ಞಾನವೂ ಅವಶ್ಯ. ಆದರೆ ಕೈಕಸೂತಿಯಲ್ಲಿ ಇದಾವ ತೊಂದರೆಯೂ ಇಲ್ಲ. ಎಳೆಯನ್ನು ಪವಣಿಸಿ ಸೂಜಿಯನ್ನು ಚುಚ್ಚಿದಂತೆ ಕಸೂತಿ ಮೂಡುತ್ತದೆ; ಕೈಲಿ ಕಸೂತಿಯನ್ನು ಹಾಕುವದು ಬಹಳ ಸುಲಭ. ನಾಲ್ಕಾರು ವಿಧದ ಹೊಲಿಗೆಗಳು ತಿಳಿದುಬಿಟ್ಟರೆ, ಮುಂದೆ ಅವೇ ಹೊಲಿಗೆಗಳ ತತ್ವವನ್ನನುಸರಿಸಿ, ಉಳಿದ ಬಗೆಯ ಹೊಲಿಗೆಗಳನ್ನು ಕಲ್ಪಿಸಬಹುದು. ಕಸೂತಿಯ ಕಲೆಯನ್ನು ಮನಃಪೂರ್ವಕ ಅಭ್ಯಾಸ ಮಾಡಿದರೆ, ಅದನ್ನು ರಚಿಸಿದ ಆನಂದವಿಷ್ಟೇ ಅಲ್ಲ, ಹೊಸದನ್ನು ಕಂಡುಹಿಡಿದ ಆನಂದವೂ ಅನುಭವಕ್ಕೆ ಬರಬಹುದು. ಯಂತ್ರದಲ್ಲಿ ಬೀಳುವದೆಂದರೆ ಟಿಬ್ಬಿಯೊಂದೇ; ಅದನ್ನೇ ಉದ್ದಕ್ಕೆ ಅಥವಾ ವರ್ತುಲವಾಗಿ, ಇಲ್ಲವೆ ಎರಡು ಟಿಬ್ಬಿಗಳ ನಡುವಿನ ಅಂತರವನ್ನು ಹೆಚ್ಚುಕಡಿಮೆ ಮಾಡಿ ಇಡ

ಬಹುದು. ಇದರಿಂದಲೇ ಮೂಡುವ ಕಸೂತಿಯಲ್ಲಿ ವಿವಿಧ ಬಗೆಯಿದೆಯೋ ಎಂಬ ಭಾಸವಾಗುತ್ತದೆ. ಆದರೆ ಕೈಕಸೂತಿಯಲ್ಲಿ ಹಾಗಲ್ಲ; ಸರಪಳಿ ಹೊಲಿಗೆ, ಗುಂಡಿಮನಿ ಹೊಲಿಗೆ, ರೆಕ್ಕೆ ಹೊಲಿಗೆಗಳು ಬರೀ ಹೊಲಿಗೆಯೆಂಬ ದೃಷ್ಟಿಯಿಂದಲೇ ಅಂದವಾಗಿದ್ದು ಸ್ವಯಂಪೂರ್ಣವಾಗಿವೆ. ಕಸೂತಿ ಮತ್ತು ನಿತ್ಯದ ಹೊಲಿಗೆ ಇವೆರಡರ ಅವಶ್ಯಕತೆಯನ್ನೂ ಈ ಬಗೆಯ ಹೊಲಿಗೆಯೊಂದೇ ಪೂರೈಸಬಲ್ಲದು. ಗುಂಡಿಮನಿ ಹೊಲಿಗೆ, ಬಟ್ಟೆ ಗುಂಜು ಗುಂಜಾಗದಂತೆಯೂ ಮಾಡಬಲ್ಲದು. ಮೇಲೆ ಶೋಭೆಯನ್ನೂ ಬಟ್ಟೆಗೆ ತರಬಲ್ಲದು. ಕೈಕಸೂತಿಯಲ್ಲಿ ವೇಳೆ ಹೆಚ್ಚಾಗಿ ಹೋಗುವದೆನಿಸಿದರೂ ಅದರ ಲಾಭವಿದ್ದೇ ಇದೆ.

ತನ್ನ ಕುಂಚದ ಗೆರೆಯೊಂದನ್ನು ಎಳೆದು ಚಿತ್ರಕಾರನು ತನಗೇ ಮೀಸಲಾಗಿದ್ದ ತನ್ನ ವಿಶಿಷ್ಟ ವ್ಯಕ್ತಿತ್ವವನ್ನೇ ಮೂಡಿಸಿ ಬಿಡುವಂತೆ, ಕೈಕಸೂತಿಯಲ್ಲಿಯೂ ಕಲಾವಿದನು, ಗೆರೆಯೊಂದನ್ನು ಎತ್ತಲೋ ಎಳೆದು, ಅಥವಾ ವಿಶಿಷ್ಟ ಹೊಲಿಗೆಯನ್ನುಪಯೋಗಿಸಿ, ಕಸೂತಿಗೆ ಬೇರೊಂದು ಬಗೆಯ ಸೌಂದರ್ಯವನ್ನೇ ತಂದುಬಿಡಬಹುದು. ಈ ಸೂಕ್ಷ್ಮ ವ್ಯತ್ಯಾಸವನ್ನು ಸಾಮಾನ್ಯ ಪ್ರೇಕ್ಷಕರು ಕಂಡು ಹಿಡಿಯಲಾರರು; ಆದರೆ ಒಟ್ಟಿನಲ್ಲಿಯೇ ತೋರಿಬರುವ ಸೌಂದರ್ಯವನ್ನು ಮಾತ್ರ ಅವರು ಗುರುತಿಸಬಲ್ಲರು. ಕೈಕಸೂತಿಯು ಪ್ರತಿಯೊಂದು ಬಗೆಯ ಹೊಲಿಗೆಯಲ್ಲಿಯೂ, ಅದರಿಂದ ರಚಿತವಾಗುವ ಕಸೂತಿಯಲ್ಲಿಯೂ ಕಲಾವಿದರ ವಿಶಿಷ್ಟ ವ್ಯಕ್ತಿತ್ವವು ಮೂಡಲು ಸಾಕಷ್ಟು ಅವಕಾಶವಿದೆ.

ಇನ್ನು ಬಣ್ಣಗಳ ಬಗ್ಗೆ ಇರುವ ಜ್ಞಾನದಿಂದಲೂ ಕಸೂತಿಯನ್ನು ಹೆಣೆಯುತ್ತ ಹೋದಂತೆ, ಪ್ರಗತಿಯು ಸಹಜವಾಗಿಯೇ ಕಂಡುಬರುವದು. ಬಣ್ಣಗಳ ಬಗ್ಗೆ ಉತ್ತಮ ಅಭಿರುಚಿಯುಳ್ಳವರಿಗೆ, ಅಥವಾ ನಿಸರ್ಗಸೌಂದರ್ಯದ ಭಕ್ತರಿಗೆ, ಅಥವಾ ನಾಗರಿಕರೆಂದೆನ್ನಿಸಿಕೊಳ್ಳುವ ಜನಾಂಗಕ್ಕೆ ಕೆಲಮಟ್ಟಿಗೆ ಜ್ಞಾನವಿರಬಹುದು. ಆದರೆ ಎಲ್ಲರಲ್ಲಿಯೂ ನಾವು ಇದನ್ನಪೇಕ್ಷಿಸುವದು ಸಾಧ್ಯವಿಲ್ಲ; ಕಸೂತಿಯನ್ನೇ ತುಂಬುವದೆಂದು ಕರೀಬಣ್ಣದಿಂದ ಹೂವನ್ನೂ, ಕೆಂಪು ಬಣ್ಣದಿಂದ ಎಲೆಯನ್ನೂ ತುಂಬಿ ಇಟ್ಟರೆ! ಅಥವಾ ಕಾಗೆಯನ್ನು

ಬಿಳೀ ಬಣ್ಣದಿಂದ ಮೂಡಿಸಿದರೆ ! ಇದರಿಂದ ಸ್ವತಃ ಅಭಿರುಚಿಯು ನಷ್ಟ ವಂತೂ ಸರಿಯೇ ಸರಿ, ಕಸೂತಿಗೂ ನಷ್ಟವನ್ನುಂಟುಮಾಡಿದಂತಾಗುವದು.

ಮನಃಪೂರ್ವಕವಾಗಿ, ಕಸೂತಿಯ ರಚನೆಯಲ್ಲಿಯೇ ಲೀನವಾಗಿ ಹೆಣೆಯುವ ಕಲಾವಿದನಿಗೆ, ಬಣ್ಣಗಳ ಬೆರಕೆಯ ಮಹತ್ವ, ದಿನದಿನಕ್ಕೆ ಹೆಚ್ಚಾಗಿ ಕಂಡುಬರುವದು. ಬಣ್ಣಗಳ ಬೆರಕೆಯಲ್ಲಿಯೇ ಕಲಾವಿದನು ತನ್ನ ವೈಶಿಷ್ಟ್ಯವನ್ನು ಬೆಳಗಬಲ್ಲನು. ಉತ್ತಮ ಕಾವ್ಯ ಅಥವಾ ಕಥೆ, ಓದುತ್ತಿರು ವಂತೆ ಮನಸ್ಸನ್ನೇ ಕಲಕಿಬಿಡುವಂತೆ, ಉತ್ತಮ ಬಣ್ಣಗಳ ಸರಿಯಾದ ಬೆರಕೆ ಯಿಂದ, ಹೆಣೆದ ಕಸೂತಿಯೂ ಮನಸ್ಸನ್ನೇ ಆವರಿಸಿ ಬಿಡುವದು. ಈ ಪರಿ ಣಾಮ ಚಿಕ್ಕಮಕ್ಕಳ ಎಳೆಮನದಲ್ಲಿ ತೀವ್ರವಾಗಿಯೇ ಉಂಟಾಗುವದನ್ನು ನಾವು ಕಾಣಬಹುದು. ಮೆರುಗಿನ ಹಸಿರು ಅಂತಹ ಬಣ್ಣಗಳಲ್ಲೊಂದು; ನಿಸರ್ಗದಲ್ಲಿ ತಾನೇ ತಾನಾಗಿ ಸೂರೆಯಾಗಿದ್ದ ಹಸಿಯ ಬಣ್ಣ, ತನ್ನ ಈ ಕಾರ್ಯವನ್ನು ಮಾಡುತ್ತಲೇ ಇದೆ; ಕಸೂತಿಯ ಹಸಿರೂ ಅದಕ್ಕೆ ಜೊತೆ ಯಾಗಿದೆ.

ಕಸೂತಿಯ ಕಲೆ ಸಯವಾದುದು, ಸೂಕ್ಷ್ಮವಾದುದು; ಭಾವಗ್ರಾಹಿ ಯಾಗಿ ಭಾವಗಳನ್ನು ಮೂಡಿಸಬಲ್ಲ ಕಲೆಯದು. ಮನರಂಜಕವೂ ಅಹುದು ಉಪಯುಕ್ತವೂ ಅಹುದು; ಈ ಎರಡನ್ನೂ ಸಾಧಿಸಬಲ್ಲ ಕೆಲವೇ ಕಲೆಗಳಲ್ಲಿ ಕಸೂತಿಯೊಂದು. ಬಿಡುವಿನ ವೇಳೆಯನ್ನು ಕಳೆಯಲಂತೂ ಇದಕ್ಕಿಂತ ಒಳ್ಳೆಯದಾದ ಕಲೆ ಇನ್ನೊಂದಿಲ್ಲವೆಂದೇ ಹೇಳಬಹುದು. ಕಸೂತಿಯ ಕಲೆ ಎಲ್ಲರ ಕಲಾಭಿರುಚಿಗೂ ಮೀಸಲಾದ ಕಲೆ, ಎಲ್ಲರ ಮೆಚ್ಚಿಗೆಗೂ ಪಾತ್ರವಾದ ಕಲೆ.

---

## ಪ್ರಕರಣ ೨

# ಕೈ-ಕಸೂತಿಯ ಸಾಧನಗಳು—ಅವುಗಳ ಪರಿಚಯ

ಕೈಕಸೂತಿಗೆ, ಯಂತ್ರದ ಕಸೂತಿಗೆ ತಗಲುವಂತೆ ವೆಚ್ಚವೂ ತಗಲುವದಿಲ್ಲ ಅಲ್ಲದೆ ಅದು ಯಾಂತ್ರದ ಕಸೂತಿಗಿಂತ ಅಂದವಾಗಿ ನಯವಾಗಿ ಕಾಣುವದು. ಕೈಕಸೂತಿಯಲ್ಲಿ ಕಸೂತಿಯನ್ನು ಹಾಕಲು ಬಟ್ಟೆ, ಅದನ್ನು ಬಿಗಿಯಾಗಿ ಹಿಡಿಯಲು ಕಟ್ಟಿಗೆಯ ರಿಂಗು,—೮-೯ ನಂಬರಿನ ನಾಲ್ಕಾರು ಸೂಜಿಗಳು, ೨೫ ನಂಬರಿನ ಡಿ.ಎಮ್.ಸಿ. ಬಣ್ಣಬಣ್ಣದ ರೇಶಿಮೆ, ಕಸೂತಿಯನ್ನು ಹಾಕುವಾಗ ಬೆರಳಿಗೆ ಹಾಕಿಕೊಳ್ಳುವ ಅಂಗುಸ್ಥಾನ, ರೇಶಿಮೆಯ ಎಳೆಗಳನ್ನು ಕತ್ತರಿಸಲು ನಾಜೂಕಾದ ಕಸೂತಿಯ ಕತ್ತರಿ, ಪೆನ್ಸಿಲ್ಲು, ಕಾರ್ಬನ್ ಕಾಗದ, ಚಿತ್ರದ ಹಾಳಿ ಇತ್ಯಾದಿ ವಸ್ತುಗಳ ಅವಶ್ಯಕತೆ ಇದೆ ಇವೆಲ್ಲ ವಸ್ತುಗಳನ್ನು ಒಂದು ಪೆಟ್ಟಿಗೆಯಲ್ಲಿ ಜತನದಿಂದಿರಿಸಿ, ಕೈಕಸೂತಿಯನ್ನು ಹಾಕುವದಕ್ಕೆ ಮೊದಲು, ಸ್ವಚ್ಛವಾಗಿ ಕೈತೊಳೆದುಕೊಂಡು ಗಾಳಿ ಬೆಳಕುಗಳಾಡುವ ಒಂದು ಪ್ರಶಾಂತ ಸ್ಥಳದಲ್ಲಿ ಕುಳಿತುಕೊಳ್ಳಬೇಕು. ( ಕಿಟಕಿಯ ಹತ್ತಿರ ಕುಳಿತರೆ ಗಾಳಿಗೆ ಎಲ್ಲವೂ ಹಾರಿ ಹೋಗಿ ಬಿಡಬಹುದು. )

ಕಸೂತಿಯನ್ನು ಹಾಕಬೇಕಾದ ಬಟ್ಟೆಯ ಮೇಲೆ ( ಯಾವ ಭಾಗದಲ್ಲಿ ಕಸೂತಿಯನ್ನು ಹಾಕುವದಿದೆಯೋ ಆ ಭಾಗದಲ್ಲಿ ) ಕಾರ್ಬನ್ ಪೇಪರನ್ನು,



ಮೆಯ್ಯನ್ನು ಕೆಳಗೆ ಮಾಡಿಟ್ಟು, ಅದರ ಮೇಲೆ ಚಿತ್ರವನ್ನಿಟ್ಟು ಕಾಪಿಯಿಂಗ ಪೆನ್ಸಿಲ್ಲಿನಿಂದ, ಆ ಚಿತ್ರದ ಬಾಹ್ಯರೇಷೆಗಳನ್ನು ಮಾತ್ರ ಮೂಡಿಸಿಕೊಳ್ಳಬೇಕು.

ಕಾರ್ಬನ್ ಇಡುವದರಿಂದ ಬಾಹ್ಯರೇಷೆಗಳೆಲ್ಲ ಸ್ಪಷ್ಟವಾಗಿಯೇ ಮೂಡುವವು. ಚಿತ್ರವನ್ನು ಮೂಡಿಸಿಕೊಳ್ಳಲು ಇದೊಂದೇ ರೀತಿಯಲ್ಲದೆ ಇನ್ನೂ ಅನೇಕ ರೀತಿಗಳಿವೆ; ಉದಾಹರಣೆಗೆ ಮೂಡಿಸತಕ್ಕ ಭಾಗವನ್ನು ಸ್ವಲ್ಪ ಎತ್ತರವಾಗಿ ಮಾಡಿ ಅದರ ಮೇಲೆ ಚಿತ್ರವನ್ನಿಟ್ಟು ರೂಪಾಯಿಯಂತಹ ಬೆಳ್ಳಿಯ ನಾಣ್ಯ ದಿಂದ ಒತ್ತಿ ತಿಕ್ಕಿದರೆ, ಚಿತ್ರವು ಕೆಳಗೆ ಸ್ಪಷ್ಟವಾಗಿ ಮೂಡುವದು.

ಇನ್ನೊಂದು ರೀತಿ, ಡಿಝಾಯಿನಿನ ಬಾಹ್ಯರೇಷೆಯ ಮೇಲೆ ಸೂಜಿಯಿಂದ ತೂತು ಮಾಡಿ ಅಲ್ಲಿ ನೀಲೀ ಪುಡಿ ತಿಕ್ಕಿದರೆ, ಕೆಳಗೆ ಡಿಝಾಯಿನ ಮೂಡುತ್ತದೆ. ಆಮೇಲೆ ಪೆನ್ಸಿಲ್ಲಿನಿಂದ ಅದನ್ನು ತಿದ್ದಿಕೊಳ್ಳಬಹುದು.

**ಕಟ್ಟಿಗೆಯ ರಿಂಗು :**

ಇಷ್ಟು ಚಿತ್ರವನ್ನು ಮೂಡಿಸಿಕೊಂಡ ಬಳಿಕ, ಅದನ್ನು (ಚಿತ್ರವು ಮಧ್ಯದಲ್ಲಿ ಬರುವಂತೆ) ರಿಂಗಿನಲ್ಲಿ ಬಿಗಿಯಾಗಿ ಕೂಡಿಸಬೇಕು. ಈ ರಿಂಗಿನ



ವ್ಯಾಸ ೭–೮ ಇಂಚಿಗಿಂತ ಹೆಚ್ಚಿಗಿರಕೂಡದು. ಅಂದರೆ ಮಾತ್ರ ಕೈಯ್ಯಳತೆಗೆ ಸರಿಯಾಗಿ ಕೂಡುವದು. ಈ ರಿಂಗಿನಲ್ಲಿ ದೊಡ್ಡ ವರ್ತುಲ ಮೇಲೆ ಬಂದು ಕಸೂತಿಯ ಬಟ್ಟೆಯು ಮೇಲಿನ ಅಂಚಿಗೆ ಹೊಂದಿಕೊಂಡು ಸಮಪಾತಳಿ ಯಲ್ಲಿರುವಂತೆ ಅದನ್ನು ಕೂಡಿಸಬೇಕು. ಒಂದು ಸಲ ಕಸೂತಿ ತುಂಬುವದನ್ನು ಮುಗಿಸಿ, ಮತ್ತೊಮ್ಮೆ ರಿಂಗಿನಲ್ಲಿ ಕೂಡಿಸುವದು ಅಸಾಧ್ಯವಾದಾಗ, ಕಟ್ಟಿ

ಗೆಯ ದೊಡ್ಡ ಚೌಕೋನದಲ್ಲಿ ಕೆಳಗೆ ತೋರಿಸಿದಂತೆ ಒಮ್ಮೆ ಕೂಡಿಸಿಟ್ಟು ಬಿಡಬೇಕು. ಕಬ್ಬಿಣ, ಅಲ್ಯುಮಿನಿಯಮ್ ರಿಂಗುಗಳೂ ಇರುತ್ತವೆ.



ಡಿ. ಎಮ್. ಸಿ. ೨೫ನೇ ನಂಬರಿನ ರೇಶಿಮೆಯನ್ನು ತೆಗೆದುಕೊಂಡು, ಸುಮಾರು ಒಂದು ಅಥವಾ ಒಂದೂವರೆ ಫೂಟಿನಷ್ಟು ರೇಶಿಮೆಯನ್ನು ಕಸೂತಿಯ ಕತ್ತರಿಯಿಂದ ಕತ್ತರಿಸಿಕೊಳ್ಳಬೇಕು. ರೇಶಿಮೆಯ ಉದ್ದವನ್ನು ಇದಕ್ಕೂ ಹೆಚ್ಚಾಗಿ ತೆಗೆದುಕೊಂಡರೆ, ನಡನಡುವೆ ಗಂಟುಬಿದ್ದು ತೊಡಕಾಗಿ, ಕಸೂತಿ ಸಮನಾಗಿ ಬರುವದಿಲ್ಲ;ಅದಕ್ಕಾಗಿ ರೇಶಿಮೆ ಹೆಚ್ಚು ಉದ್ದವಿರಕೂಡದು. ಇನ್ನು ಈ ರೇಶಿಮೆಯ ಆರು ಎಳೆಗಳಲ್ಲಿ, ಎರಡು ಎಳೆಗಳನ್ನು—ಎರಡನ್ನೂ ಬೇರೆ ಬೇರೆಯಾಗಿ ತೆಗೆದುಕೊಳ್ಳಬೇಕು. ಎರಡೂ ಎಳೆಗಳನ್ನು ಆ ತುದಿಯಿಂದ ಈ ತುದಿಯವರೆಗೆ ಬೆರಳಿನಿಂದ ಸರಿಯಾಗಿ ಮಾಡಿ, ಎರಡರ ತುದಿಯನ್ನೂ ಒಂದೆಡೆಗೆ ಸೇರಿಸಿ ಸೂಜಿಯಲ್ಲಿ ಪೋಣಿಸಬೇಕು. ರೇಶಿಮೆಯ ಎಳೆಯನ್ನು ಎಲ್ಲಿ ಕತ್ತರಿಸಿದೆಯೋ ಅದೇ ತುದಿಯನ್ನು ಸೂಜಿಯಲ್ಲಿ ಪೋಣಿಸಬೇಕು. ರೇಶಿಮೆಯ ಎಳೆಗಳ ತುದಿಗೆ ಗಂಟು ಹಾಕಬಾರದು. ಹಿಂದಿನಿಂದ

ಸೂಜಿಯನ್ನು ಬಟ್ಟೆಯ ಮೇಲೆ ತೆಗೆದುಕೊಂಡು ಅದರ ಸಮೀಪದಲ್ಲಿಯೇ ಇನ್ನೊಂದು ಎಳೆಯನ್ನು ಮತ್ತೆ ತೆಗೆದುಕೊಂಡು ಆ ದಾರವನ್ನು ಗಟ್ಟಿ ಮಾಡಬೇಕು. ರೇಶಿಮೆ ಎಳೆಗಳನ್ನು ಕತ್ತರಿಸುವಾಗ, ಕೈಯಿಂದಾಗಲಿ, ಹಲ್ಲಿನಿಂದಾಗಲಿ ಕತ್ತರಿಸಬಾರದು. ಹಾಗೆ ಕತ್ತರಿಸಿದರೆ ರೇಶಿಮೆಯ ಎಳೆಗಳು ನಿಃಶಕ್ತವಾಗಿ, ಕಸೂತಿಯು ಅಂದವಾಗಿ ಕಾಣುವದಿಲ್ಲ.

**ಕೈಸೂಜಿ :**

ಈ ಸೂಜಿ ತೀರ ಚಿಕ್ಕದಾಗಿಯೂ ಇರಕೂಡದು; ತೀರ ದೊಡ್ಡದಾಗಿಯೂ ಇರಕೂಡದು. ಸೂಜಿಯ ಮೊನೆಯು ದಾರದ ಎರಡರಷ್ಟು ದೊಡ್ಡದಾಗಿರಬೇಕು. ತುದಿಯು ಮೊನೆಯಾಗಿರಬೇಕು. ಸೂಜಿಯು ಯಾವದೇ ಕಾರಣದಿಂದ ಮಣಿಯಕೂಡದು. ಅದು ಒಮ್ಮೆಲೇ ಮುರಿದರೆ ಅಡ್ಡಿಯಿಲ್ಲ, ಒಮ್ಮೆಲೇ ಮುರಿದರೆ ಅದು ಉಕ್ಕಿನ ಸೂಜಿ ಎಂಬುದರಲ್ಲಿ ಸಂಶಯವಿಲ್ಲ; ಆದರೆ ಮಣಿದ ಸೂಜಿಯಿಂದ ಕಸೂತಿಯನ್ನು ಹಾಕಿದರೆ ಟೆಬ್ಬಿಗಳು ಅಂಕಡೊಂಕಾಗಿ ಬಿದ್ದು ಕಸೂತಿಯು ಅಂದವಾಗಿ ಕಾಣುವದಿಲ್ಲ. ಕೈಕಸೂತಿಯನ್ನು ಹಾಕುವಾಗ ಇಂಥ ಸೂಜಿಗಳು ನಾಲ್ಕೈದಾದರೂ ಜೊತೆಯಲ್ಲಿ ಬೇಕು.

**ಅಂಗುಸ್ತಾನ :**

ಹೊಲಿಯುವಾಗ ಉಪಯೋಗಿಸುವ, ಸರಿಯಾಗಿ ಕೂಡುವ, ಅಂಗುಸ್ತಾನವನ್ನು ತೋರಬೆರಳಿಗೆ ಹಾಕಿಕೊಂಡು ಕೈಸೂಜಿಯನ್ನು ಈ ತೋರಬೆರಳು, ಹೆಬ್ಬೆರಳುಗಳ ಮಧ್ಯದಲ್ಲಿ ಹಿಡಿಯಬೇಕು.

**ಕತ್ತರಿ**

ರೇಶಿಮೆಯ ಎಳೆಗಳನ್ನು ಕತ್ತರಿಸಲು ಈ ಕಸೂತಿಯ ಕತ್ತರಿಯ ಉಪಯೋಗವಾಗುತ್ತದೆ. ಇದು ನಾಜೂಕಾಗಿ ವಿಶಿಷ್ಟ ರೀತಿಯಲ್ಲಿ ಮಣಿದದ್ದಿರುತ್ತದೆ; ಎಂತಹ ಇಕ್ಕಟ್ಟಾದ ಭಾಗವನ್ನೂ, ಕಸೂತಿಯಲ್ಲಿ ಈ ಕತ್ತರಿಯು ಕತ್ತರಿಸುವದು.

**ರೇಶಿಮೆ :**

ಡಿ. ಎಮ್. ಸಿ. (ಅಥವಾ ಕ್ಲಾರ್ಕ) ರೇಶಿಮೆಯಲ್ಲಿ ಬೇರೆ ಬೇರೆ ಗುಂಪುಗಳಿವೆ. ಒಂದು ಗುಂಪಿನಲ್ಲಿ ಆ ಬಣ್ಣಕ್ಕೆ ಸಂಬಂಧಿಸಿದ ೪-೬ ಬಣ್ಣಗಳು ತಿಳಿ, ದಟ್ಟ ಇತ್ಯಾದಿ ದೊರೆಯುತ್ತವೆ ಹೀಗೆ ಗೊತ್ತಿದ್ದರೆ ಬಣ್ಣಗಳ ಬೆರಕೆಯೂ ಸರಿಯಾಗುವದು, ಬಣ್ಣಗಳನ್ನು ಹುಡುಕುವದೂ ಸುಲಭವಾಗುವಹು.

ಕಸೂತಿಯನ್ನು ಮರ್ಸರಾಯಿಜ್ಡ ಪೋಪ್ಲಿನ್ ಬಟ್ಟೆಯ ಮೇಲೆ ಹಾಕಿದರೆ, ಕಸೂತಿಯು ಅಂದವಾಗಿಯೂ ಆಗುವದು, ಅಲ್ಲದೆ ಬಟ್ಟೆಯೂ ತಾಳಿಕೆ ಬರುವದು. ಇನ್ನುಳಿದ ಬಟ್ಟೆಗಳ ಮೇಲೆಯೂ ಕೈಯಿಂದ ಕಸೂತಿಯನ್ನು ಹಾಕಬಹುದು. ಆದರೆ ಅದು ಕಷ್ಟದಾಯಕ !

---

ಪ್ರಕರಣ ೩

# ಬೇರೆ ಬೇರೆ ಕೈ ಹೊಲಿಗೆಗಳು

ಅ) ಕೈ ಹೊಲಿಗೆಗಳಲ್ಲಿ ಬಟ್ಟೆಯ ತುಂಡುಗಳನ್ನು ಜೋಡಿಸುವ ಹೊಲಿಗೆ, ಅಂಚನ್ನು ಮಡಿಚುವ ಹೊಲಿಗೆ, ಮೇಲೆ ಕಾಣದಂತೆ ಬರುವ ಹೊಲಿಗೆ ಎಂದು ಮುಂತಾಗಿ ಉಡುಪನ್ನು ತಯಾರಿಸಲು ಬೇಕಾಗುವ ಹೊಲಿಗೆಗಳಲ್ಲಿ ಹೇಳಬಹುದು. ಉದಾ: ದುಂಡು ಟಿಬ್ಬಿ, ತುರುಪಿ ಹೊಲಿಗೆ ಇತ್ಯಾದಿ. (ಬ) ಇನ್ನು ಕೆಲವು ಹೊಲಿಗೆಗಳು ಕೇವಲ ಶೋಭೆಗಾಗಿಯೇ ತಯಾರಾದ ಬಟ್ಟೆಗಳ ಮೇಲೆ ಬರುವವು. ಉದಾ: ಎಲೆ, ಹೂವಿನ ಹೊಲಿಗೆ, ಜೇಡನ ಹೊಲಿಗೆ ಇತ್ಯಾದಿ. (ಕ) ಮೂರನೆಯ ಬಗೆಯು ಈ ಹೊಲಿಗೆ, ಹೊಲಿಯುವ ಕೆಲಸ ಮತ್ತು ಶೋಭೆಯ ಕೆಲಸಗಳೆರಡನ್ನೂ ಒಟ್ಟಿಗೇ ಮಾಡುವದು. ಉದಾ: ಸರಪಳಿ, ಗುಂಡೀಮನಿ ಹೊಲಿಗೆಗಳು.

ಈ ಮೂರು ಬಗೆಯ ಹೊಲಿಗೆಗಳನ್ನೂ ಹಾಕಬಹುದಾದರೆ, ಇನ್ನುಳಿದ ಯಾವುದೇ ಹೊಲಿಗೆಗಳನ್ನು ನೋಡಿದೊಡನೆಯೇ ತಿಳಿದುಕೊಳ್ಳಬಹುದು.

(೧) ಎಳೆ :



ಎಳೆ

ಇದು ತೀರ ಸಾಮಾನ್ಯವಾದ ಹೊಲಿಗೆಯಾದ್ದರಿಂದ ಇದಕ್ಕೆ ಅಷ್ಟು ಮಹತ್ವವಿಲ್ಲವೇನೋ ! ಆದರೆ ಹೊಲಿಗೆಯ, ಕಸೂತಿಯ ಎಲ್ಲ ಹೊಲಿಗೆಗಳಿಗೂ ಇದೇ ಮೂಲ. ದೂರ ದೂರ ದೊಡ್ಡ ದೊಡ್ಡ ಎಳೆಗಳನ್ನು, ಬಟ್ಟೆಯ ತುಂಡುಗಳನ್ನು ಜೋಡಿಸಲು ಹಾಕುವದು ಬೇರೆ. ಸಮಾನಾಂತರದಲ್ಲಿ ಒಂದೇ ಪ್ರಮಾಣದ ಎಳೆಗಳನ್ನು ಹಾಕುವದು ಅಷ್ಟೊಂದು ಸುಲಭವಲ್ಲ ಉದ್ದಕ್ಕೂ ಎಳೆಗಳನ್ನು ಹಾಕಿ, ಸಣ್ಣ ಸಣ್ಣ ನಿರಿಗೆಗಳನ್ನು ಹಿಡಿದು, ಅವುಗಳ

ಮೇಲೆ ಬಣ್ಣದ ದಾರದಿಂದ ಗಟ್ಟಿಯಾಗಿ ಟಿಬ್ಬಿಹಾಕಿದರೆ, ಫ್ರಾಕಿನ ನಡದಲ್ಲಿ ಅಂದವಾಗಿ ಕಾಣುವದು. ಸ್ಮೋಕಿಂಗ ಮಾಡಲು, ಜೇನುಹುಟ್ಟಿನ ಹೊಲಿಗೆ ಹಾಕಲು ಪ್ರಮಾಣಬದ್ಧವಾದ ಈ ಎಳೆಯೇ ಮುಖ್ಯ. ಕಸೂತಿಯಲ್ಲಿ ಎಲೆ, ಹೂಗಳ ಒಳಭಾಗಗಳನ್ನು ಈ ಎಳೆಯಿಂದಲೇ ಬಹಳ ನಯವಾಗಿ ತುಂಬ ಬಹುದು.

(೨) **ಟಿಬ್ಬಿ** :

ರಾಟಿಯು ಬರುವದಕ್ಕೆ ಪೂರ್ವದಲ್ಲಿ, ಇದೇ ಹೊಲಿಗೆಯನ್ನೇ ಜನರು ಪ್ರಾಮುಖ್ಯವಾಗಿ ಕೈಯಿಂದ ಹಾಕುತ್ತಿದ್ದರು. ಬಣ್ಣದ ರೇಶಿಮೆಯಿಂದ ಪ್ರಮಾಣಬದ್ಧವಾಗಿ ಈ ಟಿಬ್ಬಿಗಳನ್ನು ಹಾಕಿದರೆ ಅಥವಾ ಇದರಿಂದ ಎಲೆ, ಹೂಗಳ ಬಾಹ್ಯರೇಷೆಗಳನ್ನು, ಯೋಗ್ಯ ಬಣ್ಣದ ರೇಶಿಮೆಯಿಂದ ತುಂಬಿದರೆ, ಅಂದವಾಗಿ ಕಾಣುವದು. ಅಂಚಿನ ಹೊಲಿಗೆ, ದೇಟಿನ ಹೊಲಿಗೆಗಳು ಇದರದೆ ಬೇರೆ ಪ್ರಕಾರಗಳು.

(೩) (ಅ) **ಕತ್ತರಿ ಹೊಲಿಗೆ** :
(ಬ) **ಬುಗಡೀ ಹೊಲಿಗೆ** (ಹೆರಿಂಗಬೋನ್)
(ಕ) **ಕಾಶ್ಮೀರ ಹೊಲಿಗೆ**

(ಅ)



ಈ ಹೊಲಿಗೆಯನ್ನು ಹಾಕುವದು ಬಹಳ ಸುಲಭ; ನೋಡಲೂ ಅಂದ ವಾಗಿ ಕಾಣುತ್ತದೆ. ಈ ಹೊಲಿಗೆಯಲ್ಲಿಯ ಎಲ್ಲ ಟಿಬ್ಬಿಗಳು ಪ್ರಮಾಣಬದ್ಧ ವಾಗಿ, ಸಮಾನಾಂತರದಲ್ಲಿದ್ದರೆ, ಅಂತರವನ್ನು ಹೆಚ್ಚು ಕಡಿಮೆ ಮಾಡಿದಂತೆ, ಹೊಲಿಗೆಯೂ ಒಂದೊಂದು ರೀತಿಯಲ್ಲಿ ಅಂದವಾಗಿ ಕಾಣುವದು.

ಉಣ್ಣೆ ಅಥವಾ ಫ್ಲಾನೆಲ್ ಬಟ್ಟೆಯ ತುಂಡುಗಳನ್ನು ಜೋಡಿಸುವಾಗಲೂ ಈ ಹೊಲಿಗೆ ಹಾಕುವರು. ಈ ಹೊಲಿಗೆಯನ್ನು ಹಾಕುವಾಗ ಬಟ್ಟೆಯ ಅಂಚನ್ನು ಎರಡು ಸಲ ಒಳಗಡೆಗೆ (ದುಂಡು ಕಟ್ಟುವಾಗ ಮಡಿಚುವಂತೆ) ಮಡಿಚಬೇಕಾಗಿಲ್ಲ. ಒಂದೇ ಸಲ ಒಳಗೆ ಮಡಿಚಿ, ಈ ಹೊಲಿಗೆ ಹಾಕಲು, ಬಟ್ಟೆಯ ಗುಂಜು ಇಲ್ಲವಾಗುವದು. ಅಲ್ಲದೆ ಈ ಹೊಲಿಗೆ ಹೊರಗಡೆಗೆ ಅಲ್ಲಿ ಕಾಣಬರುವದಿಲ್ಲವಾದ್ದರಿಂದ, ಇನ್ನೂ ನಯವಾಗಿರುವದು.

ಫ್ರಾಕು, ಜಂಪರುಗಳ ಕೊರಳು, ತೋಳುಗಳಿಗೆ ಬಣ್ಣದ ರೇಶಿಮೆಯಿಂದ ಈ ಹೊಲಿಗೆ ಹಾಕಬಹುದು. ಟೇಬಲ್ ಕ್ಲಾಥ, ಪರಕರ, ಬಾಗಿಲು ಪಡದೆಗಳ ಅಂಚನ್ನು ಕಟ್ಟಲೂ ಇದನ್ನು ಉಪಯೋಗಿಸಬಹುದು. ಹೊಲಿಗೆ ಕಸೂತಿಗಳೆರಡರ ಕಾರ್ಯವನ್ನೂ ಈ ಹೊಲಿಗೆ ಮಾಡುವದು.

ಹೊಲಿಗೆ ಹಾಕುವಾಗ, ಸೂಜಿಯನ್ನು ವಕ್ರವಾಗಿ ಬಟ್ಟೆಯಲ್ಲಿ ಚುಚ್ಚಿಕೊಂಡು, ಅಲ್ಲಿಂದ ಮತ್ತೆ ಕೆಳಗಡೆ ನೇರವಾಗಿ ಚುಚ್ಚಿ ಎಳೆಯಬೇಕು. ಮೊದಲು ಎಡಗಡೆಯ ಹೊಲಿಗೆಯನ್ನೆಲ್ಲ (ಮೊದಲನೆಯ ಚಿತ್ರದಲ್ಲಿ ತೋರಿಸಿದಂತೆ) ಮುಗಿಸಿಕೊಂಡರೆ ಅರ್ಧ ಕತ್ತರಿ ಹೊಲಿಗೆಯಾಯಿತು. ಆಮೇಲೆ ಬಲಗಡೆಗೆ ಉದ್ದಕ್ಕೂ ಹಾಕುತ್ತ ಬಂದರೆ, ಕತ್ತರಿ ಹೊಲಿಗೆ ಪೂರ್ಣವಾಗುವದು ಇದರಲ್ಲಿ ಹೊಲಿಗೆಗಳು ಒಂದಕ್ಕೊಂದು ಅಂಟಿಕೊಂಡಿದ್ದು ನಡುವೆ ಚೌಕೋನಗಳು ಬರುವವು.

**(ಬ) ಬುಗಡೀ ಹೊಲಿಗೆ** (ಹೆರಿಂಗ ಬೋನ್)



ಇದಾದರೂ ಕತ್ತರಿಯ ಹೊಲಿಗೆಯ ಜಾತಿಗೇ ಸೇರಿದ್ದು. ಆದರೆ ಇದರಲ್ಲಿ ಕತ್ತರಿಯ ಮಧ್ಯಬಿಂದುವಿನಿಂದ, ಮೇಲಿನ ಕೆಳಗಿನ ಭಾಗಗಳು ಸರಿ

ಯಾಗಿರುವದಿಲ್ಲ. ಮೇಲಿನ ಭಾಗ ದೊಡ್ಡದಾಗಿ ಕೆಳಗಿನ ಭಾಗ ಸಣ್ಣದಾಗಿರ ಬಹುದು. ಅಥವಾ ಇದಕ್ಕೆ ವಿರುದ್ಧವಾಗಿರಬಹುದು. ಅಲ್ಲದೆ ಈ ಹೊಲಿಗೆ ಗಳು ಒಂದಕ್ಕೊಂದು ಅಂಟಿಕೊಂಡಿರಲೇಬೇಕೆಂಬ ನಿರ್ಬಂಧವೂ ಇಲ್ಲ. ಮತ್ತು ಪೂರ್ಣ ಕತ್ತರಿಯನ್ನು ಒಂದೇ ಸಲಕ್ಕೆ ಹಾಕಿಬಿಡಬಹುದು. ಈ ಈ ಕತ್ತರಿ ಬರುವ ಬಿಂದುವಿನಲ್ಲಿ ಬೇರೊಂದು ಬಣ್ಣದ ದಾರದಿಂದ ಸುತ್ತುತ್ತ ಹೋದರೆ, ಅದೂ ಚೆಂದ ಕಾಣುವದು.

ಎಳೆ ಎಣಿಸಿ ಈ ಬುಗಡೀ ಹೊಲಿಗೆಯನ್ನು ಹಾಕಿದರೆ, ಕನ್ನಡ ಕಸೂತಿ ಯಲ್ಲಿ ಇದೇ ಮೆಂಥೇದ ಹೊಲಿಗೆ. ಈ ಹೊಲಿಗೆಯಿಂದಲೇ ಬೇಕಾದ ಆಕೃ ತಿಯ ಪ್ರಮಾಣಬದ್ಧ ಚಿತ್ರಗಳನ್ನು ಹೆಣೆಯಬಹುದು.

## (ಕ) ಕಾಶ್ಮೀರ ಹೊಲಿಗೆ

ಕನ್ನಡ ಕಸೂತಿಯಲ್ಲಿ ಎಳೆ ಎಣಿಸಿ ಬುಗಡೀ ಹೊಲಿಗೆಯನ್ನು ಹಾಕುವ ದಾದರೆ, ಎಳೆ ಎಣಿಸದೆ ಸಣ್ಣ ದೊಡ್ಡ ಎಲೆ ಹೂಗಳನ್ನು ಕತ್ತರಿ ಹೊಲಿಗೆ ಯಿಂದ ತುಂಬುವದೇ ಕಾಶ್ಮೀರ ಹೊಲಿಗೆ. ಸೃಷ್ಟಿಸೌಂದರ್ಯದಿಂದ ರಮ ಣೀಯವಾದ ಕಾಶ್ಮೀರಿನಲ್ಲಿ, ಎಲೆ ಹೂ ಪಕ್ಷಿಗಳನ್ನೆಲ್ಲ ಚಿತ್ರದಲ್ಲಿ ಮೂಡಿಸು ವದು ಅಲ್ಲಿಯ ಹೆಂಗಸರಿಗೆ ಒಂದು ಚಟವಾಗಿರಬೇಕು. ಆದರೆ ಎಳೆ ಎಣಿಸಿ ಹಾಕುವದು ಸಾಧ್ಯವಿಲ್ಲದೆ, ಈ ರೀತಿಯಾಗಿ ತುಂಬಿರಬೇಕು ! ಎಳೆ ಎಣಿಸಿ ದರೆ ಪ್ರಮಾಣಬದ್ಧವಾದ ಆಕೃತಿಗಳು ಮಾತ್ರ ಹೊರಡುತ್ತವೆ. ಆದರೆ ಇದ ರಲ್ಲಿ, ಗಾಳಿಯಲ್ಲಿ ಹಾರಾಡಿದಂತೆಯೇ ಎಲೆ ಹೂಗಳು ಸ್ವಾಭಾವಿಕವಾಗಿ ಮೂಡುತ್ತವೆ.

ಎಲೆಯನ್ನು ತುಂಬುವಾಗ, ಒಂದು ಫೂಟಿನಷ್ಟು ಉದ್ದದ ಎರಡೆಳೆ ದಾರಗಳನ್ನು (೨೫ ನಂ. ಡಿ. ಎಮ್. ಸಿ. ಯಲ್ಲಿ) ಕತ್ತರಿಸಿಕೊಂಡು ಪೋಣಿಸಿ, ಒಂದು ತುದಿಯಿಂದ ತುಂಬಲು ಪ್ರಾರಂಭಿಸಬೇಕು. ಶೇಡಿಂಗ ದಾರವಿದ್ದರೆ ಒಳ್ಳೆಯದು. ತಿಳಿ ಬಣ್ಣ ಎಲೆಯ ತುದಿಗೆ ಬರುವಂತೆ ಪ್ರಾರಂ ಭಿಸಬೇಕು. ಸೂಜಿಯನ್ನು ಬಲದ ದಂಟಿಗುಂಟ ಚುಚ್ಚಿ ಮೇಲೆ ತೆಗೆದುಕೊಂಡು ಮತ್ತೆ ಎಡಕ್ಕೆ ಚುಚ್ಚಿ ಮೇಲೆ ತೆಗೆದುಕೊಳ್ಳಬೇಕು.

ಹೀಗೆ ಹಾಕುತ್ತ ಹೋದರೆ ಎಲೆಯ ನಡುವಿನ ಶಿರ ತನ್ನಿಂದ ತಾನೇ ಸಿದ್ಧ ವಾಗುವದು. ಮತ್ತೆ ಇದರಿಂದ ರೇಶಿಮೆಯ ಉಳಿತಾಯವೂ ಬಹಳವಾಗು ವದು.

ಎಲೆಯಲ್ಲಿ ಮೊದಲು ಯಾವದೇ ಬಣ್ಣದ ದಾರದಿಂದ ಅಡ್ಡ ಎಳೆ ಗಳನ್ನು ಹಾಕಿ (ಪ್ಯಾಡಿಂಗ ಮಾಡಿ) ಮೇಲೆ ಹಸಿರು ಶೇಡಿಂಗಿನಿಂದ ಕಾಶ್ಮೀರ ಹೊಲಿಗೆಯಲ್ಲಿ ತುಂಬಿದರೆ, ಎಲೆಗಳು ಉಬ್ಬಿಬಂದಂತೆ ಕಾಣುವವು. ಅವು ಗಳಿಗೆ ಒಂದು ಬಗೆಯ ಮೆರುಗು ಬರುವದು. ಈ ಹೊಲಿಗೆಯಿಂದ ಹೂವಿನ ಪಕಳಿಗಳು, ಪಕ್ಷಿ ಮೊದಲಾದವುಗಳನ್ನೆಲ್ಲ ತುಂಬಬಹುದು.

ಟೇಬಲ್‌ಕ್ಲಾಥಿನ್ನಮಧ್ಯೆ, ಮೂಲೆಗಳಲ್ಲಿ, ಪರಕರ, ಫ್ರಾಕ್, ಜಂಪರು ಗಳ ಅಂಚಿಗೆ ಡಿಝಾಯಿನುಗಳನ್ನು ತುಂಬಲು ಈ ಹೊಲಿಗೆಯನ್ನು ಉಪ ಯೋಗಿಸಬಹುದು.

(೪) **ಕಂಬಳಿ ಹೊಲಿಗೆ** (ಬ್ಲಾಂಕೆಟ್ ಸ್ಟಿಚ್)

ಈ ಹೊಲಿಗೆ ಗುಂಡೀಮನೆ ಹೊಲಿಗೆಯಂತೆಯೇ; ಆದರೆ ಎಳೆಗಳು ದೂರ ದೂರದಲ್ಲಿರುವವು. ರಗ್ಗು ಅಥವಾ ಕಂಬಳಿಗಳ ಅಂಚಿಗೆ, ಉಣ್ಣೆಯ ದಪ್ಪನ್ನ ಬಟ್ಟೆಗಳ ಅಂಚಿಗೆ, ಗುಂಜುಕಾಣದಂತೆ ಮಡಿಚಿ ಹಾಕಲು ಈ ಹೊಲಿಗೆಯನ್ನು ಉಪಯೋಗಿಸುವರು. ನಡುವಿನ ಗೋಪುಗಳನ್ನು ಸರಿಯಾದ



ಅಂತರದಲ್ಲಿ ಅಷ್ಟೇ ಉದ್ದವಾಗಿ ತೆಗೆದುಕೊಂಡರೆ ಒಂದು ಬಗೆಯ ಶೋಭೆ ಯುಂಟಾಗುತ್ತದೆ. ಒಂದು ದೊಡ್ಡದು, ಒಂದು ಸಣ್ಣದು ತೆಗೆದುಕೊಂಡರೆ ಅಂದೊಂದು ಬಗೆಯ ಶೋಭೆಯುಂಟಾಗುವದು. ಈ ಹೊಲಿಗೆಯಿಂದ ಬಟ್ಟೆ ಗಳು ಉದ್ದಕ್ಕೆ ಸೀಳುವದಿಲ್ಲ.

ಟೇಬಲ ಕ್ಲಾಥ್, ಬಾಗಿಲು ಪಡದೆಗಳ ಅಂಚಿಗೂ ಈ ಹೊಲಿಗೆಯನ್ನು ಹಾಕಬಹುದು.

## (೫) ಸರಪಳಿ ಹೊಲಿಗೆ

ಈ ಹೊಲಿಗೆಯಲ್ಲಿ ಸರಪಳಿಯಂತೆ ಹೊಲಿಗೆಗಳು ಒಂದರಲ್ಲೊಂದು ಸೇರಿಕೊಂಡಿರುವವು. ೨೫ ನಂಬರಿನ ಡಿ. ಎಮ್. ಸಿ. ದಾರದಲ್ಲಿ ಎರಡು



ಎಳೆಗಗಳನ್ನು ತೆಗೆದುಕೊಂಡು, ಒಂದೇ ಅಳತೆಯಲ್ಲಿ ಸರಿಯಾಗಿ ಹಾಕಿದರೆ ಈ ಹೊಲಿಗೆ ಬಹಳ ಅಂದವಾಗಿ ಕಾಣುವದು.

ಬಟ್ಟೆಯ ಮೇಲೆ ಹೆಸರು ಹಾಕಲು, ವಿವಿಧ ಸುಳುವುಗಳನ್ನು ತೆಗೆಯಲು, ಪರಕರ, ಜಂಪರುಗಳ ಅಂಚಿಗೆ, ಈ ಹೊಲಿಗೆಯನ್ನು



ಉಪಯೋಗಿಸುವರು. ಜೋಡು ಸರಪಳಿ, ದುಂಡು ಸರಪಳಿ ಉದ್ದ ಸರಪಳಿ ಎಂದು ಬೇರೆ ಬೇರೆ ಪ್ರಕಾರಗಳಿಂದ ಇದನ್ನು ತುಂಬಬಹುದು.

ಈ ಹೊಲಿಗೆಯನ್ನು ಝಿಗ್‌ಝಾಗದಂತೆ (ಅಂಕಡೊಂಕಾಗಿ) ಹಾಕಿದರೆ ವಂಕಿಯಂತೆ ಅದೂ ಚೆನ್ನಾಗಿ ಕಾಣುವದು. ಫ್ರಾಕಿನ ತೋಳುಗಳ ಮೇಲೆ; ನಡದಲ್ಲಿ ಇದು ಅಂದವಾಗಿ ಕಾಣುವದು. ಸ್ಮೋಕಿಂಗ ಮಾಡಿದಾಗ

ಗಟ್ಟಿಯಾಗಿರಿಸಲು, ಈ ಹೊಲಿಗೆಯನ್ನು ಬೇಕಾದರೂ ಹಾಕಬಹುದು. ಒಂದು ಕೆಳಗೆ, ಒಂದು ಮೇಲೆ, ದಿಕ್ಕು ಬದಲಿಸಿ ಸರಪಳಿ ಹಾಕುವದರಿಂದಲೇ ಈ ಹೊಲಿಗೆ ತಯಾರಾಗುವದು.

**ಜಾದೂ ಸರಪಳಿ** (ಮ್ಯಾಜಿಕ್ ಚೇನ್)

ಇದೂ ಸರಪಳಿಯೇ; ಆದರೆ ಇಲ್ಲಿ ಒಂದು ಟೆಬ್ಬಿಯ ಬಣ್ಣ ಒಂದು ವಿಧ, ಇನ್ನೊಂದು ಟೆಬ್ಬಿಯದು ಇನ್ನೊಂದು ವಿಧ. ಮತ್ತೆ ಮೂರನೆಯ ಟೆಬ್ಬಿಗೆ, ಮೊದಲನೆಯ ಟೆಬ್ಬಿಯ ಬಣ್ಣವೇ ಬರುತ್ತದೆ. ನಾಲ್ಕನೆಯದಕ್ಕೆ ಎರಡನೆಯ ಟೆಬ್ಬಿಯದು.

ಎರಡು ಬಣ್ಣದ ದಾರಗಳ ಎರಡು ಎಳೆಗಳನ್ನು ಸೂಜಿಯಲ್ಲಿ ಪೋಣಿಸಿ, ಕೆಳಗಿನಿಂದ ಬಟ್ಟೆಯಲ್ಲಿ ಚುಚ್ಚಿ ಮೇಲೆತ್ತಬೇಕು. ಸೂಜಿಯ ಸುತ್ತು ದಾರ ತೆಗೆದುಕೊಳ್ಳುವಾಗ ಒಂದು ಬಣ್ಣದ ದಾರವನ್ನಷ್ಟೇ ಹಾಯಿಸಿ, ಇನ್ನೊಂದು ಎಳೆಯನ್ನು ಮೇಲೆಯೇ ಸಡಿಲಾಗಿ ಬಿಟ್ಟಿರಬೇಕು. ಮತ್ತೆ ಮುಂದಿನ ಟೆಬ್ಬಿಯನ್ನು ಹಾಕುವಾಗ, ಮತ್ತೊಂದು ಬಣ್ಣದ ( ಮೇಲೆ ಬಿಟ್ಟಿದ್ದ ) ದಾರವನ್ನು ಸೂಜಿಯ ಸುತ್ತು ಹಾಯಿಸಬೇಕು. ಹೀಗೆಯೇ ಬೇರೆ ಬೇರೆ ದಾರಗಳನ್ನು ಸುತ್ತು ಹಾಯಿಸಿದಾಗ, ಸರಪಳಿ ಬಹಳ ಅಂದವಾಗಿ, ಅದೇನೋ ಜಾದು ಮಾಡಿದಂತೆ ಕಾಣುವದು. ದೇಟಿಗೆ, ಬಳ್ಳಿಗೆ ಈ ಹೊಲಿಗೆಯನ್ನು ಹಾಕಬಹುದು.

ಸರಳವಾದ ಸರಪಳಿ ಹೊಲಿಗೆಯಲ್ಲಿ, ಸರಪಳಿಯ ಒಂದೊಂದೇ ಕಿಂಡಿಗಳನ್ನು ಹಾಕಿ ಎಲೆ ಹೂಗಳ ಒಳಭಾಗವನ್ನೂ ತುಂಬಬಹುದು.

ಈ ಹೊಲಿಗೆಯಲ್ಲಿ ರೆಕ್ಕೆಸರಪಳಿ ಎಂಬುದು ಇನ್ನೊಂದು ವಿಧ. ರೆಕ್ಕೆ ಹೊಲಿಗೆ ಸರಪಳಿಗೆರಡರ ಬೆರಿಕೆಯಿಂದ ಈ ಹೊಲಿಗೆಯುಂಟಾಗುತ್ತದೆ. ರೆಕ್ಕೆಹೊಲಿಗೆಯಲ್ಲಿ ಬರುವ ತುದಿಗೆ ಒಂದೊಂದು ಸಣ್ಣ ಎಲೆ ಇದ್ದಂತೆ ಭಾಸವಾಗುತ್ತದೆ.

ಸರಳ ಸರಪಳಿ ಹಾಕುವಾಗ, ಸೂಜಿಯ ತುದಿಗೆ ದಾರವನ್ನು ಸುತ್ತಿ ತೆಗೆದುಕೊಳ್ಳುತ್ತೇವೆ. ಆಗ ದಾರ ಸೂಜಿಯ ಕೆಳಗೆ ಇರುತ್ತದೆ. ಆದರೆ ಅದನ್ನೇ ಮೇಲೆ ಇಟ್ಟು ಸುತ್ತಿದರೆ ಮುರಿಗೆ ಸುತ್ತಿದ ಸರಪಳಿ ಹೊಲಿಗೆಯಾಗುತ್ತದೆ.

## (೬) ರೆಕ್ಕೆ ಹೊಲಿಗೆ

ಇದು ಕಂಬಳೀ ಹೊಲಿಗೆ ಅಥವಾ ಗುಂಡೀಮನೆ ಹೊಲಿಗೆಯನ್ನೇ ಹೋಲುವದು. ಆದರೆ ಇಳುಕಲಾಗಿ ಒಂದು ಸಲ ಮೇಲೆ, ಅಥವಾ ಒಂದು ಸಲ ಎಡಕ್ಕೆ, ಒಂದು ಸಲ ಬುಡಕ್ಕೆ ದಿಕ್ಕು ಬದಲಿಸಿ ಹಾಕುವದರಿಂದ, ರೆಕ್ಕೆ ಹೊಲಿಗೆಯಾಗುತ್ತದೆ. ರೆಕ್ಕೆಗಳಂತೆ ಇದರ ಭಾಗಗಳು ಕಾಣುವದರಿಂದಲೇ ಇದಕ್ಕೆ ಆ ಹೆಸರು.



ಇದರಲ್ಲಿ, ಒಂಟಿ, ಜೋಡು, ಮೂರು ರೆಕ್ಕೆ ಹೊಲಿಗೆ ಎಂದು ಮೂರು ವಿಧ. ಒಂದು ದಿಕ್ಕಿನಲ್ಲಿ ಒಂದು ಹೊಲಿಗೆ ಹಾಕಿದರೆ, ಒಂಟಿ ರೆಕ್ಕೆಯಾಗುತ್ತದೆ. ಹಾಗೇ ಎರಡು ಮೂರು ಹಾಕಿದರೆ ಜೋಡು, ಮೂರು ರೆಕ್ಕೆ ಹೊಲಿಗೆಗಳಾಗುತ್ತವೆ. ಜೋಡು ರೆಕ್ಕೆ ಹೊಲಿಗೆಯಲ್ಲಿ ಝಿಗಝಾಗ್ ಮಾಡಿದಂತೆ ಅಂದವಾಗಿ ಕಾಣುತ್ತದೆ. ಚಿತ್ರದಲ್ಲಿ ತೋರಿಸಿದ್ದು ಒಂಟಿ ರೆಕ್ಕೆ ಹೊಲಿಗೆ ಮಾತ್ರ.

ಎರಡು ಗೆರೆಗಳ ನಡುವೆ ಒಂಟಿ ರೆಕ್ಕೆ ಹೊಲಿಗೆ ಬರುವಂತೆಯೂ ಹಾಕಬಹುದು. ಈ ರೆಕ್ಕೆ ಹೊಲಿಗೆಯಲ್ಲಿಯೇ ತುದಿಗೆ ಒಂದು ಸುತ್ತು ದಾರ ಹಾಯಿಸಿ, ತೆಗೆದುಕೊಂಡರೆ ಅದನ್ನೇ ಕ್ರೇಟಿನ್ ಹೊಲಿಗೆ ಎಂದು ಹೇಳುವರು.

ಈ ರೆಕ್ಕೆ ಹೊಲಿಗೆಯಾದರೂ ಸ್ವಯಂಪೂರ್ಣವಾಗಿದೆ. ಹೊಲಿಗೆಯ ದೃಷ್ಟಿಯಿಂದ ಕಸೂತಿಯ ದೃಷ್ಟಿಯಿಂದ ಒಟ್ಟಿಗೇ ಉಪಯುಕ್ತವಾಗಿರುತ್ತದೆ. ಜಂಪರು, ತೋಳುಗಳ ಅಂಚಿಗೆ, ಪರಕರ, ಟೇಬಲ್‌ಕ್ಲಾಥ್, ಪಡದೆ

ಗಳ ಅಂಚಿಗೆ, ಸಣ್ಣ ರಿಕ್ಕೆ ಹೊಲಿಗೆ ಹಾಕುವದರಿಂದ ಅಂದವಾಗಿ ಕಾಣು ವದು. ಈ ಹೊಲಿಗೆಯಿಂದ ಸೀರಿಯ ಅಂಚನ್ನೂ ಮಾಡಬಹುದು.

## (೭) ಅಂಚಿನ ಹೊಲಿಗೆ (ಬ್ಯಾಕ್ ಸ್ಟಿಚ್)

ಟಿಬ್ಬಿಯು ಹಿಂಬದಿಗೆ ಬಂದಂತೆ, ಈ ಹೊಲಿಗೆ ಮೇಲೆ ಕಾಣುವದು. ಅಂಚಿಗೆ ಹಾಕಿದರೆ ಇದು ಅಂದವಾಗಿ ಕಾಣುವದರಿಂದ, ಸುಲಭವಾಗಿರುವದ



ರಿಂದ, ಹಾಗೆ ಹೆಸರು ಬಂದಿದೆ. ಈ ಹೊಲಿಗೆಯನ್ನು, ದೇಟಿಗೆ, ಸುಳುವಿಗೆ ಹಾಕುವರು. ಈ ಹೊಲಿಗೆಯನ್ನು ಹಾಕಲು, ಹಿಂಬದಿಯ ಹೊಲಿಗೆಯ ಅರ್ಧಕ್ಕೆ, ಕೆಳಗಿನಿಂದ ಚುಚ್ಚಿ ಮೇಲೆ ತೆಗೆದುಕೊಳ್ಳಬೇಕು. ಮೇಲಿನ ದಾರ ವನ್ನು ಒಂದೇ ಬದಿಗೆ ತೆಗೆದುಕೊಂಡರೆ ಹೊಲಿಗೆಗೆ ಮೆರುಗು ಬರುವದು.

ಈ ಅಂಚಿನ ಹೊಲಿಗೆಯನ್ನು ಹಾಕಿ ಮೇಲೆ ಮತ್ತೊಂದು ಬಣ್ಣದ ಒಂದೆಳೆ (ಡಿ. ಎಮ್. ಸಿ) ರೇಶಿಮೆಯಿಂದ, ಮುರಿಗೆ ಸುತ್ತಿದಂತೆ ಹಾಕಿದರೆ ಆ ಹೊಲಿಗೆ ಬಹಳ ಅಂದವಾಗಿ ಕಾಣುವದು. ಉದಾಹರಣೆಗೆ ಹಸಿರು ಬಣ್ಣದ ದೇಟಿನ ಮೇಲೆ ಹಳದಿ ಬಣ್ಣದ ದಾರ ಸುತ್ತಿದರೆ.

ಈ ಅಂಚಿನ ಹೊಲಿಗೆಯನ್ನು ಎರಡು ಬದಿಗೆ ಒಮ್ಮೆಲೇ ಹಾಕಬಹುದು. ಅಂದರೆ ಹಿಂದುಗಡೆ, ಸೂಜಿಯನ್ನು ಚುಚ್ಚಿ ಮತ್ತೊಂದು ಬದಿಗೆ ಹಾಯಿಸು ವದರಿಂದ ಹಿಂದೆ ಕ್ರಾಸಸ್ಟಿಚ್ಚಿನಂತೆ ಕಾಣಿಸುವದು. ಇದರಿಂದ ಎಲೆ ಹೂ ಗಳನ್ನು ಕೂಡ ತುಂಬಬಹುದು. ಶ್ಯಾಡೋವರ್ಕ ಮಾಡಲು ವಾಯಿಲ, ಆರ್ಗಂಡಿಯಂತಹ ಬಟ್ಟೆಯ ಮೇಲೆ ಅಂಚಿನ ಹೊಲಿಗೆಯನ್ನು ದಟ್ಟವಾದ ರೇಶಿಮೆಯಿಂದ ಹಾಕಿದರೆ, ಹಿಂದಿನ ಕತ್ತರಿ ಹೊಲಿಗೆಯಿಂದ ದಟ್ಟವಾದ ನೆರಳು ಸುಂದರವಾಗಿ ಕಾಣುವದು.

## (೮) ದೇಟಿನ ಹೊಲಿಗೆ (ಸ್ಟೆಮ್ ಸ್ಟಿಚ್)

ಹಿಂದೆ ಸೂಜಿ ಚುಚ್ಚಿದ ಸ್ಥಳದಿಂದಲೇ ಮತ್ತೆ ದಾರವನ್ನೆಳೆಕೊಳ್ಳುವ ಈ ಹೊಲಿಗೆಗಳಿಗೆಲ್ಲ ಇಂಗ್ಲೀಷಿನಲ್ಲಿ “ ಫ್ಲಾಟ ಸ್ಟಿಚ್ ” ಎಂದು ಹೇಳುವರು.



ಇದೂ ಆ ಜಾತಿಯದು. ಅಂಚಿನ ಹೊಲಿಗೆಯಲ್ಲಿ ಸೂಜಿಯನ್ನು ಹಿಂದಿನಿಂದ ಚುಚ್ಚಿ ಮುಂದಕ್ಕೆ ಎಳೆದುಕೊಂಡರೆ ಇದರಲ್ಲಿ ಸೂಜಿಯನ್ನು ಮುಂದಿನಿಂದ ಹಿಂದೆ ಚುಚ್ಚುವದಿರುತ್ತದೆ. ಇಲ್ಲಿಯೂ ಶೇಡಿಂಗ ರೇಶಿಮೆಯನ್ನು (ದೇಟನ್ನು ಹಾಕುವಾಗ ಬೊಡ್ಡೆಯಲ್ಲಿ ದಟ್ಟವಾದ ಬಣ್ಣ ಬೇಕು.) ತೆಗೆದುಕೊಂಡು, ಅದನ್ನು ಒಂದೇ ಬದಿಗಿಟ್ಟು ಹಾಕಿದರೆ, ದೇಟಿನ ಹೊಲಿಗೆ ಹೊಳೆದಂತೆ ಕಾಣುವದು. ಈ ಹೊಲಿಗೆ ಹಾಕಲು ಎರಡು ಬಣ್ಣದ ಎಳೆಗಳನ್ನು ಕೂಡಿಸಿದರೂ ಚೆನ್ನಾಗಿ ಕಾಣುವದು. ಮೇಲೆ ಮುರಿಗೆ ಸುತ್ತಿದಂತೆ ಮತ್ತೊಂದು ಎಳೆ ಹಾಕಿದರಂತೂ ಸುಂದರವಾಗಿ ಕಾಣುತ್ತದೆ.

ದೇಟು, ಎಲೆ ಹೂಗಳ ಬಾಹ್ಯರೇಷೆ, ಪರಕರ, ಟೇಬಲ್‌ಕ್ಲಾಥಗಳ ಅಂಚು ಇವುಗಳನ್ನು ಈ ಹೊಲಿಗೆಯಿಂದ ತುಂಬಬಹುದು.

## (೯) ಗುಂಡೀಮನಿ ಹೊಲಿಗೆ (ಬಟನ್ ಹೋಲ್ ಸ್ಟಿಚ್)

ಅಂಗಿಯ ಗುಂಡಿಗಳನ್ನು ಹಾಕಲು ಮನೆಗಳನ್ನು ಮಾಡುವಾಗ ಈ ಹೊಲಿಗೆ ಹಾಕುವದರಿಂದ, ಗುಂಡೀಮನೆ ಹೊಲಿಗೆಯೆಂದು ಹೆಸರು ಬಂದಿದೆ.

ಮನೆಗಾಗಿ ಬಟ್ಟೆ ಕತ್ತರಿಸಿದ ಸ್ಥಳದಲ್ಲಿ, ಬಟ್ಟೆಯು ಗುಂಜು ಕಾಣದಂತೆ, ಸುತ್ತಲೂ ಒಂದು ಗೋಪಿನಂತಹ ಹೊಲಿಗೆ ಬಂದು, ಹರಿದ ಬಟ್ಟೆಯನು ಗಟ್ಟಿಮಾಡುತ್ತದೆ. ಅಲ್ಲದೆ ಬಟ್ಟೆ ಮುಂದೆ ಜಗ್ಗಲ್ಪಟ್ಟು ಹರಿಯುವದಿಲ್ಲ.



ಈ ಹೊಲಿಗೆ ಕಂಬಳಿಯ ಹೊಲಿಗೆಯ ಹಾಗೆ ಕಾಣಿಸಿದರೂ, ಹಾಕುವದು ಸ್ವಲ್ಪ ಬೇರೆ. ತೀರ ಸಮೀಪ, ಒಂದಕ್ಕೊಂದು ಅಂಟಿಕೊಂಡಂತೆ ಹಾಕಿ ಮೇಲಿನ ಗೋಪನ್ನು ಗಟ್ಟಿ ಮಾಡಿಕೊಳ್ಳುತ್ತೇವೆ.

ಅಂದರೆ ಟೇಬಲ್ ಕ್ಲಾಥ್, ಪಡದೆ, ಪರಕರಗಳ ಅಂಚಿನಲ್ಲಿ ಬಟ್ಟೆಯನ್ನು ಬೇರೆ ಬೇರೆ ಆಕಾರದಲ್ಲಿ ಕತ್ತರಿಸಿದರೆ, ಗುಂಜು ಕಾಣದಂತೆ ಮಾಡಲು ಇದೇ ಹೊಲಿಗೆಯನ್ನು ಉಪಯೋಗಿಸುತ್ತೇವೆ. ಕಟವರ್ಕ, ರಿಚೆಲೋಗಳಲ್ಲಿ ಈ ಹೊಲಿಗೆ ಅವಶ್ಯವಾಗಿ ಬೇಕು. ಈ ಹೊಲಿಗೆಯಲ್ಲಿ, ಎಲ್ಲ ಎಳೆ (ಗೋಪು) ಗಳ ಉದ್ದ ಅಷ್ಟೇ ಇದ್ದರೆ ಅಂದವಾಗಿ ಕಾಣುವದು. ಡಿಝಾಯಿನು ವರ್ತುಲದಲ್ಲಿದ್ದಾಗ, ಈ ಉದ್ದವನ್ನೂ ಹೆಚ್ಚು ಕಡಿಮೆ ಮಾಡಿಕೊಳ್ಳಬೇಕಾಗುತ್ತದೆ.

ಅಂಚು ಇನ್ನೂ ಹೆಚ್ಚು ಗಟ್ಟಿಯಾಗಬೇಕಾಗಿದ್ದರೆ, ಮೇಲೆ ರೇಶಿಮೆಯನ್ನು ಇನ್ನೊಂದು ಸಲ (ಅಂದರೆ ಸೂಜಿಗೆ ಎರಡು ಸಲ ಸುತ್ತಿ) ತೆಗೆದುಕೊಳ್ಳಬಹುದು. ಇದಕ್ಕೆ ಸುತ್ತಿದ ಗುಂಡೀಮನೆ ಹೊಲಿಗೆ ( ಟ್ವಿಸ್ಟೆಡ್ ಬಟನ್ ಹೋಲ್ ) ಎನ್ನುವರು. ಹೂ, ಎಲೆಗಳ ಬಾಹ್ಯ ರೇಷೆಗಳನ್ನೂ ಇದರಿಂದ ತುಂಬಬಹುದು.

ಇದು ಹೊಲಿಗೆ ಮತ್ತು ಶೋಭೆಗಳೆರಡರ ದೃಷ್ಟಿಯಿಂದಲೂ ಪೂರ್ಣ ವಾದುದು.

## (೧೦) ಎಳೆತೆಗೆದ ಟಬ್ಬಿ (ಗಂಟುಹಾಕುವ ಹೊಲಿಗೆ)

ಡಿಝೈಾಯಿನ್ ಇಲ್ಲದ ಪ್ಲೋಪಿನ್ ಬಟ್ಟೆಯ ಮೇಲಿನ ಕೆಲಭಾಗ ದಲ್ಲಿಯ ಎಳೆಗಳನ್ನು ತೆಗೆದು, ಅಲ್ಲಿ ಬೇರೆ ಬೇರೆ ಬಗೆಯ ಡಿಝೈಾಯಿನು ಗಳನ್ನು ಮಾಡಬಹುದು. ಸ್ವಲ್ಪ ಹುರುಬರಕಾದ ಬಟ್ಟೆಯ ಮೇಲಲ್ಲದೆ,



ಸಿಲ್ಕು, ಆರ್ಗಂಡಿಯಂತಹ ಬಟ್ಟೆಯಲ್ಲಿ ಎಳೆಗಳನ್ನು ತೆಗೆಯುವದು ಸಾಧ್ಯ ವಿಲ್ಲ. ಅರ್ಧ, ಒಂದು, ಎರಡು ಇಂಚುಗಳ ಅಗಲ ಬಟ್ಟೆಯ ಎಳೆಗಳನ್ನು ತೆಗೆದು, ಬಳಿಕ ಕೆಳಗಿನ ಮೇಲಿನ ಬದಿಗಳೆರಡನ್ನೂ ಬಲದಿಂದ ಎಡಕ್ಕೆ ಹೊಲಿಗೆ ಹಾಕಿ, ಗಟ್ಟಿಮಾಡಿಕೊಳ್ಳಬೇಕು. ಇದಕ್ಕೆ ೩-೪-೫ ಎಳೆಗಳನ್ನು ಕೂಡಿಸಿ, ಬಟ್ಟೆಯ ಎರಡೂ ಅಂಚಿನಲ್ಲಿ ದುಂಡುಹಾಕಿ, ಆ ಎಳೆಗಳ ಕಂಬ ಗಳನ್ನು ಮಾಡಿಕೊಳ್ಳಬೇಕು. ಬರೀ ಇಷ್ಟೇ ಮಾಡಿದರೂ ಬಟ್ಟೆಗೆ ಒಂದು ಬಗೆಯ ಶೋಭೆ ಬರುತ್ತದೆ.

ಕರವಸ್ತ್ರದ ನಾಲ್ಕೂ ಮಗ್ಗುಲಿಗೆ, ಟೇಬಲ್‌ಕ್ಲಾಥಿನ ಮೇಲೆ ಪರಕರ, ಫ್ರಾಕುಗಳ ಅಂಚುಗಳ ಮೇಲೆ ಹೀಗೆ ಎಳೆ ತೆಗೆದು ಗಂಟು ಹಾಕಬಹುದು. ಎಳೆ ತೆಗೆದು ಮಾಡುವ ಎಲ್ಲ ತರಹದ ಕಸೂತಿಗೂ ಗಂಟು ಹಾಕಿ ಕಂಬ ಗಳನ್ನು ಮಾಡಿಕೊಳ್ಳುವದು ಮೊದಲನೆಯ ಕೆಲಸ. ಈ ಗಂಟು ಹಾಕುವ ದನ್ನು ಬಣ್ಣದ ರೇಶಿಮೆಯಿಂದ ಮಾಡಿದರೆ, ಹೊಲಿಗೆ ಇನ್ನೂ ಚೆಂದವಾಗಿ ಕಾಣುವದು.

ಎರಡೂ ಬದಿಯ ಎಳೆಗಳನ್ನು ತೆಗೆದುಬಿಟ್ಟು ನಡುವಿನ ಸ್ಥಳದಲ್ಲಿ ಬಣ್ಣದ ರೇಶಿಮೆಯಿಂದ ಹೆಣೆದುಕೊಂಡು ಕೂಡ ಡಿಝಾಯಿನ್ ತೆಗೆಯಬಹುದು.

**(೧೧) ಗಂಟಿನ ಹೊಲಿಗೆ** ( ಫ್ರೆಂಚ ನಾಟ್ )

ಇದು ಉದ್ದಕ್ಕೂ ಹಾಕುವ ಹೊಲಿಗೆಯಲ್ಲ. ಒಂದು ಗಂಟಿಗೂ ಇನ್ನೊಂದಕ್ಕೂ ಸಂಬಂಧವಿರುವದಿಲ್ಲ. ಇಂತಹ ಸಂಬಂಧವಿಲ್ಲದ ಗಂಟುಗಳ ಸಾಲುಗಳನ್ನು **ಬೇಕಾದರೆ ಹಾಕಬಹುದು.**



ಸೂಜಿಯನ್ನು ಬಟ್ಟೆಯಲ್ಲಿ ಚುಚ್ಚಿ ಮೇಲೆತ್ತಿದಲ್ಲಿ, ರೇಶಿಮೆಯ ಮೂರು ನಾಲ್ಕು ಸುತ್ತುಗಳನ್ನು ಹಾಕಬೇಕು. ಈ ಸುತ್ತುಗಳನ್ನು ಎಡಗೈಯಿಂದ ಹಾಗೇ ಹಿಡಿದು ಸೂಜಿಯನ್ನು ಹೊರಗೆಳೆಯಬೇಕು. ಬಳಿಕ ಅದರ ಹತ್ತಿರವೇ ಸೂಜಿಯನ್ನು ಕೆಳಗೆ ಚುಚ್ಚಿ ಆ ಸುತ್ತುಗಳನ್ನು ಗಟ್ಟಿಯಾಗಿ ಕೂಡಿಸಬೇಕು. ಮತ್ತೆ ಮುಂದಿನ ಗಂಟನ್ನು ಬೇರೆ ಕಡೆ ಚುಚ್ಚಿ, ಹಾಕಬೇಕು.

ಈ ಗಂಟಿನ ಹೊಲಿಗೆಯಿಂದ, ಇನ್ನೂ ಬೇರೆ ಹೊಲಿಗೆಗಳು ಹುಟ್ಟುವವು. ತೋಳಿನಮೇಲೆ, ಅಂಚಿಗೆ, ದೇಟಿನಗುಂಟ, ಈ ಗಂಟುಗಳನ್ನು ಹಾಕಿದರೆ, ಅಂದವಾಗಿ ಕಾಣುತ್ತದೆ. ಹೂವಿನೊಳಗಿನ ಪರಾಗಗಳನ್ನು ತುಂಬಲು ಈ ಗಂಟುಗಳನ್ನೇ ಹಾಕುವರು. ಎಷ್ಟು ದಟ್ಟವಾಗಿ ತುಂಬಿದರೆ ಅಷ್ಟು ಅಂದವಾಗಿ ಕಾಣುತ್ತದೆ. ಎಲೆ ಹೂಗಳ ಒಳಭಾಗವನ್ನು ತುಂಬಲೂ ಆಯಾ ಬಣ್ಣಗಳ ರೇಶಿಮೆಯಿಂದ, ಈ ಗಂಟಿನ ಹೊಲಿಗೆಯನ್ನು ಹಾಕಿದರೆ, ಹೂ ಎಲೆಗಳು ಎದ್ದು ಕಾಣುವವು.

**(೧೨) ಬುಲಿಯನ್ ಹೊಲಿಗೆ**

ಎಲೆ, ಹೂಗಳನ್ನು ತುಂಬಲು, ಶೋಭೆಗಾಗಿ ಹಾಕಲು ಉಪಯೋಗಿಸುವ ಹೊಲಿಗೆಗಳಲ್ಲಿ ಇದೂ ಒಂದು. ಇದನ್ನು ಹಾಕುವದು ಫ್ರೆಂಚ ನಾಟ್

ಹಾಕಿದಂತೆಯೇ ! ಫ್ರೆಂಚ್ ನಾಟನ್ನು ಉದ್ದವಾಗಿ ಬೆಳೆಸಿದರೆ, ಅದೇ ಬುಲಿಯನ್ ಸ್ಟಿಚ್‌ದಲ್ಲಿ ರೂಪಾಂತರಿತವಾಗುತ್ತದೆ. ಈ ಸ್ಟಿಚ್ಚುಗಳ ಉದ್ದಳತೆ ಮಾತ್ರ ಒಂದೇ ಸಮನಾಗಿರಬೇಕು.

ಸೂಜಿಯನ್ನು ಬಟ್ಟೆಯಲ್ಲಿ ಮುಂದುಗಡೆ ಚುಚ್ಚಿಕೊಂಡು, ರೇಶಿಮೆಯಿಂದ ಸೂಜಿಗೆ ಕಡಿಮೆಯೆಂದರೆ ೫-೬ ಸುತ್ತುಗಳನ್ನಾದರೂ ಹಾಕಬೇಕು. ಈ ಸುತ್ತುಗಳನ್ನು ಎಡಗೈಯ್ಯಿಂದ ಹಿಡಿದು ಸೂಜಿಯನ್ನು ಆ ಸುತ್ತಿನೊಳಗಿಂದ ಹೊರಗೆಳೆದು, ಆ ಸುತ್ತುಗಳನ್ನು ಹಿಗ್ಗಿಸಿ, ಮುಂದೆ ಸರಿಸಿ, ಪಕಳೆಯ ಆಕಾರದಂತೆ ಹೊರಳಿಸಿಟ್ಟು, ಸೂಜಿಯನ್ನು ಬಟ್ಟೆಯಲ್ಲಿ ಆ ಪಕಳೆಯ ಪಕ್ಕದಲ್ಲಿಯೇ ಚುಚ್ಚಿ ಗಟ್ಟಿಮಾಡಿಕೊಳ್ಳಬೇಕು. ಇದರಿಂದ ಮಧ್ಯಬಿಂದುವಿನಿಂದ ಇನ್ನುಳಿದ ಪಕಳೆಗಳನ್ನೂ ಹಾಕಿ ಪೂರ್ತಿ ಮಾಡಬಹುದು. ಸಣ್ಣ ಸಣ್ಣ ಎಲೆಗಳಿಗೂ, ಹಸಿರು ರೇಶಿಮೆಯಿಂದ, ಈ ಬಗೆಯ ಹೊಲಿಗೆಯನ್ನು ಹಾಕಬಹುದು.

ಪೋಪ್ಲಿನ್, ಸಿಲ್ಕ, ಆರ್ಗಂಡಿ ಯಾವುದೇ ಬಟ್ಟೆಯ ಮೇಲೆ, ಸಣ್ಣ ಸಣ್ಣ ಎಲೆ ಹೂಗಳುಳ್ಳ ಡಿಝಾಯಿನಿಗೆ ಈ ಹೊಲಿಗೆ ಹಾಕಿದರೆ, ಕಸೂತಿಗೆ ಒಂದು ಬಗೆಯ ಹೊಳಪು ಬರುತ್ತದೆ.

## (೧೩) ಎಲೆ ಹೊಲಿಗೆ

ಸರಪಳಿ ಹೊಲಿಗೆಯ ಪ್ರಕಾರದ್ದಿದು. ಒಂದೊಂದೇ ಸರಪಳಿಯನ್ನು ಬೇರೆ ಬೇರೆಯಾಗಿ ದೇಟಿಗೆ ಹೊಂದಿಕೊಂಡು ಹಾಕಿದಂತೆ ಕಾಣುತ್ತದೆ. ಒಂದೇ ಸಮನಾಗಿ ಈ ಹೊಲಿಗೆಯನ್ನು ಸೀರೆಯ ಅಂಚಿಗೆ ಟೇಬಲ್ ಕ್ಲಾಥಿನ ನಾಲ್ಕೂ ಬದಿಗೆ ಹಾಕಿದರೆ, ಲೇಸು ಹಚ್ಚಿದಂತೆ ಶೋಭಿಸುವದು. ಈ ಹೊಲಿಗೆಯನ್ನು ಹಾಕುವದೂ ಬಹಳ ಸುಲಭ. ಸೂಜಿಗೆ ಒಂದು ಸುತ್ತು ದಾರವನ್ನು ಸಡಿಲಾಗಿ ತೆಗೆದುಕೊಂಡು ಗಟ್ಟಿಯಾಗಿರಿಸಿದರೆ ಆಯಿತು.



ಇಂತಹವೇ ಹೂ ಎಲೆಗಳನ್ನು ಹಾಕಿದರೆ, ಅವು ಗಾಳಿಯಲ್ಲಿ ಅತ್ತಿತ್ತ ಹರಡಿದಂತೆ ಅಂದವಾಗಿ ಕಾಣಿಸುವವು.

## (೧೪) ಹೂವಿನಹೊಲಿಗೆ



ಎಲೆ ಹೊಲಿಗೆ, ಹೂವಿನ ಹೊಲಿಗೆಗಳಲ್ಲಿ ವಿಶೇಷ ಅಂತರವಿಲ್ಲ. ಹೂವಿನ ಹೊಲಿಗೆಯಲ್ಲಿ ಪಕಳೆಗಳ ಹೊರಬದಿಗೆ ಗಟ್ಟಿ ಮಾಡಿಕೊಳ್ಳು ತ್ತೇವೆ. ಆದರೆ ಇದೂ ಒಂಟಿ ಸರಪಳಿಯನ್ನು ಬಿಡಿ ಬಿಡಿಯಾಗಿ ಹಾಕಿದಂತೆಯೇ! ಇದನ್ನಾ ದರೂ ಸೂಜಿಯ ಸುತ್ತು ಒಂದು ಸಾರಿ ರೇಶಿಮೆ ಯನ್ನು ಸಡಿಲಾಗಿ ತೆಗೆದುಕೊಂಡು, ಗಟ್ಟಿ ಮಾಡಿದರೆ ಆಯಿತು. ಸಣ್ಣ ಸಣ್ಣ ಎಲೆ ಹೂಗಳಲ್ಲಿ ಬರೀ ಬಾಹ್ಯರೇಷೆಯ ನ್ನಷ್ಟೇ ತುಂಬಿಬಿಟ್ಟರೆ ಅಂದವಾಗಿ ಕಾಣುವದು. ಅಂತಹ ಡಿಝಾಯಿನು ಗಳಲ್ಲಿ, ರೇಖಾಚಿತ್ರಗಳನ್ನು ತುಂಬುವಲ್ಲಿ, ಈ ಹೊಲಿಗೆ ಬಹಳ ಉಪಯುಕ್ತ ವಾದುದು.

ಇದಕ್ಕೆ ಇಂಗ್ಲೀಷಿನಲ್ಲಿ, " ಲೇಝಿ ಡಾಯಿಝಿ," ಎಂದು ಹೇಳುವರು.

## (೧೫) ಸಾಟಿನ್ ಹೊಲಿಗೆ

ಸಾಟಿನ್ ಹೊಲಿಗೆ ಸಾಟಿನ್ ಬಟ್ಟೆಯಂತೆಯೇ ಕಾಣುವದು. ಸಾಟಿನ್ ಬಟ್ಟೆಯಲ್ಲಿ ಮೇಲೆ ರೇಶಿಮೆ ಎಳೆಗಳನ್ನು ನೇಯ್ದು, ಸಮಪಾತಳಿಯಲ್ಲಿ ಕತ್ತ ರಿಸಿ ಬಿಡುವದರಿಂದ ಮೇಲ್ಭಾಗಕ್ಕೆ ಮಾತ್ರ ಅಷ್ಟೊಂದು ನಯ ಹೊಳಪು



ಕಾಣುತ್ತದೆ. ಸಾಟಿನ್ ಹೊಲಿಗೆಯೂ ರೇಶಿಮೆ ಎಳೆಯಿಂದ ನೇಯ್ದಂತೆ ಕಾಣುವದು.

ಈ ಹೊಲಿಗೆ ಹಾಕಲು ರೇಶಿಮೆ ಎಳೆಯನ್ನು ಪೋಣಿಸಿ ಎಲೆ, ಹೂವಿನ ಒಂದು ಬದಿಯ ಅಂಚಿನ ತುದಿಯಿಂದ ಪ್ರಾರಂಭಿಸಿ ಇನ್ನೊಂದು ಬದಿಯ ಅಂಚಿಗೆ ಎಳೆಗಳನ್ನು ಹಾಯಿಸಬೇಕು. ಎಳೆಗಳು ಒಂದಕ್ಕೊಂದು ಅಂಟಿಕೊಂಡಿದ್ದು, ಮೊದಲನೆಯ ಎಳೆಗೆ ಉಳಿದ ಎಳೆಗಳು ಸಮಾಂತರ ರೇಷೆಯಲ್ಲಿರಬೇಕು.

ಯಾವುದೇ ಡಿಝಾಯಿನಿನಲ್ಲಿ, ಸಾಟಿನ್ ಸ್ಟಿಚ್ ತುಂಬುವದಾದರೆ ಎಳೆಗಳು ಬಹಳ ಉದ್ದವಾಗಿ ಬರದಂತೆ ನೋಡಿಕೊಳ್ಳಬೇಕು. ಇಲ್ಲದಿದ್ದರೆ ನಡುವೆ ಸಡಿಲಾಗಿ ಹೆಣೆದ ಕಸೂತಿ ಅಂದವಾಗಿ ಕಾಣಿಸದು. ಹೆಣಿಕೆ ಬಿಗಿಯಾಗಿ ದಟ್ಟವಾಗಿ ಬರಬೇಕಾದ್ದರಿಂದ ಎಳೆಗಳು ಸಣ್ಣವಾಗಿರಬೇಕು. ತುಂಬುವ ಆಕೃತಿ ದೊಡ್ಡದಿದ್ದರೆ, ಸಾಟಿನ್ ಹೊಲಿಗೆಯನ್ನೇ ತುಂಬುವದಾದರೆ ಅದರಲ್ಲಿ ಭಾಗಗಳನ್ನು ಮಾಡಿ ತುಂಬಬಹುದು, ಇಲ್ಲವೆ ಲಾಂಗ ಆ್ಯಂಡ ಶಾರ್ಟ ಸ್ಟಿಚ್‌ದಿಂದ ತುಂಬಬಹುದು.

ಈ ಹೊಲಿಗೆಯಲ್ಲಿ ಎಳೆಗಳು ಒಂದರ ಸಮೀಪ ಒಂದು ಬಂದರೂ ಒಂದರ ಮೇಲೊಂದು ಬರಬಾರದು. ಇಲ್ಲಿ ಮೇಲೆ, ಕೆಳಗೆ ಅಷ್ಟೇ ರೇಶಿಮೆ ಹತ್ತುವದರಿಂದ, ಕ್ರಾಸ್ ಸ್ಟಿಚ್ಚಿಗಿಂತ ರೇಶಿಮೆ ಹೆಚ್ಚು ಹತ್ತುತ್ತದೆ. ಆದರೂ ಸಾಟಿನ್ ಹೊಲಿಗೆಯ ನಯ ಹೆಚ್ಚು.

ಅದೇ ಬಣ್ಣದ, ಛಾಯೆ ಬರುವಂತಹ ವಿವಿಧ ಬಣ್ಣಗಳು ಈ ಸಾಟಿನ್ ಹೆಣಿಕೆಯಲ್ಲಿ ಸೇರಿದರೆ, ಕಸೂತಿಯನ್ನು ಕುಂಚದಿಂದ ಚಿತ್ರಿಸಿದಂತೆ ಕಾಣುವದು. ಉದಾಹರಣೆಗೆ ಒಂದು ಎಲೆಯಲ್ಲಿ ಬಿಳೀಹಸಿರು, ತಿಳಿಹಸಿರು, ಹಸಿರು, ದಟ್ಟಹಸಿರು ಹೀಗೆ ನಾಲ್ಕು ಬಣ್ಣಗಳು ಬರಬಹುದು. ಈ ನಾಲ್ಕು ಬಣ್ಣಗಳನ್ನೂ ನಾಲ್ಕು ಭಾಗ ಮಾಡಿಯೇ ಹಾಕಬೇಕಾಗುತ್ತದೆ.

ಎಲೆ, ಹೂ, ಪಕ್ಷಿಗಳ ಚಿತ್ರ ತುಂಬುವಾಗ ಮೊದಲು ಉದ್ದ ಎಳೆಗಳನ್ನು ಹಾಕಿ (ಪ್ಯಾಡಿಂಗ ಮಾಡಿ) ಮೇಲೆ ಸಾಟಿನ್ ಹೊಲಿಗೆಯಿಂದ ತುಂಬಿದರೆ, ಕಸೂತಿ ಉಬ್ಬಿ ಬಂದು ಅಂದವಾಗಿ ಕಾಣುವದು. ಪ್ಯಾಡಿಂಗಿನ ಎಳೆಗಳನ್ನು ಸಾಟಿನ್ ಹೊಲಿಗೆ ಬರುವ ವಿರುದ್ಧ ದಿಕ್ಕಿನಲ್ಲಿ ಹಾಕಬೇಕು.

## (೧೬) (ಅ) ಜೇನು ಹುಟ್ಟಿನ ಹೊಲಿಗೆ (ಹನಿಕೋಂಬ್)
## (ಬ) ಸ್ಮೋಕಿಂಗ

ಸ್ಮೋಕಿಂಗ ಮತ್ತು ಜೇನುಹುಟ್ಟಿನ ಹೊಲಿಗೆ ಒಂದೇ ಜಾತಿಯವು. ಇವುಗಳ ಇತಿಹಾಸ ೧೪ನೇಯ ಶತಮಾನದ ವರೆಗೂ ಹಿಂದೆ ಹೋಗುತ್ತದಂತೆ.



ಆದರೆ ಅಂದಿನ ಸ್ಮೋಕಿಂಗಿಗೂ ಇಂದಿನದಕ್ಕೂ ತುಂಬಾ ವ್ಯತ್ಯಾಸವಿದೆ ಇಂದಿನ ಉದ್ದೇಶ ಶೋಭೆ, ಅಂದಿನದು ಉಪಯುಕ್ತತೆ.

ಸ್ಮೋಕಿಂಗ ಅಥವಾ ಹನಿಕೋಂಬ್ ಮಾಡಬೇಕಾದ ಬಟ್ಟೆಯ ಭಾಗ ವನ್ನು, ತಯಾರಾದ ಮೇಲೆ ಬೇಕಾಗುವ ಆ ಭಾಗಕ್ಕಿಂತ ಮೂರುಪಟ್ಟು ಹೆಚ್ಚು ತೆಗೆದುಕೊಳ್ಳಬೇಕು. ಆ ಮೇಲೆ ಬಟ್ಟೆಯಲ್ಲಿ ಉದ್ದಕ್ಕೂ ೬–೮ ಸಮಾಂತರ ಗೆರೆಗಳನ್ನು ಹಾಕಿ, ಅಷ್ಟಷ್ಟೇ ಅಂತರದಲ್ಲಿ ಅವುಗಳ ಮೇಲೆ ಚಿಕ್ಕೆಗಳನ್ನು ಹಾಕಿ, ಉದ್ದದಾರವನ್ನು ತೆಗೆದುಕೊಂಡು, ಆ ಚಿಕ್ಕೆಗಳಿದ್ದಲ್ಲಿ ಹೊಲಿಗೆ ಹಾಕುತ್ತ ಗೆರೆಗುಂಟ ಎಳೆಗಳನ್ನು ಹಾಕಬೇಕು. ಈ ಎಳೆಗಳನ್ನು ಜಗ್ಗಿ ಸಮಾನಾಂತರದ ನಿರಿಗೆಗಳನ್ನು ಮಾಡಲು ಮುಂದೆ ಈ ಆರೇಳು ಗೆರೆ ಗಳಿಗೂ ದಾರವನ್ನು ಬಿಟ್ಟಿರಬೇಕು. ನಿರಿಗೆಗಳನ್ನು, ಸರಿಯಾಗಿ ದಾರವನ್ನು ಜಗ್ಗಿ ಮಾಡಬೇಕು. ಇದು ಸ್ಮೋಕಿಂಗಿನ ಮೊದಲ ಸಿದ್ಧತೆ.

ಅಥವಾ ಬಟ್ಟೆಯಲ್ಲಿ ಅಷ್ಟಷ್ಟೇ ಬಟ್ಟೆಯನ್ನು ಹಿಡಿದು, ಒಂದು ಎಡಕ್ಕೆ, ಒಂದು ಬಲಕ್ಕೆ ಹೀಗೆ ವಿರುದ್ಧ ದಿಕ್ಕಿನಲ್ಲಿ ನಿರಿಗೆಗಳನ್ನು ಹಿಡಿಯುತ್ತ

ಹೋಗಬೇಕು. ಇದರಿಂದ ಸ್ಮೋಕಿಂಗ, ಹನಿಕೋಂಬ್ ಎರಡೂ ಅಂದ ವಾಗುವವು. ಇವುಗಳ ಮೇಲೆ ಮೊದಲಿಗೆ ಎರಡು ಸಾಲು ದೇಟುಹೊಲಿಗೆ, ಅಥವಾ ಸರಪಳಿಯನ್ನು ಹಾಕಿ ನಿರಿಗೆಗಳನ್ನು ಗಟ್ಟಿಮಾಡಿಕೊಳ್ಳಬೇಕು. ಬಳಿಕ ಸ್ಮೋಕಿಂಗ ಮಾಡಲು ದೇಟುಹೊಲಿಗೆಯಂತೆ ನಿರಿಗೆಗಳ ಮೇಲೆ ಬಿಗಿಯಾಗಿ ಹಾಕುತ್ತ ಹೋಗಬೇಕು. ಈ ಹೊಲಿಗೆ ತೆರೆಯಂತೆ ವಕ್ರ ವಾಗಿಯೂ ಬರಬಹುದು. ಆದರೆ ಇದರ ಮುಂದೆ ಬರುವ ಇನ್ನುಳಿದ ಆರೇಳು ರೇಷೆಗಳು ಈ ಮೊದಲಿನ ಹೊಲಿಗೆಯ ಸಾಲಿಗೆ ಸಮಾಂತರವಾಗಿರ ಬೇಕು. ಸ್ಮೋಕಿಂಗದಲ್ಲಿ ದಾರ ಮೇಲೆಯೇ ಬರುವದು.

ಹನಿಕೋಂನಲ್ಲಿ ಭೂಮಿತಿಯ ಪ್ರಮಾಣಬದ್ಧ ಪದ್ಧತಿ ಸ್ಪಷ್ಟವಾಗಿದೆ. ಎರಡು ವಿರುದ್ಧ ನಿರಿಗೆಗಳ ತುದಿಗಳನ್ನು ಕೂಡಿಸಿ ಹೊಲಿಗೆ ಹಾಕಬೇಕು. ಇಲ್ಲಿ ದಾರ ಕೆಳಗೆ ಹೋಗಿ ಮತ್ತೆ ಮುಂದಿನ ವಿರುದ್ಧ ನಿರಿಗೆಗಳನ್ನು ಹೊಲಿ ಯಲು ಮೇಲೆ ಬರುತ್ತದೆ. ಎರಡನೆಯ ಸಾಲಿನಲ್ಲಿ ಮೊದಲನೆಯ ಸಾಲಿ ನಂತೆಯೇ ವಿರುದ್ಧ ನಿರಿಗೆಗಳನ್ನು ಮತ್ತೆ ಹಿಡಿಯಬೇಕು. ಅಂದರೆ ಮೇಲಿನ ಎರಡು ಹೊಲಿಗೆಗಳ ಮಧ್ಯೆ ಕೆಳಗೆ ಒಂದು ಹೊಲಿಗೆ ಬರುವವು. ಹೀಗಾಗಿ ಜೇನುಹುಟ್ಟಿನಂತಹ ಚೌಕುಮನೆಗಳು ಸಿದ್ಧವಾಗುವವು. ಕ್ರಾಸ್‌ಸ್ಟಿಚ್, ರಿಕ್ಕೆಹೊಲಿಗೆ-ಬೇಕಾದ್ದನ್ನೂ ಇಲ್ಲಿ ಹಾಕಬಹುದು. ಆಗ ಇದೇ ಹೊಲಿಗೆ ಬೇರೆ ಬೇರೆಯಾದಂತೆ ಕಂಡು ಬರುವದು.

ಈ ಹೊಲಿಗೆಗಳನ್ನು ಜಂಪರು, ಫ್ರಾಕುಗಳ ತೋಳು, ಕೊರಳು, ನಡ ಗಳಲ್ಲಿ ಹೆಚ್ಚಾಗಿ ಮಾಡುವರು. ಇದರಿಂದ ಉಡುಪಿಗೆ ಒಂದು ಪ್ರಕಾರದ ಅಪೂರ್ವ ಶೋಭೆಯುಂಟಾಗುವದು.

## (೧೬) ರೋಪ್‌ಸ್ಟಿಚ್ (ಹಗ್ಗದ ಹೊಲಿಗೆ)

ಈ ಹೊಲಿಗೆಯಾದರೂ ಸಾಟಿನ್ ಹೊಲಿಗೆಯಂತೆಯೇ, ಆದರೆ ಒಂದು ತುದಿಗೆ, ಸೂಜಿಯ ಸುತ್ತು ದಾರವನ್ನು ತೆಗೆದುಕೊಂಡು ಹಾಕಬೇಕು. ಅಂದರೆ ಸ್ವಲ್ಪ ಎತ್ತರವಾಗಿ ಕಾಣಿಸುವದು. ಈ ಹೊಲಿಗೆಯಿಂದ ಶೇಡಿಂಗ ರೀತಿ ಯ ಕಸೂತಿಯನ್ನು ಹಾಕಿದರೆ, ಎಲೆ ಹೂಗಳು ತೀರ ಸ್ವಾಭಾವಿಕವಾಗಿ ಕಾಣುವವು.

## (೧೭) ಜೇಡದ ಬಲೆ ಹೊಲಿಗೆ (ಸ್ಪೈಡರ ಸ್ಟಿಚ್)

ಹೆಣೆದ ಮೇಲೆ ಜೇಡನ ಬಲೆಯಂತೆ ಕಾಣಿಸುವದರಿಂದ ಈ ಹೊಲಿಗೆಗೆ ಹಾಗೆ ಹೆಸರು ಬಂದಿಗೆ. ಈ ಹೊಲಿಗೆಯನ್ನು ಹಾಕುವದು ಸುಲಭ; ನೋಡಲೂ ಇದು ಬಹಳ ಅಂದವಾಗಿರುತ್ತದೆ.



ಒಂದು ಚೌಕೋನದಲ್ಲಿ ಅಥವಾ ವರ್ತುಲದಲ್ಲಿ ಮುಖ್ಯ ಬಿಂದುವಿನಲ್ಲಿ ಹಾಯ್ದು ಕಾಟಕೋನವಾಗಿ ಎರಡು ಗೆರೆಗಳು ಬರುವಂತೆ ದಾರವನ್ನು—ಗಟ್ಟಿಯಾದ ರೇಶಿಮೆ—ಕಟ್ಟಿಕೊಳ್ಳಬೇಕು. ಮಧ್ಯಬಿಂದುವಿನಲ್ಲಿ ಆ ಎಳೆಗಳನ್ನು ಗಟ್ಟಿಯಾಗಿರಿಸಿದ ಮೇಲೆ ಮೂಲೆಯಿಂದ ಮೂಲೆಗೆ ಮತ್ತೆರಡು ಎಳೆಗಳನ್ನು ಹಾಕಿ ಅವನ್ನೂ ಗಟ್ಟಿಮಾಡಿಕೊಳ್ಳಬೇಕು. ಇವು ಎಂಟು, ಬಲೆಯ ಕಾಲುಗಳು. ಇನ್ನು ಮಧ್ಯದಿಂದ ಪ್ರಾರಂಭಿಸಿ ಅಂಚಿನ ಹೊಲಿಗೆ ಹಾಕಿದಂತೆ, ಪ್ರತಿಯೊಂದು ಕಾಲನ್ನೂ ಸುತ್ತಿಕೊಂಡು ದುಂಡಗೂ ಹೊಲಿಗೆಗಳನ್ನು ಹಾಕುತ್ತ ಹೋಗಬೇಕು. ದಟ್ಟವಾದ ಬಣ್ಣದಿಂದ ನಡುವೆ ಒಂದರ್ಧ ಇಂಚಿನವರಿಗೆ ತುಂಬಿಬಿಟ್ಟರೂ ಈ ಹೊಲಿಗೆಯಿಂದ ಕಸೂತಿ ಸುಂದರವಾಗಿ ಕಾಣುವದು. ಇನ್ನು ಈ ಹೊಲಿಗೆಯಿಂದ ಹೂಗಳನ್ನು ತುಂಬುವದಾದರೆ, ಪೂರ್ಣ ತುಂಬಬೇಕಾಗುವದು. ಹೂವಿನಲ್ಲಿ, ಬರುವ ರೇಶಿಮೆಯಿಂದ ಸುತ್ತಿದ ಕಾಲುಗಳು ಉಬ್ಬಿ ಬಂದು, ಹೂವಿನ ಪಕಳೆಗಳನ್ನು ಮಾಡುವವು. ಇಂತಹ ಹೂವಿನಲ್ಲಿ ಶೇಡಿಂಗ ಬಣ್ಣವನ್ನು ತುದಿಗೆ ಹಾಕಿ, ನಡುವೆ ದಟ್ಟವಾದ ಬಣ್ಣ ಹಾಕಿದರೆ ಹೂವು ಬಹಳ ನಯವಾಗಿ, ಚಿತ್ರಿಸಿದಂತೆ ಕಾಣುವದು.

ಜೇಡದ ಬಲೆಯು ಈ ಹೊಲಿಗೆ, ಎಳೆತೆಗೆದು ಮಾಡಿರುವ ಟೇಬಲ್ ಕ್ಲಾಥಿನ ಮೂಲೆಗಳಲ್ಲಿ, ಪಡದೆಗಳ ಮೂಲೆಯಲ್ಲಿ ಅಂದವಾಗಿ ಕಾಣುವದು. ಎಳೆ ತೆಗೆದುದರಿಂದ ಮೂಲೆಯಲ್ಲಿ ಎಡಬಲದ ಎಳೆಗಳೆಲ್ಲ ಹೋಗಿ ಬರಿದಾದ ಸ್ಥಳ ಉಳಿಯುವದು. ಅದನ್ನು ತುಂಬಲು ಇದೇ ಒಂದು ಸುಂದರವಾದ ಹೊಲಿಗೆ.

**ಲಾಂಗ ಆ್ಯಂಡ ಶಾರ್ಟ ಸ್ಟಿಚ್** (ಸಣ್ಣ ದೊಡ್ಡ ಎಳೆಗಳ ಹೊಲಿಗೆ)

ಈ ಹೊಲಿಗೆ ನೋಡಲು ಸಾಟಿನ್ ಹೊಲಿಗೆಯಂತೆಯೇ ಕಾಣುವದು. ಆದರೆ ಸಾಟಿನ್ ಹೊಲಿಗೆಗಿಂತ ಗಟ್ಟಿ. ಸಾಟಿನ್ ಹೊಲಿಗೆಯಲ್ಲಿ ನಡುವಿನ ಒಂದೆರಡು ಎಳೆಗಳು ದೊಡ್ಡವಾದರೆ, ಸಡಿಲಾಗಿಬಿಡುತ್ತವೆ. ಆದರೆ ಇದರಲ್ಲಿ ಎಂತಹ ದೊಡ್ಡ ಎಲೆ ಇದ್ದರೂ, ಹೂವಿನ ಪಕಳೆಯಿದ್ದರೂ, ಬಹಳ ಅಂದವಾಗಿ ತುಂಬಬಹುದು. ಇದರಲ್ಲಿ ಮೊದಲಿನ ಸಾಲೊಂದರಲ್ಲಿ ಸಣ್ಣ ದೊಡ್ಡ ಎಳೆಗಳು ಒಂದಕ್ಕೊಂದು ಹತ್ತಿಕೊಂಡು ಬರುವವು. ಮುಂದಿನ ಎಳೆಗಳೆಲ್ಲ ಸರಿಯಾಗಿಯೇ ಬರುವವು.



ಎಳೆಗಳನ್ನು ಹಾಯಿಸುವ ಎರಡು ಬದಿಗಳಲ್ಲಿ, ಒಂದು ಬದಿಯ ಎಳೆಗಳು ಒಂದೇ ಸಮವಾದ ಪಾತಳಿಯಲ್ಲಿರುವವು. ಇನ್ನೊಂದು ಬದಿಯ ಎಳೆಗಳು ಹಿರಿಕಿರಿದಾಗಿರುವವು. ಈ ಕಿರಿಯ ಎಳೆಗಳ ಮುಂದೆ ಸಮವಾದ ಎಳೆಗಳನ್ನು ಮತ್ತೆ ಹಾಕುತ್ತ ಹೋಗಬೇಕು. ಇದರಿಂದ ಕಸೂತಿಯ ಹೆಣಿಕೆ ಬಹಳ ಗಟ್ಟಿಯಾಗುವದು.

ಯಾವದೊಂದು ಎಲೆಯು ಬಾಗಿದ್ದರೆ, ಅಥವಾ ದೊಡ್ಡ ಹೂವೊಂದು ಅರ್ಧ ಅರಳಿದ್ದರೆ, ವಿಶಿಷ್ಟ ದಿಕ್ಕಿನಲ್ಲಿ ಈ ಲಾಂಗ್ ಆ್ಯಂಡ ಶಾರ್ಟ ಸ್ಟಿಚ್ ಹಾಕಿ, ಅದರಲ್ಲಿ ಮತ್ತೆ ಶೇಡಿಂಗ ರೇಶಿಮೆಯನ್ನುಪಯೋಗಿಸಿದರೆ, ಕಸೂತಿ ಬಹಳ ಅಂದವಾಗಿ ಕಾಣುವದು. ಎಲೆ, ಹೂಗಳು ಸ್ವಾಭಾವಿಕವಾಗಿ ಅರಳಿ

ದಂತೆ ಕಾಣಿಸುವವು. ಕೆಳಗೆ ಎಳೆಗಳಿಂದ ಪ್ಯಾಡಿಂಗ ಮಾಡಿಯೂ ಈ ಹೊಲಿಗೆಯನ್ನು ಹಾಕಬಹುದು.

**ಮೀನದ ಎಲುಬಿನ ಹೊಲಿಗೆ** (ಫಿಶ್ ಬೋನ ಸ್ಟಿಚ್)

ಮೂರು ಗೆರೆಗಳ ಆಧಾರದಿಂದ ಹಾಕಬಹುದಾದ ‘ ಫ್ಲಾಟ್ ಸ್ಟಿಚ್ ’ ಗಳ ಗುಂಪಿಗೇ ಇದೂ ಸೇರಿದೆ, ಹೆಣೆದ ಮೇಲೆ ನೋಡಲು ಇದು ಕಾಶ್ಮೀರ ಹೊಲಿಗೆಯಂತೆಯೇ ಕಾಣುತ್ತದೆ. ಆದರೆ ಕಾಶ್ಮೀರ ಹೊಲಿಗೆಯಲ್ಲಿ ನಡುವಿನ ಗೆರೆಯಮೇಲೆ ಸೂಜಿ ಚುಚ್ಚುವದೇ ಇಲ್ಲ. ಎರಡು ಬದಿಗಳಲ್ಲೂ ಕತ್ತರಿಯ ಹಾಗೆ ಎಳೆಗಳನ್ನು ಹಾಕುವದರಿಂದಲೇ ನಡುವೆ ಕತ್ತರಿ ಎಳೆಗಳು ಬರುತ್ತವೆ.



ಆದರೆ ಈ ಫಿಶ್ ಬೋನ್ ಸ್ಟಿಚ್ಚಿನಲ್ಲಿ ಒಂದು ಎಲೆಯ ಎರಡು ಭಾಗಗಳನ್ನೂ ಒಮ್ಮೆಲೇ ಹೆಣೆದುಕೊಳ್ಳಲು ಬರುತ್ತದೆ. ಮೊದಲು ಒಂದು ದಂಡೆಯಿಂದ ಪ್ರಾರಂಭಿಸಿ, ನಡುವಿನ ಗೆರೆಯ ಮೇಲೆ ಸೂಜಿಯನ್ನು ಚುಚ್ಚಿಕೊಳ್ಳಬೇಕು. ಆ ಮೇಲೆ ಎಡದ ದಂಡೆಗೆ ಎಳೆಯನ್ನು ಹೆಣೆದು ಮತ್ತೆ ಅಲ್ಲಿಂದ ನಡುವಿನ ಗೆರೆಯ ಮೇಲೆ (ಮೇಲಿನ ಹೊಲಿಗೆಯ ಕೆಳಗೆ), ಕೊಂಚ ಬಲಕ್ಕೆ ಚುಚ್ಚಿ ಕೊಂಡು, ಅಲ್ಲಿಂದ ಬಲದ ದಂಡೆಗೆ ಒಯ್ಯಬೇಕು. ಹೀಗೆ ಮಾಡುವದರಿಂದ ನಡುವೆ ಕತ್ತರಿಯಂತೆ ಗೆರೆ ಬಂದು ಸಿರವನ್ನು ತುಂಬಿದಂತೆ ಕಾಣುವದು. ಹೆಣಿಕೆಯೂ ಗಟ್ಟಿಯಾಗುವದು.

ಕಸೂತಿಯಲ್ಲಿ ಈ ಹೊಲಿಗೆಯಿಂದ ಎಲೆ, ಹೂವಿನಪಕಳಿಗಳನ್ನು ತುಂಬಬಹುದಾದರೆ, ಉಡುಪುಗಳನ್ನು ತಯಾರಿಸುವಲ್ಲಿಯೂ ಈ ಹೊಲಿಗೆಯ ಉಪಯೋಗವಾಗುತ್ತದೆ. ಬಟ್ಟೆಯ ಎರಡು ತುಂಡುಗಳನ್ನು ಜೋಡಿಸುವಾಗ, ಅವೆರಡರ ನಡುವಿನ ಬಟ್ಟೆ ಸ್ವಲ್ಪವೂ ಹೋಗದಂತೆ, ಈ ಹೊಲಿಗೆಯಿಂದ,

ಕೂಡಿಸಬಹುದು. ಕಸೂತಿ ಮತ್ತು ಹೊಲಿಗೆ-ಇವೆರಡರ ದೃಷ್ಟಿಯಿಂದಲೂ ತುಂಬಾ ಉಪಯುಕ್ತವಾದ ಹೊಲಿಗೆಗಳಲ್ಲಿ ಇದೂ ಒಂದು.

**ಸುತ್ತಿದ ಹೊಲಿಗೆ** (ಓವ್ಹರ ಕಾಸ್ಟ ಸ್ಟಿಚ್)

ಓವ್ಹರ ಕಾಸ್ಟ ಹೊಲಿಗೆ ಇದು ಕಾರ್ಡಿಂಗದ ಜಾತಿಯದೇ; ಅಥವಾ ವೀವ್ಹಿಂಗಕ್ಕೆ (ನೇಯ್ಗೆ ಹೊಲಿಗೆ) ಸಮೀಪಿಸಿದ್ದು ಎಂದು ಹೇಳಿದರೂ ನಡೆಯಬಹುದು. ಯಂತ್ರದಲ್ಲಿ ಹಾಕುವದೇ ಇದನ್ನು ಕೈಯಿಂದ ಹಾಕುವದು ಅಷ್ಟೇ. ಸಾವಧಾನವಾಗಿ ಲಕ್ಷ್ಯಪೂರ್ವಕವಾಗಿ ಹಾಕಿದರೆ ಯಂತ್ರದಲ್ಲಿಯ ಕಾರ್ಡಿಂಗಿಗಿಂತ ಇದು ನಯವಾಗಿ ಕಾಣುವದು. ಕಾರ್ಡಿಂಗನ್ನು ಹೇಗೆ ಚಿತ್ರದ ಬಾಹ್ಯ ರೇಷೆಗಳನ್ನು ತುಂಬಲು, ಕಸೂತಿಯ ಅಂಚನ್ನು ತುಂಬಲು, ಉಪಯೋಗಿಸುವರೋ ಹಾಗೆ ಇದನ್ನೂ ಉಪಯೋಗಿಸಬಹುದು. ಕೈ ಹೊಲಿಗೆಯಲ್ಲಿ ಇದೊಳ್ಳೇ ಎದ್ದು ಕಾಣುವ ಹೊಲಿಗೆ; ಕಸೂತಿಯಂತೆಯೂ ಅಂದದ ಹೊಲಿಗೆಯಂತೆಯೂ ಇದನ್ನು ಹಾಕಬಹುದು.



ಈ ಹೊಲಿಗೆಯಲ್ಲಿ ಎರಡು ವಿಧ; ಒಂದು ಸರಳ ಇನ್ನೊಂದು ಡೊಂಕ ಈ ಹೊಲಿಗೆಯನ್ನು ಎಡದಿಂದ ಬಲಕ್ಕೇ ಹಾಕುತ್ತಹೋಗುವರು. ಈ ಹೊಲಿಗೆಯನ್ನು ಹಾಕಬೇಕಾದ ಭಾಗದಲ್ಲಿ ಮೊದಲು ಒಂದು ಅಥವಾ ಎರಡು ಸಾಲು ಎಳೆಗಳನ್ನು ಹಾಕಿಕೊಳ್ಳಬೇಕು. ಆ ಮೇಲೆ ಇದರಗುಂಟ, ಸೂಜಿಯನ್ನು ಮೊದಲು ಮೇಲೆಯೇ ಚುಚ್ಚಿ ಅಲ್ಲಿಂದ ಕೆಳಗೆ ದಾರವನ್ನು ಸುತ್ತು ಹಾಕುವಂತೆ ತೆಗೆದುಕೊಂಡು ಮತ್ತೆ ಮೇಲೆ ತೆಗೆದುಕೊಳ್ಳಬೇಕು. ಹೀಗೆಯೇ ಸಮೀಪ ಸಮೀಪದಲ್ಲಿ ಈ ಹೊಲಿಗೆಗಳನ್ನು ಹಾಕಿದರೆ, ಈ ಹೊಲಿಗೆ ಉಬ್ಬಿ ಬಂದು ಚೆನ್ನಾಗಿ ಕಾಣುವದು. ಈ ಹೊಲಿಗೆ ಒಳ್ಳೇ ನಾಜೂಕಾಗಿರಬೇಕಾದರೆ, ಹೆಚ್ಚಿಗೆ ಎಳೆಗಳನ್ನು ತೆಗೆದುಕೊಳ್ಳದೆ, ಆ ಎಳೆಗಳ ಕೆಳಗಿರುವಷ್ಟೇ ಎಳೆಗಳನ್ನು ತೆಗೆದುಕೊಳ್ಳಬೇಕು. ಈ ಹೊಲಿಗೆಗಳನ್ನು ವಕ್ರವಾಗಿಯೂ ತೆಗೆದು

ಕೊಳ್ಳಬಹುದು. ಅಥವಾ ಸರಳವಾಗಿಯೂ ತೆಗೆದುಕೊಳ್ಳಬಹುದು. ಈ ಹೊಲಿಗೆಯನ್ನು ಕಸೂತಿಯಲ್ಲಿ ಅಕ್ಷರಗಳನ್ನು ಬರೆಯುವಾಗ ಹೆಚ್ಚಾಗಿ ಉಪಯೋಗಿಸುವರು. ಈ ಹೊಲಿಗೆಯು ದುಂಡಾಗಿ ಅಂದವಾಗಿ ಬರಬೇಕಾಗಿದ್ದಾಗ, ಮೊದಲಿನ ಎಳೆಯ ಸಾಲಿನ ಮೇಲೆ ಕಾರ್ಡಿಂಗಿನಲ್ಲಿಡುವಂತೆ ಬೇರೊಂದು ದಾರವನ್ನಿಟ್ಟೂ ಮಾಡಬಹುದು. ಅಂದರೆ ಇನ್ನೂ ಹೆಚ್ಚು ಎದ್ದು ಕಾಣುವದು.



## ಸ್ಟ್ರೋಕ್ ಸ್ಟಿಚ್

ಈ ಹೊಲಿಗೆ ಬಹಳ ಸುಲಭವಾಗಿದು ಅಂದವಾಗಿಯೂ ಇದೆ. ಹುಲ್ಲಿನಂತಹ ಗಿಡಗಂಟಿಗಳನ್ನು, ನಡುನಡುವೆ, ಚಿಕ್ಕೆಯಂತಹ ಬಿಳೀ, ಹಳದೀ ಹೂವುಗಳನ್ನೂ ತುಂಬುವದಾದರೆ ಈ ಹೊಲಿಗೆಯನ್ನು ಹಾಕಬಹುದು. ಎಲೆ, ಹೂಗಳು ಅತ್ತಿತ್ತ ಹಾರಾಡುತ್ತಿದ್ದಂತೆ ಕಾಣುವುದು.

## ಬೀಜದ ಹೊಲಿಗೆ (ಸೀಡ ಸ್ಟಿಚ್)

ಈ ಹೊಲಿಗೆಯಿಂದ ಹೂವಿನ ಮಧ್ಯದಲ್ಲಿಯ ಪರಾಗಗಳನ್ನು ತುಂಬಬಹುದು. ಇದರಲ್ಲಿ ಅಂಚಿನ ಹೊಲಿಗೆಯ ಟೆಬ್ಬಿಗಳನ್ನು ಒಂದರಮೇಲೊಂದರಂತೆ ಸ್ವಲ್ಪ ಹೊರಳಿದಂತೆ ಹಾಕಬೇಕು. ನೋಡಲು ಈ ಹೊಲಿಗೆ, ಕಾಫೀ ಬೀಜದಂತೆ ಕಾಣುವದು.

## ಕ್ಚೇನ್ ಸ್ಟಿಚ್

ಮೇಲೆ ಬರುವ ಎಲ್ಲ ಹೊಲಿಗೆಗಳಿಗಿಂತ, ಒಂದೇ ದಾರದಲ್ಲಿ ಈ ಹೊಲಿಗೆ ಸ್ವಲ್ಪ ದಪ್ಪವಾಗಿ ಬರುವದು. ಸೂಜಿಯನ್ನು ಬಟ್ಟೆಯಲ್ಲಿ ಕೆಳಗಿನಿಂದ ಚುಚ್ಚಿಕೊಂಡು, ಅಲ್ಲಿಂದ ಅಡ್ಡವಾಗಿ ಸೂಜಿಯಲ್ಲಿ ೧/೪ ಇಂಚು ಬಟ್ಟೆಯನ್ನು ಎತ್ತಬೇಕು. ಸೂಜಿಯನ್ನು ಎಳೆದು, ಆ ದಾರದ ಸುತ್ತಿನಲ್ಲಿ ಮತ್ತೆ ಸೂಜಿಯನ್ನಿಟ್ಟು, ದಾರವನ್ನು ಗಟ್ಟಿಯಾಗಿ ಎಳೆದು ಆ ಮೇಲೆ ಸೂಜಿಯನ್ನು ಹೊರಗೆಳೆಯಬೇಕು. ಅಲ್ಲಿಂದ ತೀರ ಕೆಳಗಿನ ಎಳೆಯಲ್ಲಿ ಸೂಜಿಯನ್ನು

ಹಾಯಿಸಿ ಮತ್ತೆ ಎತ್ತಬೇಕು. ಹೀಗೆ ಹಾಕುತ್ತ ಹೋದರೆ, ಹೊಲಿಗೆ ದಪ್ಪಾಗಿ ತುಂಬಿಕೊಂಡಂತೆ ಕಾಣುವದು.

ಅಕ್ಷರಗಳನ್ನು ತುಂಬಲು, ಹೂಬುಟ್ಟಿಯ ಹಿಡಿಕೆಗೆ, ಈ ಹೊಲಿಗೆಯನ್ನು ಹಾಕಿದರೆ, ಬಹಳ ಅಂದವಾಗಿ ಕಾಣುವದು.

× × × ×

ಇದರಂತೆ ಸ್ಟಾರ್ ಸ್ಟಿಚ್ ( ನಕ್ಷತ್ರದ ಹೊಲಿಗೆ ), ಸನ್ ಸ್ಟಿಚ್ (ಸೂರ್ಯನ ಹೊಲಿಗೆ) (ವ್ಹಿ ಹೊಲಿಗೆ), ವಾಯ್ ಸ್ಟಿಚ್ (ವಾಯ್ ಹೊಲಿಗೆ) ಇತ್ಯಾದಿಗಳನ್ನು ಬಹಳ ಅಂದವಾಗಿ ಕಸೂತಿಯಲ್ಲಿ ಹಾಕಬಹುದು.

ವ್ಹಿ ಹೊಲಿಗೆ ಒಂಟಿ ರಿಕ್ಕೆಹೊಲಿಗೆಯಂತೆಯೇ ಬರುವದು. ಆದರೆ ಒಂದಕ್ಕೊಂದು ಹತ್ತಿಹಾಕಿದರೆ, ಬಣ್ಣದಿಂದ ಬರೆದಂತೆ ಸುಂದರವಾಗಿ ಕಾಣುವದು. ಪರಕರ, ಫ್ರಾಕುಗಳ ಅಂಚಿಗೆ, ಸೀರೆಯ ಅಂಚಿಗೆ ಈ ಹೊಲಿಗೆಯನ್ನು ಹಾಕಬಹುದು.

ವಾಯ್ ಹೊಲಿಗೆ ದೇಟಿಗೆ ಬಹಳ ಅಂದವಾಗಿ ಕಾಣುವದು. ಎಲ್ಲ ಸುಳುವುಗಳನ್ನೂ ಇದರಿಂದ ಹಾಕಬಹುದು. ಇದು ವ್ಹಿ ಹೊಲಿಗೆಯಂತೆಯೇ; ಆದರೆ ಮುಂದೊಂದು ಸಣ್ಣ ಎಳೆ ಉದ್ದಕ್ಕೂ ಬರುವದರಿಂದ ವಾಯ್ ಆಕಾರದಂತೆ ಕಾಣುವದು. ಇದರಿಂದ ದೇಟನ್ನು ತಂಬಿದರೆ, ಬಹಳ ಬೇಗ ಅದು ತುಂಬಿಕೊಳ್ಳುವದು.

ಸ್ಟಾರ್ ಸ್ಟಿಚ್ ( ನಕ್ಷತ್ರದ ಹೊಲಿಗೆ ), ಸನ್ ಸ್ಟಿಚ್ ( ಸೂರ್ಯನ ಹೊಲಿಗೆ ) ಗಳನ್ನು, ವ್ಹಿ ಸ್ಟಿಚ್, ಸ್ಟ್ರೋಕ ಸ್ಟಿಚ್‌ಗಳಿಂದ ತುಂಬಬಹುದು. ಸಣ್ಣ ಸಣ್ಣ ಹೂವುಗಳನ್ನು ಈ ಹೊಲಿಗೆಯಿಂದ ತುಂಬಿದರೆ ಬಹಳ ಅಂದವಾಗಿ ಕಸೂತಿ, ಎದ್ದು ಕಾಣುವದು.

ಕಸೂತಿಯಲ್ಲಿ ಈ ಕೆಲವು ಹೊಲಿಗೆಗಳು ಬಂದರೆ, ಇವುಗಳ ಸಹಾಯದಿಂದ ಇನ್ನೂ ಕೆಲವು ಹೊಲಿಗೆಗಳನ್ನು ಸಹಜವಾಗಿ ಕಲಿತುಕೊಳ್ಳಬಹುದು. ಈ ಹೊಲಿಗೆಗಳ ಉಪಯೋಗ ಮುಂದಿನ ಕಟ್ ವರ್ಕ, ಪ್ಯಾಚವರ್ಕ ಇತ್ಯಾದಿಗಳಲ್ಲಿ ಬಹಳವಾಗುವದು.

---

## ಪ್ರಕರಣ ೪

# ಕನ್ನಡ ಕಸೂತಿ (ಪರಿಚಯ)

ಭಾರತದೇಶದಲ್ಲೆಲ್ಲ, ಸೃಷ್ಟಿಸೌಂದರ್ಯವನ್ನು ಒಂದಿಲ್ಲೊಂದು ರೀತಿಯಲ್ಲಿ ಅನುಸರಿಸಿ, ತಾನೂ ಸಂತೋಷಪಟ್ಟು, ಉಳಿದವರನ್ನೂ ಸಂತೋಷಪಡಿಸುವದು, ಕಲಾವಿದನಿಗೆ ರೂಢಿಯಾಗಿ ಹೋಗಿದೆ. ಪ್ರಕೃತಿ ಸೌಂದರ್ಯ ಅಪರೂಪವಾಗಿರುವಲ್ಲಿ ಕಲೆ ಯಾವ ವಿಧದ ಬೆಡಗೂ ಇಲ್ಲದೆ ತೀರ ಸರಳವಾಗಿ ಬರಬಹುದು. ಆದರೆ ಇಲ್ಲಿ, ಈ ಬೆಡಗಿನಲ್ಲಿ, ಸೌಂದರ್ಯವನ್ನು ಕೊರೆಯುವಲ್ಲಿ ಕಲಾವಿದನು ತನ್ನ ಜೀವನವನ್ನೇ ಮೀಸಲಾಗಿಟ್ಟಿದ್ದಾನೆ. ಚಾಲುಕ್ಯ ರಾಷ್ಟ್ರಕೂಟರ ಕಾಲದಲ್ಲಿ ಕೊರೆದ ಕಲ್ಲಿನ ಗುಡಿಗಳು ಇದಕ್ಕೆ ಆಧಾರವಾಗಿವೆ. ಮೇಲಿನ ಜಂತೆಯಲ್ಲಿ ಕೊರೆದ ಚಿತ್ರವಿಚಿತ್ರದ ಪ್ರಮಾಣಬದ್ಧ ಸುಂದರ ಚಿತ್ರಗಳನ್ನು ನೋಡಿ, ಬಾದಾಮಿಗೆ ಬಂದಿದ್ದ ಲೇಡೀ ಕ್ರಾಮರಿಚ್, ಇಂತಹ ಅದ್ಭುತ ಬೇರೆಲ್ಲಿಯೂ ಕಾಣದೆಂದು, ಉದ್ಗಾರ ತೆಗೆದರಂತೆ. ಬೇರೊಬ್ಬರು ಬಂದು ನಮ್ಮಲ್ಲಿದ್ದ ವಸ್ತುಗಳನ್ನು ವರ್ಣಿಸಿದಾಗ, ಆ ವಸ್ತುಗಳ ಬಗ್ಗೆ ನಮ್ಮ ಅಭಿಮಾನ ಹೆಚ್ಚಾಗುವದೆಂದು ಕಾಣುತ್ತದೆ. ಬೆಳುಗೊಳದ ಗೊಮ್ಮಟೇಶ್ವರ, ಹಂಪೆಯ ವಿಜಯವಿಠ್ಠಲನ ದೇವಾಲಯ, ಒಂದು ಕಾಲಕ್ಕಿದ್ದ ಕನ್ನಡಿಗರ ವೈಭವವನ್ನು ಎತ್ತಿ ಸಾರುತ್ತವೆ.

ಆದರೆ ಶಿಲಾಶಿಲ್ಪಿ, ಚಿತ್ರಕಾರ, ಗಾಯಕ—ಯಾರಿದ್ದರೂ, ಅವರ ಕಲೆಯನ್ನು ಮೆಚ್ಚುವ ರಸಿಕರಿಲ್ಲದೆ, ಅವರಿಗೆ ಪ್ರೋತ್ಸಾಹ ದೊರೆಯದು. ರಾಷ್ಟ್ರಕೂಟ, ಚಾಲುಕ್ಯರ ಕಾಲದಲ್ಲಿ, ರಾಜಾಶ್ರಮ ದೊರೆತದ್ದರಿಂದಲೇ, ಕಲೆಗಳ ಬೆಳವಣಿಗೆಗೆ ಪ್ರೋತ್ಸಾಹ ದೊರೆಯಿತು. ೧೭ ನೆಯ ಶತಮಾನದಲ್ಲಿ ಮೈಸೂರೊಡೆಯರ ಆಶ್ರಯದಲ್ಲಿ, ಅರುವತ್ತುನಾಲ್ಕು ಕಲೆಗಳನ್ನೂ ಬಲ್ಲ ಮಹಿಳೆಯರು ಇದ್ದರೆಂದು ಹೊನ್ನಮ್ಮ ಹೇಳುತ್ತಾಳೆ. ಪ್ರೋತ್ಸಾಹವಿಲ್ಲದುದಕ್ಕೆ ಕಲೆ ಹಿಂದೆ ಬೀಳುತ್ತದೆಂಬುದಕ್ಕೆ ಇಂದಿನ ಕನ್ನಡ ಕಸೂತಿಯೇ ಉದಾಹರಣೆ.

ಗಟ್ಟಿಗಗಾದ ಪುರುಷರು ಹೊರಗಡೆ ಕಲ್ಲಿನಲ್ಲಿ ಕಲೆಯನ್ನು ನಿರ್ಮಿಸಿದರು, ಅದೇ ಕಲಾಕೃತಿಯನ್ನು ಸ್ತ್ರೀಯರು ಮನೆಯಲ್ಲಿ ಮಾಡುತ್ತಿದ್ದರು. ಅವರ ಕಲೆ ಬಟ್ಟೆಯಲ್ಲಿ ಸೂಜಿಯಿಂದ ಮಾಡಿದುದು. ಅಚ್ಚ ಕರಿಯ ಬಣ್ಣದ (ಚಂದ್ರಕಾಳಿ) ಸೀರೆಯಲ್ಲಿ, ಅದರ ಕರೆಯ ರೇಶಿಮೆ ಎಳೆಗಳನ್ನೇ ತೆಗೆದು ಕೊಂಡು ಕಣ್ಣಲ್ಲಿ ಕಣ್ಣಿಟ್ಟು ಎಳೆ ಎಣಿಸಿ, ವರ್ಷ ವರ್ಷ ಕಾಲ ಕಸೂತಿ ಹಾಕುತ್ತಿದ್ದರು. ಸೀರೆಯ ಮೇಲಿನ ಆ ಕಸೂತಿ, ಸೀರೆಯ ಪಾತಳಿಯಿಂದ ಎದ್ದು ಮೇಲೆ ಬರುವಂತಿಲ್ಲ. ಅದೇ ಪಾತಳಿಯಲ್ಲಿಯೇ ಬರಬೇಕು.

ಕಸೂತಿಯ ಕಲೆಗಾಗಿ ಅಂದಿನ ಸೋದರಿಯರಿಗೆ ವರ್ಗಗಳಿರಲಿಲ್ಲ, ಇಲ್ಲವೆ ಸಚಿತ್ರ ಪುಸ್ತಕಗಳಿರಲಿಲ್ಲ; ಕೈಯಿಂದ ಕೈಯಿಗೆ ವಿದ್ಯೆ ಸಾಗುತ್ತಿತ್ತು. ಬಿಡುವಿನ ಸಮಯದಲ್ಲಿ ಅಜ್ಜಿ, ಮಗಳು, ಸೊಸೆ, ಮೊಮ್ಮಕ್ಕಳು, ನೆರೆ ಮನೆಯ ಹೆಣ್ಣುಮಕ್ಕಳು ಎಲ್ಲರೂ ಸೇರಿ, ಹಜಾರದಲ್ಲಿ ಕುಳಿತು ಕಸೂತಿ ಹೆಣೆಯುತ್ತಿದ್ದರು. ಅದರ ಅವಶೇಷವನ್ನು ಹಳ್ಳಿಗಳಲ್ಲಿ ನಾವಿನ್ನೂ ಕಾಣ ಬಹುದು. ಇವರು ತಮ್ಮ ಮನೆಯವರಿಗೆ ಕಸೂತಿಯ ಬಟ್ಟೆಗಳನ್ನು ಮಾಡಿ ಕೊಡುವದಲ್ಲದೆ, ಬೇರೆಯವರ ಕಸೂತಿಯ ಬಟ್ಟೆಯ ಬಯಕೆಯನ್ನೂ ಪೂರೈಸುತ್ತಿದ್ದರು. ಪ್ರತಿಯೊಬ್ಬ ಹೆಣ್ಣುಮಗಳು ತನ್ನ ಸೀರೆಯನ್ನೂ ಕುಪ್ಪುಸ ವನ್ನು, ತನ್ನ ಮಗುವಿನ ಕುಂಚಿಗೆಯನ್ನು, ಮಗಳ ಲಂಗವನ್ನು ಕಸೂತಿ ಯಿಂದ ಅಲಂಕರಿಸುತ್ತಿದ್ದಳು. ನೆಲವನ್ನು ಉಳುವ ಬಸವಣ್ಣನಿಗೂ ಒಂದು ಕಸೂತಿಯ ಬಟ್ಟೆ ಹೊದೆಯಲು ದೊರೆಯುತ್ತಿತ್ತು.

ಕರ್ನಾಟಕದಲ್ಲಿ ಇಂದಿಗೂ ಕೆಲ ಹಳ್ಳಿಗಳಲ್ಲಿ ಕಸೂತಿಯಿಂದ ಉಪ ಜೀವನ ಸಾಗಿಸುತ್ತಿದ್ದ ಮಹಿಳೆಯರನ್ನು ನಾವು ಕಾಣಬಹುದು. ಧಾರವಾಡ, ವಿಜಾಪುರಗಳ ಕೆಲಭಾಗಗಳಲ್ಲಿ ಕಸೂತಿಯ ಪ್ರಚಾರ ಹೆಚ್ಚಾಗಿದೆ. ಕಸೂತಿ ಯನ್ನು ಬಟ್ಟೆಯ ಮೇಲೆ ತೆಗೆಯಿಸಿಕೊಳ್ಳುವ ಶ್ರೀಮಂತರೂ ಒಬ್ಬಿಬ್ಬರು ದೊರೆಯುತ್ತಾರೆ. ಆದರೆ ಗೃಹಕೈಗಾರಿಕೆಯೆಂದು ಕರ್ನಾಟಕದಲ್ಲಿ ಕಸೂತಿಯ ಕೆಲಸ ವಿಕಾಸವನ್ನು ಹೊಂದಲಿಲ್ಲ. ಗೃಹಕೈಗಾರಿಕೆಯಾದ ಕಾಶ್ಮೀರದಲ್ಲಿಯೂ ಅದರ ಗತಿ ಹಾಗೇ ಆಗಿದೆ ಎನ್ನ ಬಹುದು. ಸಿರಿವಂತರ ಪ್ರೋತ್ಸಾಹದ ಸೆಳೆ ತಕ್ಕೆ ಸಿಕ್ಕ ಕಸೂತಿ, ಮತ್ತೆ ಮೇಲೆ ಮಗ್ಗಗಳೊಡನೆ ಸ್ಪರ್ಧಿಸಬೇಕಾದ ಪ್ರಸಂಗ ಬಂದರೆ ಬದುಕುವದು ಹೇಗೆ ? ಇತ್ತಿತ್ತಲಾಗಿ ಶಾಲೆ ಕಾಲೇಜು

ಗಳಲ್ಲಿ ಮೂಲಶಿಕ್ಷಣ ಪದ್ಧತಿ ಬಳಕೆಯಲ್ಲಿ ಬಂದಾಗಿನಿಂದ, ಈ ಕಸೂತಿಗೂ ಅಲ್ಲಿ ಪ್ರವೇಶಿಸಲು ಅವಕಾಶದೊರಿತಿದೆ.

ಮೂಡುವ ಕಸೂತಿ, ಮನುಷ್ಯನ ಭಾವನೆಗಳನ್ನೂ, ಭೌಗೋಲಿಕ, ಧಾರ್ಮಿಕ ಪ್ರಭಾವಗಳನ್ನೂ ಎತ್ತಿ ತೋರಿಸುತ್ತದೆ. ಉದಾಹರಣೆಗೆ ಕನ್ನಡ ಕಸೂತಿಯನ್ನೇ ನೋಡಿದರೆ, ಪುರುಷರು ದೇವಾಲಯಗಳಲ್ಲಿ ಕೊರೆದ ಗೋಪುರ, ಕಲಶ, ಪದ್ಮ, ಪೀಠ ತುಳಸೀಕಟ್ಟೆ ಇವುಗಳನ್ನೇ ನಾವು ಸ್ತ್ರೀಯರ ಕಸೂತಿಯಲ್ಲಿ ಕಾಣುತ್ತೇವೆ. ಪಲ್ಲಕ್ಕಿ, ದೇವರನ್ನು ಕೂಡಿಸಲು ಉಪಯೋಗಿಸುತ್ತಿದ್ದುದು,-ಕಸೂತಿಯಲ್ಲಿಯೂ ಮೂಡಿತು ಅಲ್ಲದೆ ಜೊತೆಗೆ ತನಗೂ ತನ್ನ ಮಗುವಿಗೂ ಪ್ರಿಯವಾದ ಅನೇಕ ವಸ್ತುಗಳೂ ಕಸೂತಿಯಲ್ಲಿ ಬಂದವು. ಪಲ್ಲಕ್ಕಿಯನ್ನು ಕೂಡಿಸುವ ಆನೆ ಅಂಬಾರಿಗಳೂ ಬಂದವು. ತೂಗುವ ತೊಟ್ಟಿಲು, ಗಿಳಿ, ಆಕಳುಗಳೆಲ್ಲ ಕಸೂತಿಯಲ್ಲಿ ಮೂಡಿಬಂದವು. ವರಾಹದ ಹೂವಿನ ಸಾಲು ಅವಳ ಕುಪ್ಪುಸವನ್ನಲಂಕರಿಸಿತು. ಅವಳ ಸೆರಗಿನಲ್ಲಿ ಗಿಳಿ, ಗೋಪುರ, ಆನೆ ಅಂಬಾರಿಗಳೆಲ್ಲ ಬಂದವು. ಕೊಳಲೂದುವ ಕೃಷ್ಣನೂ ಮೂಡಿದನು, ಈಶ್ವರನೂ ಬಂದನು.

ಆದರೆ ಇವೇ ಕಸೂತಿಯ ಅಚ್ಚುಗಳನ್ನು .ಮಗ್ಗವು ನೇಯ್ದು ಖಣಗಳನ್ನು ತಯಾರಿಸಹತ್ತಿದರೆ, ಕಸೂತಿ ಹಿಂದೆ ಬೀಳುವದು ಸಹಜವೇ. ಪೈಠಣಿಯ ಖಣ, ಇಳಕಲ್ಲ, ಬಾಗಲುಕೋಟೆಯ ವರಾಹದ ಹೂವಿನ ಖಣ, ಕೇದಗೆಯ ಗರಿಯ ಖಣಗಳು ಬಣ್ಣ ಬಣ್ಣಗಳಲ್ಲಿ ಬಂದರೆ, ಕಷ್ಟಪಟ್ಟು ಕಸೂತಿಯನ್ನು ಹಾಕಿ, ಹಾಕಿಸಿಕೊಳ್ಳುವವರಾರು ?

ಕೈ-ಕಸೂತಿಗೆ ವೆಚ್ಚ ಸ್ವಲ್ಪ ಹೆಚ್ಚು. ಕಸೂತಿಯನ್ನು ಹಾಕುವ ಬಟ್ಟೆಯಿಂದಲೇ ರೇಶಿಮೆ ಎಳೆಗಳನ್ನು ತೆಗೆದುಕೊಂಡು ಹಿಂದೆ ಹಾಕುತ್ತಿದ್ದರು. ಆದರೆ ಇತ್ತೀಚೆ ಕಸೂತಿಯ ರೇಶಿಮೆ ಮೈಸೂರಿನಿಂದ ಬರುತ್ತದೆ. ಇದನ್ನು ಬಟ್ಟೆಯಮೇಲೆ ಹಾಕಿದರೆ, ಕಸೂತಿ ಎತ್ತರವಾಗಕೂಡದು ಎಂಬುದೇ ಈ ರೇಶಿಮೆ ಹಾಕುವಲ್ಲಿಯ ಮುಖ್ಯ ಉದ್ದೇಶ. ಇದಕ್ಕೂ ಮೊದಲು ಕಲಕತ್ತಾದಿಂದ ರೇಶಿಮೆ ಕರ್ನಾಟಕಕ್ಕೆ ಬರುತ್ತಿತ್ತು. ವಿಜಾಪುರದಲ್ಲಿ ಅದನ್ನು ತೊಳೆದು ಒಣಗಿಸುತ್ತಿದ್ದರು. ಈ ರೇಶಿಮೆಗೆ 'ಭಂಗಾರ-ಗುಂಡು' ಎಂದು ಹೇಳುತ್ತಿದ್ದರು. ಈ ರೇಶಿಮೆಯಿಂದ—ಹಳದಿ, ಹಸರು, ಕೆಂಪು, ಬಿಳಿ, ( ಕನ್ನಡ

ಕಸೂತಿಯಲ್ಲಿ ಇವೇ ಮುಖ್ಯವಾದ ಬಣ್ಣಗಳು), ಈ ಕಸೂತಿಯ ಯಾವ ಡಿಝಾಯಿನನ್ನು ಬೇಕಾದರೂ ಹೆಣೆಯಬಹುದು. ಒಂದುಕಾಲಕ್ಕೆ ಈ ರೇಶಿಮೆ ಚೀನದಿಂದ ಬರುತ್ತಿತ್ತಂತೆ ! ಈ ರೇಶಿಮೆಯಿಂದ ತೆಗೆದ ಕನ್ನಡ ಕಸೂತಿಯ ಎಲ್ಲ ಭಾಗಗಳನ್ನು ಒಂದೆಡೆ ನೋಡಬಹುದಾದರೆ, ಅದು ಕರಿಯ ಚಂದ್ರಕಾಳಿಯ ಸೀರೆಯ ಮೇಲೆಯೇ ! ಸೀರೆ ಹದಿನೆಂಟು ಮೊಳ ಉದ್ದ, ಅದರ ಸೆರಗು ಎರಡೂವರೆ ಮೊಳ ! ಕೆಂಪು, ಬಿಳೀ ರೇಶಿಮೆಗಳ ಪಟ್ಟಿಯಿಂದ ಕೂಡಿದ ಸೆರಗಿನ ಮೇಲಂಚಿಗೆ, ಹೂವಿನ ಪಟ್ಟಿ, ಗೋಡಂಬಿಯ ಪಟ್ಟಿ ಪ್ರಾರಂಭವಾಗಿ, ಗೋಪುರ, ಗಿಳಿಗಳೆಲ್ಲವೂ ನಡುವೆ ಬರುತ್ತವೆ. ದೊಡ್ಡ ಡಿಝಾಯಿನುಗಳು, ಪುನರಾವರ್ತನವಾಗದಂತೆ ಇಲ್ಲಿ ಬರುವವು. ಬಳಿಕ ಸೀರೆಯ ಉದ್ದಕ್ಕೂ ಬಿಳಿಯ ಚಿಕ್ಕೆಗಳು–ನೀಲಾಕಾಶದಲ್ಲಿ ನಕ್ಷತ್ರಗಳು ಹರಡಿದಂತೆ—ಕಾಣುವವು. ಅಲ್ಪವೇಳೆ, ವೆಚ್ಚಗಳಲ್ಲಿ, ಅಚ್ಚು ಇದೇ ಕೆಲಸ ವನ್ನು ಮಾಡುತ್ತಿದ್ದಾಗ, ಕಸೂತಿಯ ಚಂದ್ರಕಾಳಿ ಸೀರೆ ಕೇವಲ ವಸ್ತು ಸಂಗ್ರಹಾಲಯಗಳಲ್ಲಿ ಮಾತ್ರನೋಡಲು ಸಿಗುವದು ಆಶ್ಚರ್ಯದ ಮಾತಾ ಗದು !

ಮಿತಿಮೀರಿದ ಸಹನೆಯಿಂದ, ಎಳೆಗಳನ್ನು ಎಣಿಸಿ ಹೆಣೆಯುವ ಕನ್ನಡ ಕಸೂತಿ ವಿವಿಧ ಆಕೃತಿಗಳಲ್ಲಿ ಮೂಡಿಬಂದುದು ಸಹಜ. ಇದರಲ್ಲಿ ಬರುವ ಡಿಝಾಯಿನುಗಳೆಲ್ಲ ಭೂಮಿತಿಬದ್ಧವಾಗಿದ್ದುದರಿಂದ, ಅಕ್ಕಿ ರಂಗೋಲಿಯ ಅರ್ಧಭಾಗವು ಗೊತ್ತಾದರೆ, ಇನ್ನರ್ಧ ಭಾಗವನ್ನು ಹಾಕುವಂತೆ, ಹಾಕಿ ಬಿಡಬಹುದು. ಕಸೂತಿಯ ಈ ಕಲೆ ಹೆಚ್ಚಿನ ಲೋಕಪ್ರಿಯತೆಯನ್ನು ಗಳಿಸಿ ದಾಗ ಮಗ್ಗಗಳು ಅದನ್ನು ಅನುಕರಿಸಲು ಯತ್ನಿಸಿದವು. ಆ ಪ್ರಯತ್ನದ ಫಲವಾಗಿಯೇ ನಾವಿಂದು ಪೈಠಣಿಯ ಖಣ, ವರಾಹದ ಹೂವಿನ, ಗುಳೇದ ಗುಡ್ಡದ ಖಣ, ಕೇದಗೆ ಗರಿಯ ಖಣಗಳನ್ನು ಕಾಣುವದು ! ಮಗ್ಗಗಳ ಮೂಲಕ ಕೆಲವೊಂದು ಡಿಝಾಯಿನುಗಳು ತೀರ ಸಾಮಾನ್ಯವಾಗಿಬಿಟ್ಟಿವೆ. ಆದರೆ ಕೈಕಸೂತಿಯನಯನಾಜೂಕು ಅವುಗಳಿಗೆ ಏನುಮಾಡಿದರೂ ಬಾರದು.

ಹಾಗೆಯೇ ಬಂಗಾರದ ಕಡ್ಡಿಗಳಿಂದ ನೇಯ್ದ ಕಸೂತಿಯಲ್ಲಿ, ಅಲಂಕೃತವಾದ ಬನಾರಸಿ ಸೀರೆ, ಭಾರತೀಯ ಮಹಿಳೆಯ ಮನಸ್ಸನ್ನು ಸೆಳೆದುಕೊಂಡಿದೆ. ಬಂಗಾರ ಕಡ್ಡಿಯ ಡಿಝಾಯಿನು ಕಂಡುಬರುವದು

ರೇಶಿಮೆ ಸೀರೆ, ಖಣಗಳಲ್ಲಿ ಮಾತ್ರ ! ಕೈಲಿ, ಎಳೆ ಎಣಿಸಿ ಹಾಕುವದು ರೇಶಿಮೆ ಬಟ್ಟೆಯಲ್ಲಿ ಸಾಧ್ಯವಿಲ್ಲ. ಹೀಗಾಗಿಯೂ, ಕೈ ಕಸೂತಿ ಹಿಂದೆ ಬೀಳಲು ಕಾರಣವಾಯಿತು.

ನಿತ್ಯದ ಉಡುಪಿನಲ್ಲಿಯೂ ಸುಂದರವಾದ ಕೈ ಕಸೂತಿಯ ಕಲೆ ಮಿನುಗ ಬಲ್ಲದು, ಎಂಬುವದಕ್ಕೆ ಕನ್ನಡ ಕಸೂತಿಯೇ ಸಾಕ್ಷಿಯಾಗಿದೆ. ಕೆಳಗಿನ ನಾಲ್ಕು ವಿಧಗಳಲ್ಲಿ ಕಸೂತಿ ಬಟ್ಟೆಯ ಮೇಲೆ ಬರಬಹುದು. ಹೇಗೆ ಬಂದರೂ, ಅದ ರಲ್ಲಿ ಮೊದಲದೃಷ್ಟಿಗೆ ತಿಳಿಯಲಾರದಂತಹ ಅಪೂರ್ವ ಕೌಶಲ್ಯವಿದ್ದೇ ಇದೆ.

**ಮೆಂಥೆ**

ಈ ಹೊಲಿಗೆಯನ್ನು ಉದ್ದ ಕ್ಕೂ ಹಾಕಿದಾಗ, ಮೆಂಥೆಯ ಕಾಳಿಟ್ಟಂತೆ ಕಾಣುವದೆಂದು ಹೀಗೆ ಹೆಸರು ಬಂದಿತೇನೋ ! ಈ ಕಸೂತಿ ಸ್ವಲ್ಪ



ಜಡವಾದುದು. ಹಿನ್ನೆಲೆಯನ್ನು ತುಂಬಲು ಈ ಕಸೂತಿಯನ್ನು ಹೆಚ್ಚಾಗಿ ಹಾಕುತ್ತಾರೆ. ಉದಾಹರಣೆಗೆ ಮೇಲೆಲ್ಲ ಹರಡಿದಂಥ ನವಿಲುಗರಿಗಳು, ಗೋಪುರದ ಹಿನ್ನೆಲೆ, ತೊಟ್ಟಿಲು ಇವುಗಳು. ಮೆಂಥೇ ಕಸೂತಿಗೆ ರೇಶಿಮೆ ಹೆಚ್ಚು. ನೋಡಲು ಈ ಕಸೂತಿ ಅಷ್ಟೊಂದು ನಯವಾಗಿ ಕಾಣುವದಿಲ್ಲ. ಎರಡೂ ಬದಿಗೂ ಈ ಕಸೂತಿ ಒಂದೇ ಸಮನಾಗಿ ಬರುವದಿಲ್ಲ. ಇದನ್ನಾ ದರೂ ಎಳೆಗಳನ್ನೆಣಿಸಿಯೇ ಹಾಕುವರು; ಅದಕ್ಕೋಸುಗ ನೂಲಿನ ಬಟ್ಟೆಯೇ ಒಳ್ಳೆಯದು. ಮೇಲೆ ನೋಡಲು, ಈ ಹೊಲಿಗೆ ಕತ್ತರಿ ಹೊಲಿಗೆಯಂತೆಯೇ ಇದೆ. ಇಲ್ಲಿ ಮೊದಲನೆಯ ಆಕೃತಿಯಲ್ಲಿ ಕನ್ನಡಕಸೂತಿಯ ಕತ್ತರಿಹೊಲಿಗೆ (ಮೆಂಥೆ)ಯನ್ನು ನೋಡಿದರೆ, ಎರಡನೆಯ ಆಕೃತಿಯಲ್ಲಿ ಅದೇ ಹೊಲಿಗೆ

ಹೊಸ ರೂಪದಲ್ಲಿ ಕ್ಯಾನವಾಸ್ ಬಟ್ಟೆಯ ಮೇಲೆ ಬಂದುದನ್ನು ಕಾಣುತ್ತೇವೆ. ಕಸೂತಿ ಇಲ್ಲಿಯೂ ಪ್ರಮಾಣಬದ್ಧವಾಗಿದೆ. ಅಲ್ಲದೆ ಕೆಂಪು, ಗುಲಾಬಿ ಮೊದಲಾದ (ಆಕೃತಿಯಲ್ಲಿ ಹೇಳಿದ) ಬಣ್ಣಗಳ ಬೆರಕೆಯಿಂದ ಈ ಕತ್ತರಿ ಹೊಲಿಗೆಗೆ ಇನ್ನೂ ಹೆಚ್ಚಿನ ಶೋಭೆಯುಂಟಾಗುವದು.




## ನೇಗಿ

ನೇಗಿ ಕಸೂತಿಯನ್ನು ಬಟ್ಟೆಯ ಅಡ್ಡ ಎಳೆಗಳೊಡನೆ ನೇಯ್ದಂತೆಯೇ ಹಾಕುವರು. ಆದ್ದರಿಂದ ಮೇಲೆ ಯಾವುದೇ ಒಂದು ಕಸೂತಿಯನ್ನು ತುಂಬಿದರೆ, ಆಕೃತಿ ಕೆಳಗೂ ಮೂಡುವದು. ಆದರೆ ಎಳೆಗಳು ಮೇಲೆ ಉದ್ದವಾಗಿದ್ದರೆ, ಕೆಳಗೆ ಸಣ್ಣಾಗಿರುವವು; ಮೇಲೆ ಸಣ್ಣವಿದ್ದರೆ ಕೆಳಗೆ ದೊಡ್ಡವಾಗಿರುವವು. ಈ ನೇಗಿ ಕಸೂತಿಯಲ್ಲಿ, ಕೆಳಗಡೆಗೂ ಅದೇ ಆಕೃತಿ ಮೂಡುತ್ತದೆ ನಿಜ, ಆದರೆ ಎಳೆಗಳು ವಿರುದ್ಧವಾಗಿರುತ್ತವೆ. ಈ ನೇಗಿ ಕಸೂತಿಯನ್ನೇ ಮಗ್ಗಗಳೂ ಅನುಕರಿಸುತ್ತಿದ್ದು, ಕೆಲ ಡಿಝಾ



ಯಿನುಗಳು ತೀರ ಸಾಮಾನ್ಯವಾಗಿ ಬಿಕ್ಕಿದೆ. ಖಣಗಳಲ್ಲಿ ಇದರ ಇತ್ತೀಚಿನ ಮಾದರಿ ಎಂದರೆ ಗುಳೇದಗುಡ್ಡದ ಖಣಗಳು.

ಈ ಕಸೂತಿಗಾದರೂ ಎಳೆಗಳನ್ನು ಎಣಿಸಿ ಹಾಕಬೇಕಾದ್ದರಿಂದ, ಬಟ್ಟೆ ನೂಲಿನದೇ ಆಗಿರಬೇಕು.

## (೩) ಗಾಂವಟಿ ಕಸೂತಿ

ಗಾಂವಟಿ ಕಸೂತಿಯೆಂದರೆ ಹಳ್ಳಿಗಳಲ್ಲಿ ಹಾಕುವ ಕಸೂತಿ ಎಂದು ಅಕ್ಷರಶಃ ಅರ್ಥವಾದರೂ ರೂಢಿಯಲ್ಲಿ ಕನ್ನಡ ಕಸೂತಿಯಲ್ಲಿಯೇ ಅತ್ಯಂತ ಸುಂದರವಾದ ಕಸೂತಿಗೆ ಆ ಹೆಸರು ಬಂದಿದೆ. ಇದರಲ್ಲಿ ಪದ್ಮ, ಕಲಶಗಳನ್ನು ಹಾಕಬಹುದು. ಈ ಕಸೂತಿಯ ವೈಶಿಷ್ಟ್ಯ ವೆಂದರೆ, ಕಸೂತಿಯನ್ನು ಎಲ್ಲಿ ಪ್ರಾರಂಭ ಮಾಡಿ ಮುಗಿಸಿದರೆಂಬುದು ಕೂಡ ತಿಳಿ ಯುವದಿಲ್ಲ. ಕೆಳಗೆ, ಮೇಲೆ ಕಸೂತಿ ಒಂದೇ ವಿಧವಾಗಿ ಬರುವದು. ಇದ ರಿಂದಲೇ ಹಳ್ಳಿಯ ಎಷ್ಟೋ ಹೆಣ್ಣು ಮಕ್ಕಳು ಕುಪ್ಪುಸವನ್ನು ಅನೇಕ ವೇಳೆ ತಿರುವಿ ತೊಡುವರು—ಎಡ ತೋಳಿನ ಕಸೂತಿ ಹಾಗೇ ಉಳಿದು ಬಲತೋಳಿನ ಕಸೂತಿ ಮಾಸಬಾರದೆಂದು. ತೀರ ನಯವಾದ ಸುಳಿವುಗಳನ್ನೂ ಈ ಕಸೂತಿಯಿಂದ ತೆಗೆಯಬಹುದು.



ಎಳೆ ಎಣಿಸಿ ಹಾಕುವ ಈ ಕಸೂತಿಗೂ ನೂಲಿನ ಬಟ್ಟೆಯೇ ಉತ್ತಮ. ಈ ಕಸೂತಿಯಲ್ಲಿ ಒಂದು ಬದಿಯ ಹೊಲಿಗೆಗಳನ್ನೆಲ್ಲ ಮುಗಿಸಿಕೊಂಡು ಮತ್ತೆ ಅವುಗಳನ್ನು ಪೂರ್ಣ ಮಾಡುತ್ತ ಹಿಂದೆ ಬರಬೇಕು. ಇದಕ್ಕೇ ಮುರ ಕೊಳ್ಳುವದು ಎನ್ನುವರು.

## ಮುರಿಗಿ ಕಸೂತಿ

ಇದು ಮುರಿಗೆ ಮುರಿಗೆಯಾಗಿ ಬರುವದರಿಂದ ಹಾಗೆ ಹೆಸರು ಬಂದಿದೆ. ಕನ್ನಡ ನಾಡಿನಲ್ಲಿ ಕರಿಯ ಕಂಬಳಿಗಳ ಮೇಲೆ ನೇಗಿಕಸೂತಿ, ಈ ಕಸೂತಿ ಹೆಚ್ಚಾಗಿ ಕಂಡುಬರುವದು. ಈ ಕಸೂತಿಯಲ್ಲಿ ಆನೆ–ಅಂಬಾರಿ ಬಹಳ ಚೆನ್ನಾಗಿ ಕಾಣುವವು. ಪ್ರಾರಂಭದಿಂದ ಹೊರಟ ಕಸೂತಿಯು ಎಳೆ ಕೊನೆಗೇ

ನಿಂತಂತೆ ಕಾಣುತ್ತದೆ. ಮುರಿಗಿ ಕಸೂತಿ ಮೆಂಥೇ ಕಸೂತಿಯ ಅರ್ಧಭಾಗದಂತೆ ಕಾಣಿಸುತ್ತದೆ. ಆದರೆ ಕಸೂತಿ ಅರ್ಧವಾದಂತೆ ಕಾಣದೆ, ಸುಳಿಸುಳಿಯಾಗಿ ಸುಂದರವಾಗಿ ಕಾಣುವದು. ಈ ಕಸೂತಿಯನ್ನಾದರೂ ಎಳೆ ಎಣಿಸಿಯೇ ಹಾಕಬೇಕು.

ಈ ಕಸೂತಿಯನ್ನು ಹೆಣೆಯಬೇಕಾದರೆ, ೭-೮ ನಂಬರಿನ ನುಣುಪಾದ ಉಕ್ಕಿನ ಕೈ-ಸೂಜಿ, ಕಸೂತಿಯ ರೇಶಿಮೆ, ಕತ್ತರಿ ಇವುಗಳನ್ನು ಜತನವಾಗಿಟ್ಟುಕೊಂಡಿರಬೇಕು. ನಮ್ಮ ಹಳ್ಳಿಗಳಲ್ಲಿ, ಈ ಕಸೂತಿಯ ಬಟ್ಟೆಯನ್ನು ರಿಂಗಿನಲ್ಲಿ ಕೂಡಿಸುವ ರೂಢಿಯಿಲ್ಲ. ರಿಂಗಿನಲ್ಲಿ ಬಟ್ಟೆಯನ್ನು ಗಟ್ಟಿಯಾಗಿ ಕೂಡಿಸಿದರೆ, ಕಸೂತಿ ಹಾಕುವದು ಸುಲಭವಾಗುತ್ತದೆ.

ಕನ್ನಡ ನಾಡಿನಲ್ಲಿ ಕಸೂತಿಯನ್ನು ಜಾತಿ-ಕುಲ-ಗೋತ್ರಗಳ ಭೇದಭಾವವಿಲ್ಲದೆ ಎಲ್ಲ ಹೆಣ್ಣುಮಕ್ಕಳೂ ಹಾಕುತ್ತಾರೆ. ಹೊಟ್ಟೆಗಾಗಿ ದಿನವಿಡೀ ದುಡಿಯುವ ಹೆಣ್ಣುಮಕ್ಕಳು ಕೂಡ ಕಸೂತಿಯೆಂದರೆ ಬಹಳ ಆಶೆಪಡುತ್ತಾರೆ. ಇದನ್ನು ಕೈಗಾರಿಕೆಯ ಉದ್ಯೋಗವೆಂದೇ ಕೈಕೊಳ್ಳಬೇಕೆಂದರೆ, ದುಡಿಮೆಗೆ ತಕ್ಕಂತೆ ಇದರಿಂದ ಫಲದೊರೆಯದು. ಗಿರಣಿ ಬಟ್ಟೆ, ಮಗ್ಗದ ಬಟ್ಟೆಗಳು ಕಡಿಮೆ ಬೆಲೆಗೆ ಸಿಗುತ್ತಿರುವಾಗ, ಮಧ್ಯಮವರ್ಗದವರು, ಬಡವರು, ಈ ಉದ್ಯೋಗಕ್ಕೆ ಹೇಗೆ ಪ್ರೋತ್ಸಾಹ ಕೊಡಬಲ್ಲರು ? ನಾಡಿನ ಲಂಬಾಣಿಗರ ನಿತ್ಯದ ಉಡುಪನ್ನೇ ನೋಡಿದರೆ, ಮಣಿಕಸೂತಿ, ಕನ್ನಡಿ ಕೂಡಿಸುವದು, ಇನ್ನುಳಿದ ಕಸೂತಿಗಳಿಂದ ಅದು ಅಲಂಕೃತವಾಗಿರುತ್ತದೆ. ಕಸೂತಿಯ ಕಲೆಗೂ, ಸಿರಿವಂತಿಕೆಗೂ ಸಂಬಂಧವೇ ಇಲ್ಲವೇನೋ ಎನಿಸುತ್ತದೆ !

ಬಹುಪುರಾತನ ಕಾಲದಿಂದಲೂ ನಡೆದುಬಂದಿರುವ ನಮ್ಮ ನಾಡಿನ ಕಸೂತಿಯ ಕಲೆ, ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಂಡು ಬದುಕಬೇಕಾದರೆ, ನಾಡಿನ ಸಹೃದಯರು, ಸಿರಿವಂತರು ಪ್ರೋತ್ಸಾಹ ಕೊಡುವದು ಅವಶವಾದುದು; ಅದು ನಮ್ಮ ಹೆಮ್ಮೆಯ ವಿಷಯ.

---

## ಪ್ರಕರಣ ೫

# (೧) ಕಟ್‌ವರ್ಕ [ಕತ್ತರಿಸಿದ ಕಸೂತಿ]

ಈ ಕಸೂತಿಯಲ್ಲಿ, ಡಿಝಾಯಿನಿನ ಎಲ್ಲ ಭಾಗಗಳನ್ನೂ ತುಂಬುವ ತೊಂದರೆಯಿಲ್ಲ. ಒಳಭಾಗವನ್ನು ಕತ್ತರಿಸಿ ಕಸೂತಿಯು ಸೌಂದರ್ಯವನ್ನು ಉಂಟುಮಾಡುವದಿರುತ್ತದೆ. ಗುಂಡೀಮನಿ ಹೊಲಿಗೆ, ಎಳೆಹೊಲಿಗೆ, ಇವೆ ರಡೇ ಹೊಲಿಗೆಗಳು ಗೊತ್ತಿದ್ದರೆ ಸಾಕು; ಮೊದಲು ಚಿತ್ರದ ಬಾಹ್ಯರೇಷೆಯ ಸುತ್ತಲೂ ಎಳೆ ತುಂಬಿಕೊಂಡು, ಕಸೂತಿಯು ಕತ್ತರಿಯಿಂದ ಒಳಭಾಗವನ್ನು ಕತ್ತರಿಸಿ ಆ ಮೇಲೆ ಗುಂಡೀಮನೆ ಹೊಲಿಗೆಯಿಂದ ಗಟ್ಟಿಮಾಡಿಕೊಳ್ಳಬೇಕು. ಗುಂಡೀಮನೆಹೊಲಿಗೆಯನ್ನು ಮೊದಲು ಹಾಕಿ ಆ ಮೇಲೆಯೂ ಒಳಗಿನ ಭಾಗವನ್ನು ಕತ್ತರಿಸಬಹುದು. ಆದರೆ ಆಗ ಬಟ್ಟೆ ಸ್ವಲ್ಪ ಗುಂಜುಗುಂಜಾಗಿ ಕಂಡುಬರುವದು.

ಕಟ್‌ವರ್ಕ, ಇಟಲಿಯಿಂದ ಬಂದದ್ದು. ಕೇವಲ ಧಾರ್ಮಿಕ ಕಾರ್ಯ ಗಳಿಗಾಗಿ, ಈ ಕಸೂತಿಯು ಉಪಯೋಗ ಆಗ ಆಗುತ್ತಿದ್ದು, ಈಗ ಆ ಭೇದ ಭಾವವಾವುದೂ ಇಲ್ಲದೆ, ಎಲ್ಲೆಡೆಗೂ ಉಪಯೋಗಿಸಲ್ಪಡುತ್ತದೆ.

ಈ ಕಸೂತಿಗೆ, ಸ್ವಲ್ಪ ದೊಡ್ಡ ದೊಡ್ಡ ಎಲೆ, ಹೂಗಳುಳ್ಳ ಡಿಝಾ ಯಿನು ಅಥವಾ ಭೂಮಿತಿಗನುಸಾರವಾಗಿ ಪ್ರಮಾಣಬದ್ಧವಾದ ಡಿಝಾಯಿನು, ಒಳ್ಳೆಯದಾಗುತ್ತದೆ. ಬಟ್ಟೆಯ ಬಣ್ಣ, ಅದರ ಉಪಯೋಗ ಇವುಗಳನ್ನೆಲ್ಲ ನೋಡಿಕೊಂಡು ಕಟವರ್ಕಿಗೆ ಡಿಝಾಯಿನನ್ನು ಆರಿಸಬೇಕು. ಕಟವರ್ಕಿನ ಡಿಝಾಯಿನಿನಲ್ಲಿ ಎಲ್ಲ ಭಾಗಗಳು ಒಂದಕ್ಕೊಂದು ಅಂಟಿಕೊಂಡಿರಬೇಕು. ಇಲ್ಲದಿದ್ದರೆ ಕತ್ತರಿಸಿದಾಗ ಅವು ಆಧಾರವಿಲ್ಲದೆ ಬಿದ್ದುಬಿಡಬಹುದು.

ಕಟವರ್ಕ ಕಸೂತಿಗೆ ಎಲ್ಲದಕ್ಕಿಂತ ಪೋಪ್ಲಿನ್ ಬಟ್ಟೆಯೇ ಹೆಚ್ಚು ಉತ್ತಮ. ಬಟ್ಟೆ ತೀರ ಉರುಟಾಗಿದ್ದರೆ ಅಥವಾ ಸಿಲ್ಕಿನಂತಿದ್ದರೆ ಕತ್ತರಿಸಿದ ಮೇಲೆ ಗುಂಜಾಗಬಹುದು. ಇಂತಹ ಬಟ್ಟೆಯ ಮೇಲೆ ಚಿತ್ರವನ್ನು ಮೂಡಿಸಿ ಕೊಂಡು, ಬಾಹ್ಯರೇಷೆಗಳನ್ನೆಲ್ಲ ಮೇಲೆ ಮತ್ತೊಂದು ಗೆರೆಯಿಂದ ತಿದ್ದಿ

ಕೊಳ್ಳಬೇಕು. ಈ ಎರಡೂ ಗೆರೆಗಳ ನಡುವಿನ ಅಂತರ ಗುಂಡೀಮನೆ ಹೊಲಿಗೆಯ ಅಗಲವನ್ನು ಅವಲಂಬಿಸಿದೆ. ಈ ಅಂತರದಲ್ಲಿ ಮೊದಲು ಎಳೆಗಳನ್ನು ತುಂಬಿಕೊಂಡು ಆ ಮೇಲೆ ಗುಂಡೀಮನೆ ಹೊಲಿಗೆಯ ಗೋಪು ಈ ಭಾಗದ ಕಡೆಗೆ ಬಂದಿರುವಂತೆ ಹಾಕಬೇಕು. ಬಳಿಕ ಲಕ್ಷ್ಯದಿಂದ, ಕತ್ತರಿಸುವ ಭಾಗವನ್ನು ಕಸೂತಿಯ ಕತ್ತರಿಯಿಂದ ಅಂಚಿಗೆ ಹತ್ತಿ ಕತ್ತರಿಸಬೇಕು. ಆಚೆ-ಈಚೆ, ಹರಡಿದ ಎಳೆಗಳನ್ನು ಕತ್ತರಿಸಿ, ಒಂದು ದೇಟನ್ನೋ ಸುಳುವನ್ನೋ ಸೇರಿಸಬೇಕಾದಲ್ಲಿ ಸೇರಿಸಿ ಕಸೂತಿಯನ್ನು ಪೂರ್ಣಗೊಳಿಸಬೇಕು.

ಬಿಳಿಯ ಬಟ್ಟೆಯಲ್ಲಿ ಬಿಳಿಯ ರೇಶಿಮೆಯಿಂದಲೇ ಈ ಕಸೂತಿಯನ್ನು ಹಾಕಿದರೆ ಬಹಳ ಅಂದವಾಗಿ ಕಾಣುವದು. ಬೇರೆ ಬಣ್ಣಗಳ ರೇಶಿಮೆಯನ್ನು ಹಾಕುವದಾದರೂ, ಅವು ಛಾಯಾಪ್ರಧಾನವಾಗಿರಬೇಕು.

### (ಬ) ರೆನೆಸಾನ್ಸ ಕಟವರ್ಕ

ಕಟವರ್ಕಿನಲ್ಲಿಯೇ ಇದು ಮತ್ತೊಂದು ರೀತಿ. ಡಿಝಾಯಿನನ್ನು ಮೂಡಿಸಿಕೊಂಡು, ಬಾಹ್ಯರೇಷೆಯಲ್ಲಿ ಎಳೆಯನ್ನು ತುಂಬುವಾಗ ರೇಶಿಮೆಯ ಎಳೆಯನ್ನು ಈಚೆಯ ದಂಡೆಗೆ ತೆಗೆದುಕೊಂಡು ಅಲ್ಲಿ ಒಂದು ಸಣ್ಣ ಹೊಲಿಗೆ ಹಾಕಿ ಅಲ್ಲಿ ಗಟ್ಟಿ ಮಾಡಿಕೊಳ್ಳಬೇಕು. ಮತ್ತೆ ಹೀಗೆ ಮೂರು ಎಳೆಗಳನ್ನು ಬೇಕಾದರೂ ಹಾಕಿಕೊಳ್ಳಬಹುದು. ಅಥವಾ ಹಿಂದಿನ ಬಟ್ಟೆ ಬಹಳ ತಿಳುವಾಗಿದ್ದರೆ ಒಂದೇ ಎಳೆಯೂ ಸಾಕು. ಅಲ್ಲಿಂದ ಮುಂದೆ ಮತ್ತೆ ಬಾಹ್ಯರೇಷೆಯಲ್ಲಿಯ ಎಳೆಗಳನ್ನು ಹಾಕುತ್ತ ಬಂದು ಮತ್ತೆ ಸ್ವಲ್ಪ ಅಂತರದ ಮೇಲೆ ಉದ್ದಕ್ಕೂ ಅಂತಹ ಎಳೆಯನ್ನು ತೆಗೆದುಕೊಳ್ಳಬೇಕು. ಒಂದು ದೊಡ್ಡ ಹೂವಿನಲ್ಲಿ, ಬೇರೆ ಬೇರೆ ಪಕಳೆಗಳನ್ನು ಮಾಡಿ, ಇಂತಹ ಎಳೆಗಳನ್ನು ಉದ್ದಕ್ಕೂ ಅಡ್ಡಕೂ ಹಾಕಿಬಿಡಬಹುದು. ಇಂತಹ ಎಳೆಗಳಲ್ಲಿ, ಒಂದೊಂದನ್ನೇ ಹಾಕಿದ ಕೂಡಲೆ ಸುತ್ತಿದ ಹೊಲಿಗೆಯನ್ನು ಅವಕ್ಕೆ ಹಾಕಿಬಿಡಬೇಕು. ಒಂದೊಂದೇ ಎಳೆ ಇರದೆ, ಒಟ್ಟಿಗೇ ಮೂರು, ನಾಲ್ಕು ಕೂಡಿ ಬಂದಿದ್ದರೆ, ಅವುಗಳೆಲ್ಲಕ್ಕೂ ಗುಂಡೀಮನೆ ಹೊಲಿಗೆಯನ್ನು ಬೇಕಾದರೆ ಹಾಕಬಹುದು. ಹೀಗೆ ಹೂವಿನ ಪಕಳೆಯಲ್ಲಿ, ಜಾಳಿಗೆಯಂತೆ ಮನೆಗಳಾದ ಮೇಲೆ, ಬಾಹ್ಯರೇಷೆಯ ಸುತ್ತಲಿನ ಎಳೆಗಳ ಮೇಲೆ ಗುಂಡೀಮನೆ ಹೊಲಿಗೆ ಹಾಕಿ, ಆ ಜಾಳಿಗೆಯ ಹಿಂಭಾಗದ ಬಟ್ಟೆಯನ್ನು ಕಸೂತಿಯ ಕತ್ತರಿಯಿಂದ ಅಂಚಿಗೆ ಹೊಂದಿ ಕತ್ತರಿಸಿ

ಬಿಡಬೇಕು. ಆ ಆ ಬಣ್ಣಗಳಿಂದ ಇಂತಹ ಕಟವರ್ಕ ಮಾಡಿದರೆ, ಎಲೆ ಹೂಗಳು ಬಹಳ ಅಂದವಾಗಿ ಕಾಣುವವು.




ಚಿತ್ರದಲ್ಲಿ ತೋರಿಸಿದಂತೆ ಎಳೆಗಳನ್ನು ಅಷ್ಟಷ್ಟೇ ಅಂತರದಲ್ಲಿ ಉದ್ದಕ್ಕೆ ಮೆಟ್ಟಲುಗಳಂತೆ ಹಾಕಿ, ಹಿಂದಿನ ಬಟ್ಟೆಯನ್ನು ಕತ್ತರಿಸಿದರೆ, ಅದೇ ಲ್ಯಾಡರ ವರ್ಕ.

**(ಕ) ಡ್ರಾನ್ ಫ್ಯಾಬ್ರಿಕ್ ವರ್ಕ** (ಎಳೆ ಸರಿಸಿದ ಕಸೂತಿ)

ಕಟವರ್ಕಿನಲ್ಲಿ, ಚಿತ್ರದಲ್ಲಿಯ ಹಿಂಭಾಗದ ಬಟ್ಟೆಯನ್ನು ಕತ್ತರಿಯಿಂದ ಕತ್ತರಿಸುತ್ತೇವೆ. ಆದರೆ ಇಲ್ಲಿ ಕತ್ತರಿಸುವ ಬಟ್ಟೆಯ ಭಾಗ ಬಹಳ ಸಣ್ಣದು ಆದ್ದರಿಂದ ೨ ನಂಬರಿನ ಸೂಜಿಯಿಂದ, ಅಥವಾ ೧೮ ನಂಬರಿನ ಜಮಖಾನೆ ಸೂಜಿಯಿಂದ ಚುಚ್ಚಿ ಎಳೆಗಳನ್ನು ಬದಿಗೆ ಸರಿಸಿ, ಗುಂಡೀಮನೆ ಹೊಲಿಗೆಯನ್ನು ಸುತ್ತಲೂ ಹಾಕಿ ಗಟ್ಟಿಮಾಡಿಕೊಳ್ಳಬೇಕು. ಈ ರೀತಿಯ ಎಲೆ ಹೂಗಳು, ನಾಜೂಕಾಗಿ ಕಾಣುವವು.

**(ಡ) ಆಯ್‌ಲೆಟ್ ವರ್ಕ**

ಫ್ರಾನ್ಸದಲ್ಲಿ ಈ ಕಸೂತಿಯ ಬಳಕೆ ಹೆಚ್ಚು. ೧೯ ನೆಯ ಶತಮಾನದಲ್ಲಿ ಇಂಗ್ಲಂಡದಲ್ಲಿಯೂ ಈ ಕಸೂತಿ ಹೆಚ್ಚು ಲೋಕಪ್ರಿಯವಾಯಿತು. ಆದರೆ

ಕಣ್ಣಲ್ಲಿ ಕಣ್ಣಿಟ್ಟು ಈ ಕಸೂತಿಯನ್ನು ಹಾಕುವದು ಸ್ವಲ್ಪ ತೊಂದರೆ. ಯಂತ್ರದಲ್ಲಿ ತಯಾರಾದ ಆಯಲೆಟ್ ವರ್ಕಿನ ಮಾದರಿಗಳು ಸುಲಭವಾಗಿ




ದೊರೆಯಬಹುದ್ದಾರಿಂದ ಕೈ ಕಸೂತಿಯಲ್ಲಿ ಆಯ್‌ಲೆಟ್ ವರ್ಕ ಮಾಡುವದು ಸ್ವಲ್ಪ ಹಿಂದೆ ಬಿತ್ತು. ಆದರೆ ಕೈ ಕಸೂತಿಯಿಂದ ಹಾಕಿದ್ದಕ್ಕೆ ನಯ ಹೆಚ್ಚು.

ಪೋಪ್ಲಿನ್ ಬಟ್ಟೆಯ ಮೇಲೆ ( ಇದೇ, ಈ ಕಸೂತಿಗೆ ಹೆಚ್ಚು ಒಳ್ಳೆಯದು ), ಈ ಕಸೂತಿಯ ಡಿಝೈಯಿನಿನ ಗುರುತನ್ನು ಮಾಡಿಕೊಳ್ಳಬೇಕು. ಕತ್ತರಿಸುವ ಸ್ಥಳವನ್ನು ಬಿಟ್ಟು ಹೂವಿನಲ್ಲಿ, ಸುತ್ತಲೂ ಸ್ವಲ್ಪ ದೂರದಲ್ಲಿ ಪೆನ್ಸಿಲ್ಲಿನಿಂದ ಗುರುತುಮಾಡಿ, ಸ್ಟಿಲೆಟೋದಿಂದ ನಡುವಿನ ಭಾಗವನ್ನು ಚುಚ್ಚಿ ಬಿಡಬೇಕು. ಅಂದರೆ ಎಳೆಗಳೆಲ್ಲ ಬದಿಗೆ ಸರಿಯುವವು. ಆ ಮೇಲೆ ಸುತ್ತಲೂ ಗುಂಡೀಮನಿ ಹೊಲಿಗೆ, ಅಥವಾ ಸುತ್ತಿದ ಹೊಲಿಗೆ ಹಾಕಿದರೆ, ಅಂದವಾಗಿ ಹೂವಿನಂತೆ ಕಾಣುವದು. ಹೂವುಗಳು ಸಣ್ಣವಿದ್ದರೆ ಮಾತ್ರ ಸ್ಟಿಲೆಟೋದ ಉಪಯೋಗವಾಗಬಹುದು. ದೊಡ್ಡವಾಗಿದ್ದರೆ ಬಟ್ಟೆಯನ್ನು ಕತ್ತರಿಸಿಯೇ ತೆಗೆಯಬೇಕಾಗುತ್ತದೆ.

**ಶ್ಯಾಡೋ ಆಯಲೆಟ್ :** ಇದರಲ್ಲಿ ಇನ್ನೊಂದು ವಿಧ. ಆಯಲೆಟ್ ಕಸೂತಿಯಸುತ್ತು ಎರಡುಸಾಲು ಎಳೆಗಳನ್ನು ಹಾಕಿಕೊಂಡು, ಒಂದು ಬದಿಗೆ

ಮಾತ್ರ (ಅಂದರೆ ಅರ್ಧವರ್ತುಳ) ಇನ್ನು ನಾಲ್ಕು ಸುತ್ತು ಎಳೆಗಳನ್ನು ಹೆಚ್ಚು ಹಾಕಿಕೊಳ್ಳಬೇಕು. ಬಳಿಕ ನಡುವಿನ ಭಾಗವನ್ನು ಕತ್ತರಿಸಿ, ಶೇಡಿಂಗ ರೇಶಿಮೆಯಿಂದ ಸುತ್ತಲೂ ಸಾಟಿನ್ ಹೊಲಿಗೆ ಹಾಕಿದರೆ, ನಾಲ್ಕು ಸಾಲು ಎಳೆಯ ಭಾಗ ನೆರಳಿನಂತೆ ದಟ್ಟಾಗಿ ಕಾಣುವದು. ಇಂತಹ ಕಸೂತಿಯಲ್ಲಿ ವರ್ತುಲ ಅಥವಾ ತತ್ತಿಯ ಆಕಾರ—ಯಾವುದನ್ನು ಬೇಕಾದರೂ ಕೊಡಬಹುದು.

ಆಯಲೆಟ್ ಕಸೂತಿಯ ಸಣ್ಣ ಹೂವುಗಳ ಒಂದು ಸಾಲನ್ನೇ ಮಾಡಬೇಕಾದರೆ ನಡುನಡುವೆ ದಾರವನ್ನು ಹರಿಯದೆ, ಒಂದು ಹೂವಿನ ಮೇಲೆ ಇನ್ನೊಂದು ಹೂವನ್ನು ಚೆಲ್ಲಿದಂತೆ, ಎರಡು ಟಿಬ್ಬಿಗಳಿಂದ, ಎರಡನ್ನೂ ಜೋಡಿಸಿಬಿಡಬೇಕು. ಹೀಗಾದರೆ, ಸಣ್ಣ ಹೂವಿನ ಸಾಲು, ಫ್ರಾಕಿನ ತೋಳಿಗೆ, ಪರಕರ, ಟೇಬಲ್‌ಕ್ಲಾಥಗಳ ಅಂಚಿಗೆ ಬಹಳ ಅಂದವಾಗಿ ಕಾಣುವದು. ಈ ಕಟ್‌ವರ್ಕನ್ನೇ ಕಮಾನಿನಂತೆ, ಅಂಚಿಗೆ ಮಾಡಿದರೆ, ಅದಕ್ಕೇ, 'ಸ್ಕ್ಯಾಲಪಿಂಗ್' ಎಂದು ಹೇಳುವರು. ಕಟ್‌ವರ್ಕನ್ನು ಟೇಬಲ್‌ಕ್ಲಾಥಿನ ಮಧ್ಯದಲ್ಲಿ, ಮೂಲೆಗಳಲ್ಲಿ, ಪಡದೆಗಳ ಮೂಲೆಯಲ್ಲಿ, ರೇಡಿಯೋಕವ್ಹರ ಮೇಲೆ ಮಾಡಬಹುದು.

**ಸಾಧನಗಳು:** ಪೋಪ್ಲಿನ್ ಬಟ್ಟೆ, ೬—೭ ನಂಬರಿನ ಕೈಸೂಜಿ, ೨೫ ನಂ. ನ ಡಿ. ಎಮ್. ಸಿ. ರೇಶಿಮೆ, ಸ್ಟಿಲೆಟೋ, ಕಸೂತಿಯ ಕತ್ತರಿ, ರಿಂಗು ಇತ್ಯಾದಿ.

## ೨. ರೆಚೆಲೋ ಕಸೂತಿ

ರೆಚೆಲೋ ಕಸೂತಿಯೂ ಕಟವರ್ಕಿನ ಜಾತಿಯದೇ. ಆದರೆ ಕಟವರ್ಕಿನಲ್ಲಿ ಚಿತ್ರದ ಒಳಭಾಗವನ್ನು ಕತ್ತರಿಸುವದಾದರೆ, ಇಲ್ಲಿ ಹೊರಭಾಗವನ್ನು ಕತ್ತರಿಸುವದು. ಡ್ಯಾನಿಶ್ ಹೆಡೆಬೋ ಎಂಬ್ರೊಯಡರಿಯಂತೆ ಇದಾದರೂ ಕಾಣುತ್ತದೆ.

ಬಿಳಿಯ ಪೋಪ್ಲಿನ್ ಮೇಲೆ ಬಿಳಿಯ ರೇಶಿಮೆಯಿಂದ ಈ ಕಸೂತಿಯನ್ನು ಹಾಕಿದರೇ ಹೆಚ್ಚು ಅಂದವಾಗಿ ಕಾಣುವದು. ಇನ್ನುಳಿದ ಬಣ್ಣಗಳನ್ನು ಉಪಯೋಗಿಸುವದಾದರೆ, ಶೇಡಿಂಗ ರೇಶಿಮೆಗಳನ್ನೇ ಹಾಕಬೇಕು.

ಕಟವರ್ಕಿನ ಡಿಝಾಯಿನಿನಂತೆ, ಈ ಕಸೂತಿಗಾದರೂ ಡಿಝಾಯಿನು ದೊಡ್ಡದಾಗಿರಬೇಕು. ಒಳಗಿನ ಭಾಗಗಳು ಒಂದಕ್ಕೊಂದು ಅಂಟಿಕೊಂಡಿರ ಬೇಕು. ಇಲ್ಲದೇ ಹೋದರೆ, ನಾಲ್ಕೂ ಬದಿಗಳ ಆಧಾರವಿಲ್ಲದೆ, ಕಸೂತಿಯ ಒಳಭಾಗ ಹಾಗೇ ಹೊರಳಾಡಬಹುದು. ಡಿಝಾಯಿನಿಗೆ, ಹೊರಗಡೆಯಲ್ಲಿ ಚೌಕು ಅಥವಾ ವರ್ತುಲವನ್ನು ಸಾಟಿನ್ ಹೊಲಿಗೆಯಿಂದ ಹಾಕಿಕೊಂಡಿರ ಬೇಕು. ಡಿಝಾಯಿನಿನ ಭಾಗಗಳು ಈ ವರ್ತುಲದ ನಾಲ್ಕು ಬದಿಗಳಿಗೂ ಅಂಟಿಕೊಂಡಿರಬೇಕು.

ಪ್ರೋಪ್ಲಿನ್ ಬಟ್ಟೆಯ ಮೇಲೆ ಡಿಝಾಯಿನನ್ನು ಮೂಡಿಸಿಕೊಂಡು, ಆ ಬಾಹ್ಯರೇಷೆಗಳ ಸುತ್ತಲೂ, ⅛ ಇಂಚಿನ ಅಂತರದ ಮೇಲೆ ಮತ್ತೊಂದು ಬಾಹ್ಯರೇಷೆಯನ್ನು ಹಾಕಬೇಕು. ಇದು ಕೇವಲ ಗುಂಡೀಮನೆ ಹೊಲಿಗೆಯ ಅಂತರಕ್ಕಾಗಿ. ಈ ಅಂತರದಲ್ಲಿ ಮೊದಲು ಎಳೆಗಳನ್ನು ಹಾಕಿಕೊಂಡು ಬಳಿಕ ಗುಂಡೀಮನೆ ಹೊಲಿಗೆಯನ್ನು ಹಾಕಬೇಕು. ಕಟವರ್ಕಿನಲ್ಲಿ ಈ ಹೊಲಿಗೆಯ ಗೋಪು ಒಳಗಡೆಗಿದ್ದರೆ (ಯಾಕಂದರೆ ಆಗ ಎಲೆ ಹೂಗಳ ಒಳಭಾಗವನ್ನು ಕತ್ತರಿಸುವದಿರುತ್ತದೆ), ಈಗ ಅದು ಹೊರಗಡೆಗಿರುತ್ತದೆ. ಆಮೇಲೆ, ಸಾಟಿನ್ ಹೊಲಿಗೆ ಅಥವಾ ಸುತ್ತಿದ ಹೊಲಿಗೆಯ ಸುಳುವುಗಳಿಂದ ಎಲ್ಲ ಭಾಗಗಳನ್ನೂ ಅಂಟಿಸಬೇಕು. ಡಿಝಾಯಿನ್ ಇಲ್ಲದ ಭಾಗವನ್ನು ಅಂಚಿಗೆ ಹತ್ತಿ ಕತ್ತರಿಸ ಬೇಕು.

ರಿಚೆಲೋ ಕಸೂತಿಯಲ್ಲಿ ಎಲೆ ಹೂಗಳಷ್ಟೇ ಹವೆಯಲ್ಲಿದ್ದಂತೆ ಕಾಣು ವವು. ಪ್ರಮಾಣ ಬದ್ಧ ಭೂಮಿತಿಯ ಆಕೃತಿಗಳನ್ನೂ ಇದರಲ್ಲಿ ಹಾಕ ಬಹುದು.

ಈ ಕಸೂತಿಯನ್ನು ಟೇಬಲ್ ಕ್ಲಾಥ, ರೇಡಿಯೋ ಕವ್ಹರ ಇತ್ಯಾದಿಗಳ ಮೇಲೆ ಹಾಕಬಹುದು.

**ಸಾಧನಗಳು** : ಪ್ರೋಪ್ಲಿನ್ ಬಟ್ಟೆ, ರಿಂಗು, ಶೇಡಿಂಗ ರೇಶಿಮೆ, ಕೈಸೂಜಿ, ಕತ್ತರಿ ಇತ್ಯಾದಿ.

# ೩. ಶ್ಯಾಡೋ ಯಂಬ್ರೋಯಡರಿ

ಒಂದೆರಡು ಹೊಲಿಗೆಗಳು, ಉದಾಹರಣೆಗೆ ಟಿಬ್ಬಿ ಜೋಡು ಟಿಬ್ಬಿಗಳು ಗೊತ್ತಿದ್ದರೆ ಸಾಕು, ಈ ಕಸೂತಿಯನ್ನು ಹಾಕಬಹುದು—ಅಥವಾ ಬಾಗಡೀ ಹೊಲಿಗೆಯನ್ನು ಒಂದಕ್ಕೊಂದು ಹೊಂದಿಕೊಂಡಂತೆ ಹಾಕಲು ಬಂದರೂ ಸಾಕು. ಈ ಕಸೂತಿಗೆ ಆರ್ಗಂಡಿ, ವಾಯಿಲಿನಂತಹ ತಿಳುವಾದ ಬಟ್ಟೆಯೇ ಬೇಕು. ಇದರಿಂದ ಹಿಂಬದಿಗೆ ಬಂದ ದಟ್ಟವಾದ ರೇಶಿಮೆಯ ನೆರಳು ಮೇಲ್ಭಾಗದಲ್ಲಿ ಕಾಣುವದು. ದೀಪದ ಬೆಳಕು ಹಿನ್ನೆಲೆಯಲ್ಲಿದ್ದರೆ, ಕಸೂತಿಯ ನೆರಳು ಹೆಚ್ಚು ಸ್ಪಷ್ಟವಾಗಿ ನಯವಾಗಿ ಕಾಣಿಸುವದು.



ನಮ್ಮಲ್ಲಿ ಈ ಕಸೂತಿ ಬಹಳ ಹಿಂದಿನದಿದ್ದರೂ, ಅಂದಿಗೂ ಇಂದಿಗೂ ವ್ಯತ್ಯಾಸವಿದೆ. ಈ ಕಸೂತಿಗೆ ಬರೀ ಬಟ್ಟೆ ತಿಳುವಾಗಿದ್ದರೆ ಸಾಲದು. ಬಟ್ಟೆಯ ಬಣ್ಣವೂ ತಿಳಿಯಾಗಿರಬೇಕು. ಆಗ ದಟ್ಟಾದ ಬಣ್ಣದ ರೇಶಿಮೆಯಿಂದ ಈ ಕಸೂತಿಹಾಕಿದರೆ, ನೆರಳು ಸುಂದರವಾಗಿ ಕಾಣುವದು. ಇಲೆಕ್ಟ್ರಿಕ್ ದೀಪದ ಮೇಲ್ಗಡೆಗೆ, ಅಥವಾ ಟೀ ಟೇಬಲ್ಲಿನ ಮೇಲೆ, ವಿಶೇಷವಾಗಿ ಬಿಳೀ ಹಿನ್ನೆಲೆಯಲ್ಲಿ ಈ ಕಸೂತಿಯ ಶೋಭೆ ಕಂಡುಬರುವದು.

ರಂಗೋಲಿಯಂತಹ ಚಿತ್ರಗಳನ್ನು ಈ ಕಸೂತಿಗೆ ಉಪಯೋಗಿಸಬಹುದಾದರೂ, ಎಲೆ ಹೂಗಳೇ ಹೆಚ್ಚು ಸುಂದರವಾಗಿ ಇಲ್ಲಿ ಕಾಣುವವು.

ಈ ಕಸೂತಿಯನ್ನು ಮೂಡಿಸಿಕೊಳ್ಳಬೇಕಾದರೆ ಬಟ್ಟೆಯ ಹಿಂಬದಿಗೇ ಪೆನ್ಸಿಲ್ಲಿನಿಂದ ಬಾಹ್ಯರೇಷೆಗಳನ್ನು ಗುರುತಿಸಿಕೊಳ್ಳಬೇಕು. ಆಮೇಲೆ ಡಿ. ಎಮ್. ಸಿ. ಎರಡೆಳೆ ರೇಶಿಮೆಯಿಂದ ಮೇಲೆ ಜೋಡು ಟಿಬ್ಬಿಯನ್ನಾಗಲೀ ಅಥವಾ ಹಿಂದಿನಿಂದ ದಟ್ಟವಾಗಿ ಬುಗಡೀ ಹೊಲಿಗೆಯನ್ನಾಗಲೀ ಹಾಕಬೇಕು. ಯಾವ ರೀತಿಯಿಂದ ಹಾಕಿದರೂ ಅಷ್ಟೇ. ಶ್ಯಾಡೋವರ್ಕ ಮೊದಲು ಪ್ರಾರಂಭಿಸುವವರು ಎರಡೂ ರೀತಿಯಲ್ಲಿ ಹಾಕಿ ನೋಡಬಹುದು. ದೇಟು, ಸುಳಿವುಗಳನ್ನು ತುಂಬುವದಾದರೆ, ದೇಟಿನ ಹೊಲಿಗೆಯಿಂದ ಮೇಲೆಯೇ ತುಂಬಬಹುದು. ಹಿಂಭಾಗದಲ್ಲಿ ತುಂಬಿದ ಎಲೆಯಲ್ಲಿ ಸಿರಗಳನ್ನು ತೋರಿಸುವದಾದರೆ, ಎಲೆಯನ್ನು ಅಷ್ಟಷ್ಟೇ ಭಾಗವಾಗಿ ಮಾಡಿ, ಹಾಕಬಹುದು.

ಹಿಂದಿನ ಕಾಲದಲ್ಲಿ ಈ ಕಸೂತಿಗೆ ಕತ್ತರಿಯಂತಹ ಈ ಬುಗಡೀ ಹೊಲಿಗೆಯನ್ನು ಹಾಕದೆ, ಝಿಗಝಾಗಿನಂತೆ ಎರಡೂ ಬದಿಗೆ ಎಳೆಗಳನ್ನು ತುಂಬುತ್ತಿದ್ದರು. ಒಂದೊಂದು ಸಲ ಅಲ್ಲಿ ಎಳೆಗಳು ಸಡಿಲುಬೀಳುತ್ತಿದ್ದವು. ಬುಗಡೀಹೊಲಿಗೆಯಲ್ಲಿ ಇದಾವ ತೊಂದರೆಯೂ ಇಲ್ಲ.

ಕಸೂತಿ ಹಾಕುವದು ಮುಗಿದ ಮೇಲೆ, ದೀಪದ ಬೆಳಕಿಗೆ ಹಿಡಿದು, ಅನವಶ್ಯಕವಾದ ರೇಶಿಮೆಯ ತುಂಡುಗಳನ್ನೆಲ್ಲ ಕತ್ತರಿಸಿಬಿಡಬೇಕು. ಆಮೇಲೆ ಹಿಂಬದಿಗೆ ಹೊರಳಿಸಿ, ಇಸ್ತ್ರಿಯನ್ನಿಟ್ಟು ಒತ್ತಬೇಕು, ಅತ್ತಿತ್ತ ಸರಿಸಬಾರದು. ಇದರಿಂದ ರೇಶಿಮೆ ಎಳೆಗಳು ಹೊಂದಿಕೊಂಡು ಕೂಡುವವು.

**ಸಾಧನಗಳು** : ಆರ್ಗಂಡಿ (ವಾಯಿಲ್), ದಟ್ಟ ಬಣ್ಣದ ರೇಶಿಮೆ, ೪–೫ ಕ್ಕೆ ಸೂಜಿ, ಕಸೂತಿಯ ಕತ್ತರಿ.

## ೪. ಜಾಳಿಗೆಯ ಕಸೂತಿ (ನೆಟವರ್ಕ)

ಜಾಳಿಗೆಯ ಕಸೂತಿ ಕಾಣಲು ಕಠಿಣವಾಗಿ ಕಂಡರೂ, ಹಾಕಲು ಬಹಳ ಸುಲಭವಾಗಿದೆ. ನಾಲ್ಕಾರು ಹೊಲಿಗೆಗಳು ಗೊತ್ತಿದ್ದರೂ ಅದನ್ನು ಸಹಜವಾಗಿ ಹಾಕಬಹುದು. ಈ ಕಸೂತಿ ಹೆಣೆದ ಲೇಸಿನಂತೆ ಕಾಣುವದು.

ಜಾಳಿಗೆಯು ಯಂತ್ರದಲ್ಲಿ ಸಿದ್ಧವಾಗಿ ಬರುವದಕ್ಕೆ ಮೊದಲು, ಕೈಯಿಂದಲೇ ತಯಾರಿಸಲ್ಪಡುತ್ತಿತ್ತು. ಆಗ ಕೇವಲ ಅಂಚಿಗೆ ಮಾತ್ರ ಉಪಯೋಗಿಸಲ್ಪಡುತ್ತಿತ್ತು. ಆದರೆ ಯಂತ್ರದ ಶೋಧದಿಂದಾಗಿ ಈಗ ಜಾಳಿಗೆಯು ದೊಡ



ಪ್ರಮಾಣದಲ್ಲಿ ಉಪಯೋಗಿಸಲ್ಪಡುತ್ತದೆ. ಕೈಲಿ ಹೆಣೆದ ಜಾಳಿಗೆ, ಕೆಲವೇ ಪ್ರಸಂಗಗಳಲ್ಲಿ ಬಹಳ ಮರ್ಯಾದೆಯಿಂದ ಹೊರಗೆ ಬರುತ್ತದೆ, ಉದಾಹರಣೆಗೆ ವಧುವಿನ ಅವಗುಂಠನ ( ಬುರುಕೆ ) ವನ್ನು ನೋಡಬಹುದು. ಯಂತ್ರದ ಜಾಳಿಗೆ ನಾಜೂಕಾಗಿದ್ದರೂ ಬಿರುಸಾಗಿರುವದರಿಂದ, ಕಾಲರ, ಕಫ್, ಮೊದಲಾದವುಗಳಿಗೆ ಉಪಯುಕ್ತವಿದೆ.

ಜಾಳಿಗೆಯ ಕಸೂತಿಗೆ ಸೂಜಿ ಸ್ವಲ್ಪ ಉದ್ದವಾಗಿದ್ದರೆ ನೆಟ್ಟಗೆ. ರೇಶಿಮೆ ಉಳಿದ ಕಸೂತಿಗೆ ಹಾಕುವಂತಹದೇ. ಬಿಳೀ ಜಾಳಿಗೆಯಲ್ಲಿ ಬಿಳೀ ರೇಶಿಮೆಯಿಂದ ಕಸೂತಿ ಹಾಕುವ ರೂಢಿಯಿದ್ದರೂ, ಕಾಫೀ ಬಣ್ಣದ ಜಾಳಿಗೆಯಲ್ಲಿ, ಅಥವಾ ಹಸಿರಿನಲ್ಲಿ, ಬಿಳೀರೇಶಿಮೆಯಿಂದ ಹಾಕುವದೂ ಪ್ರಚಾರದಲ್ಲಿದೆ.

ಜಾಳಿಗೆಯ ಕಸೂತಿಯನ್ನು ಹಾಕುವಾಗ, ಜಾಳಿಗೆಯನ್ನು ಮೊದಲು ಕಟ್ಟಿಗೆಯ ಚೌಕಟ್ಟಿನಲ್ಲಿ ಕೂಡಿಸಬೇಕು. ಕೂಡಿಸುವಾಗ ಸುತ್ತಲೂ ಮೆತ್ತನ್ನ ಬಟ್ಟೆಯನ್ನು ಅಥವಾ ಕಾಗದವನ್ನು ಕಟ್ಟಿಗೆಯ ಎರಡೂ ಪಟ್ಟಿಗಳ ನಡುವೆ

ಸೇರಿಸಿ ಜಾಳಿಗೆಯನ್ನು ಕೂಡಿಸಬೇಕು. ಆಮೇಲೆ ಡಿಝೈನಿನನ್ನು ಮೂಡಿಸಿ ಕೊಳ್ಳಬೇಕಾದರೆ, ಒಂದು ದಪ್ಪವಾದ ಬಟ್ಟೆಯ ಮೇಲೆ (ಅಥವಾ ಕಾಗದದ ಮೇಲೆ) ಮಸಿಯಿಂದ ಡಿಝೈನಿನನ್ನು ಮೂಡಿಸಿ, ಜಾಳಿಗೆಯ ಕೆಳಗೆ ಗುಂಡು ಸೂಜಿಗಳಿಂದ ಗಟ್ಟಿಯಾಗಿ ಕೂಡಿಸಬೇಕು. ಜಾಳಿಗೆಯಲ್ಲಿ ಬಾಹ್ಯ ರೇಷೆಗಳನ್ನು ತುಂಬುವಾಗ ಜೋಡು ಎಳೆಗಳಿಂದ ತುಂಬಬೇಕು. ತುಂಬು ವಾಗ ಕೆಳಗಿನ ಬಟ್ಟೆಯಲ್ಲಿ ಸೂಜಿ ಸೇರಬಾರದು. ಎಳೆಗಳು ಜಾಳಿಗೆಯ ಪ್ರತಿ ಎರಡು ತೂತುಗಳಲ್ಲೂ ಕೆಳಗೆ ಮೇಲೆ ಹಾಯಬೇಕು. ಎಳೆಗಳನ್ನು ಜಗ್ಗಬಾರದು. ಜಗ್ಗಿದರೆ ಡಿಝೈನಿನ ಆಕಾರವೇ ಕೆಟ್ಟು ಹೋಗುವದು. ನಡುವೆಯೇ ರೇಶಿಮೆ ತೀರಿದರೆ, ಕೆಳಗೆ ಎಳೆದುಕೊಂಡು ಕಾಣದಂತೆ ಹಿಂಬ ದಿಗೆ ಮಣಿಸಿ, ಹೊಸ ಎಳೆಗಳನ್ನು ಹಾಕಬೇಕು.

ಜಾಳಿಗೆಯಲ್ಲಿ ಗುಂಡೀಮನೆ ಹೊಲಿಗೆ, ಸುತ್ತಿದ ಹೊಲಿಗೆಗಳನ್ನು ಹಾಕ ಬಹುದಾದರೂ, ಬರೀ ಎಳೆಗಳಿಂದ ಕೂಡ, ಜಾಳಿಗೆಯ ಕಸೂತಿ ಸುಂದರ ವಾಗಿ ಕಾಣುವದು. ಕಸೂತಿ ಹಾಕುವದು ಮುಗಿದ ಮೇಲೆ, ಕೆಳಗಿನ ಬಟ್ಟೆ ಯನ್ನು ಮೆಲ್ಲಗೆ ಬಿಡಿಸಿ, ಆಮೇಲೆ ಜಾಗರೂಕತೆಯಿಂದ ಜಾಳಿಗೆಯನ್ನು ಬಿಡಿಸಬೇಕು.

**ಸಾಧನಗಳು**: ಬಣ್ಣದಜಾಳಿಗೆ, ರೇಶಿಮೆ, ದಪ್ಪಬಟ್ಟೆ, ಕತ್ತರಿ, ದೊಡ್ಡ ಸೂಜಿ ಇತ್ಯಾದಿ.

## ೫. ಜೋಡಣೆಯ ಕಸೂತಿ (ಪ್ಯಾಚ ವರ್ಕ)

ಬಟ್ಟೆಯ ಅಲ್ಪ ಸ್ವಲ್ಪ ತುಂಡುಗಳನ್ನೂ ಕೆಡಿಸದಂತೆ, ಯೋಗ್ಯರೀತಿ ಯಲ್ಲಿ ಅವುಗಳ ಉಪಯೋಗವನ್ನು ಈ ಜೋಡಣೆಯ ಕಸೂತಿಯಲ್ಲಿ ಮಾಡ ಬಹುದು. ಬಟ್ಟೆಯ ಕೊರತೆಯಿದ್ದಾಗ, ಅವಶ್ಯಕತೆಯ ಮೂಲಕ ಬಂದಿರ ಬಹುದಾದ ಈ ಕಸೂತಿ, ಈಗ ಸೌಂದರ್ಯ ಕಲೆಗಳ ದೃಷ್ಟಿಯಿಂದ ಕೂಡಿದ್ದಾಗಿದೆ. ಸುಂದರವಾದ ಬಟ್ಟೆಯ ಸಣ್ಣ ತುಂಡುಗಳನ್ನು ಚೆಲ್ಲಿಕೊಡದೆ ಈ ಅಂದವಾದ ಕಸೂತಿಯನ್ನು ಹಾಕಬಹುದು. ಆಕರ್ಷಕವಾಗುವಂತೆ ತುಂಡುಗಳನ್ನು ಹೊಂದಿಸಿ, ತಲೆದಿಂಬಿನ ಚೀಲ, ಕೈಚೀಲ, ಜಾಕೆಟ,

ಜಾಳಿಗೆಯು ಯಂತ್ರದಲ್ಲಿ ಸಿದ್ಧವಾಗಿ ಬರುವದಕ್ಕೆ ಮೊದಲು, ಕೈಯಿಂದಲೇ ತಯಾರಿಸಲ್ಪಡುತ್ತಿತ್ತು. ಆಗ ಕೇವಲ ಅಂಚಿಗೆ ಮಾತ್ರ ಉಪಯೋಗಿಸಲ್ಪಡುತ್ತಿತ್ತು. ಆದರೆ ಯಂತ್ರದ ಶೋಧದಿಂದಾಗಿ ಈಗ ಜಾಳಿಗೆಯು ದೊಡ್ಡ



ಪ್ರಮಾಣದಲ್ಲಿ ಉಪಯೋಗಿಸಲ್ಪಡುತ್ತದೆ. ಕೈಲಿ ಹೆಣೆದ ಜಾಳಿಗೆ, ಕೆಲವೇ ಪ್ರಸಂಗಗಳಲ್ಲಿ ಬಹಳ ಮರ್ಯಾದೆಯಿಂದ ಹೊರಗೆ ಬರುತ್ತದೆ, ಉದಾಹರಣೆಗೆ ವಧುವಿನ ಅವಗುಂಠನ ( ಬುರುಕೆ ) ವನ್ನು ನೋಡಬಹುದು. ಯಂತ್ರದ ಜಾಳಿಗೆ ನಾಜೂಕಾಗಿದ್ದರೂ ಬಿರುಸಾಗಿರುವದರಿಂದ, ಕಾಲರ, ಕಫ್, ಮೊದಲಾದವುಗಳಿಗೆ ಉಪಯುಕ್ತವಿದೆ.

ಜಾಳಿಗೆಯ ಕಸೂತಿಗೆ ಸೂಜಿ ಸ್ವಲ್ಪ ಉದ್ದವಾಗಿದ್ದರೆ ನೆಟ್ಟಗೆ. ರೇಶಿಮೆ ಉಳಿದ ಕಸೂತಿಗೆ ಹಾಕುವಂತಹದೇ. ಬಿಳೀ ಜಾಳಿಗೆಯಲ್ಲಿ ಬಿಳೀ ರೇಶಿಮೆಯಿಂದ ಕಸೂತಿ ಹಾಕುವ ರೂಢಿಯಿದ್ದರೂ, ಕಾಫೀ ಬಣ್ಣದ ಜಾಳಿಗೆಯಲ್ಲಿ, ಅಥವಾ ಹಸಿರಿನಲ್ಲಿ, ಬಿಳೀರೇಶಿಮೆಯಿಂದ ಹಾಕುವದೂ ಪ್ರಚಾರದಲ್ಲಿದೆ.

ಜಾಳಿಗೆಯ ಕಸೂತಿಯನ್ನು ಹಾಕುವಾಗ, ಜಾಳಿಗೆಯನ್ನು ಮೊದಲು ಕಟ್ಟಿಗೆಯ ಚೌಕಟ್ಟಿನಲ್ಲಿ ಕೂಡಿಸಬೇಕು. ಕೂಡಿಸುವಾಗ ಸುತ್ತಲೂ ಮೆತ್ತನ್ನ ಬಟ್ಟೆಯನ್ನು ಅಥವಾ ಕಾಗದವನ್ನು ಕಟ್ಟಿಗೆಯ ಎರಡೂ ಪಟ್ಟಿಗಳ ನಡುವೆ

ಸೇರಿಸಿ ಜಾಳಿಗೆಯನ್ನು ಕೂಡಿಸಬೇಕು. ಆಮೇಲೆ ಡಿಝೈನಾಯಿನನ್ನು ಮೂಡಿಸಿ ಕೊಳ್ಳಬೇಕಾದರೆ, ಒಂದು ದಪ್ಪವಾದ ಬಟ್ಟೆಯ ಮೇಲೆ (ಅಥವಾ ಕಾಗದದ ಮೇಲೆ) ಮಸಿಯಿಂದ ಡಿಝೈನಾಯಿನನ್ನು ಮೂಡಿಸಿ, ಜಾಳಿಗೆಯ ಕೆಳಗೆ ಗುಂಡು ಸೂಜಿಗಳಿಂದ ಗಟ್ಟಿಯಾಗಿ ಕೂಡಿಸಬೇಕು. ಜಾಳಿಗೆಯಲ್ಲಿ ಬಾಹ್ಯ ರೇಷೆಗಳನ್ನು ತುಂಬುವಾಗ ಜೋಡು ಎಳೆಗಳಿಂದ ತುಂಬಬೇಕು. ತುಂಬು ವಾಗ ಕೆಳಗಿನ ಬಟ್ಟೆಯಲ್ಲಿ ಸೂಜಿ ಸೇರಬಾರದು. ಎಳೆಗಳು ಜಾಳಿಗೆಯ ಪ್ರತಿ ಎರಡು ತೂತುಗಳಲ್ಲೂ ಕೆಳಗೆ ಮೇಲೆ ಹಾಯಬೇಕು. ಎಳೆಗಳನ್ನು ಜಗ್ಗಬಾರದು. ಜಗ್ಗಿದರೆ ಡಿಝೈನಾಯಿನಿನ ಆಕಾರವೇ ಕೆಟ್ಟು ಹೋಗುವದು. ನಡುವೆಯೇ ರೇಶಿಮೆ ತೀರಿದರೆ, ಕೆಳಗೆ ಎಳೆದುಕೊಂಡು ಕಾಣದಂತೆ ಹಿಂಬ ದಿಗೆ ಮಣಿಸಿ, ಹೊಸ ಎಳೆಗಳನ್ನು ಹಾಕಬೇಕು.

ಜಾಳಿಗೆಯಲ್ಲಿ ಗುಂಡೀಮನೆ ಹೊಲಿಗೆ, ಸುತ್ತಿದ ಹೊಲಿಗೆಗಳನ್ನು ಹಾಕ ಬಹುದಾದರೂ, ಬರೀ ಎಳೆಗಳಿಂದ ಕೂಡ, ಜಾಳಿಗೆಯ ಕಸೂತಿ ಸುಂದರ ವಾಗಿ ಕಾಣುವದು. ಕಸೂತಿ ಹಾಕುವದು ಮುಗಿದ ಮೇಲೆ, ಕೆಳಗಿನ ಬಟ್ಟೆ ಯನ್ನು ಮೆಲ್ಲಗೆ ಬಿಡಿಸಿ, ಆಮೇಲೆ ಜಾಗರೂಕತೆಯಿಂದ ಜಾಳಿಗೆಯನ್ನು ಬಿಡಿಸಬೇಕು.

**ಸಾಧನಗಳು**: ಬಣ್ಣದಜಾಳಿಗೆ, ರೇಶಿಮೆ, ದಪ್ಪಬಟ್ಟೆ, ಕತ್ತರಿ, ದೊಡ್ಡ ಸೂಜಿ ಇತ್ಯಾದಿ.

## ೫. ಜೋಡಣೆಯ ಕಸೂತಿ (ಪ್ಯಾಚ ವರ್ಕ)

ಬಟ್ಟೆಯ ಅಲ್ಪ ಸ್ವಲ್ಪ ತುಂಡುಗಳನ್ನೂ ಕೆಡಿಸದಂತೆ, ಯೋಗ್ಯರೀತಿ ಯಲ್ಲಿ ಅವುಗಳ ಉಪಯೋಗವನ್ನು ಈ ಜೋಡಣೆಯ ಕಸೂತಿಯಲ್ಲಿ ಮಾಡ ಬಹುದು. ಬಟ್ಟೆಯ ಕೊರತೆಯಿದ್ದಾಗ, ಅವಶ್ಯಕತೆಯ ಮೂಲಕ ಬಂದಿರ ಬಹುದಾದ ಈ ಕಸೂತಿ, ಈಗ ಸೌಂದರ್ಯ ಕಲೆಗಳ ದೃಷ್ಟಿಯಿಂದ ಕೂಡಿದ್ದಾಗಿದೆ. ಸುಂದರವಾದ ಬಟ್ಟೆಯ ಸಣ್ಣ ತುಂಡುಗಳನ್ನು ಚೆಲ್ಲಿಕೊಡದೆ ಈ ಅಂದವಾದ ಕಸೂತಿಯನ್ನು ಹಾಕಬಹುದು. ಆಕರ್ಷಕವಾಗುವಂತೆ ತುಂಡುಗಳನ್ನು ಹೊಂದಿಸಿ, ತಲೆದಿಂಬಿನ ಚೀಲ, ಕೈಚೀಲ, ಜಾಕೆಟ,



ಹೊಲಿಗೆಯ ಚೀಲ, ಬಾಗಿಲು ಪಡದೆ— ಇವೇ ಮೊದಲಾದವುಗಳನ್ನು ಮಾಡಬಹುದು.

ಈ ಕಸೂತಿಯನ್ನೂ ಅನುಕೂಲದಂತೆ, ಎರಡು ವಿಧದಲ್ಲಿ ಮಾಡಬಹುದು. ಒಂದು, ಇದ್ದಬಿದ್ದ ಹೊಸಬಟ್ಟೆಯ ತುಂಡುಗಳನ್ನೆಲ್ಲ ಜೋಡಿಸಿ, ಕೆಳಗೆ ಅದಕ್ಕೆ ಆಧಾರವಾಗಿ, ಮತ್ತೊಂದು ದಪ್ಪ ಬಟ್ಟೆಯನ್ನು ಕೊಟ್ಟು ಜೋಡಿಸಬಹುದು. ಇಲ್ಲಿ ತುಂಡುಗಳ ಆಕಾರ ಹೇಗಿದ್ದರೂ ಸರಿ. ಬಣ್ಣಗಳ ಬೆರಕೆಯಲ್ಲಿಯೂ ಯಾವದೇ ವಿಧವಾದ ನಿರ್ಬಂಧವಿಲ್ಲ. ಇದನ್ನೇ ನಮ್ಮಲ್ಲಿ, 'ಕೌದಿ' ಎಂದು ಹೇಳುವರು. ಹಳೆಯ ಬಟ್ಟೆಗಳಿಂದ ಇದನ್ನು ತಯಾರಿಸಿದರೂ, ಒಳ್ಳೇ ಬೆಚ್ಚಗಾಗುವದೆಂಬುದು ನಮ್ಮ ಜನರ ಅನುಭವ.

ಇನ್ನೊಂದು ವಿಧದ ಜೋಡಣೆಯ ಕಸೂತಿಯೆಂದರೆ, ವಿಶಿಷ್ಟ ಆಕಾರದಲ್ಲಿ, ವಿಶಿಷ್ಟ ಬಣ್ಣದಲ್ಲಿ ಬಟ್ಟೆಯ ತುಂಡುಗಳನ್ನು ಜೋಡಿಸುವದು.



ಉದಾಹರಣೆಗೆ ಮೇಲಿನ ಆಕೃತಿಯನ್ನು ನೋಡಬಹುದು. ಇಲ್ಲಿ ಬಾಲಕನ ಶರ್ಟ, ಚಡ್ಡಿಗಳಿಗೆ ಪ್ಯಾಚವರ್ಕ ಮಾಡಿ, ಉಳಿದ ಭಾಗವನ್ನು ರೇಶಿಮೆ ಯಿಂದ ತುಂಬಬಹುದು. ರಂಗೋಲಿಯಂತೆ, ಪದ್ಮ, ಸ್ವಸ್ತಿಕ ಮೊದಲಾದ ಆಕಾರದಲ್ಲಿ ಅಂದವಾದಬಣ್ಣದ ಬಟ್ಟೆಯ ತುಂಡುಗಳನ್ನು ಜೋಡಿಸ ಬಹುದು.

ಜೋಡಣೆಯ ಕಸೂತಿಗೆ ಮೊದಲು ಒಳ್ಳೆಯ ಬಟ್ಟೆಯ ತುಂಡುಗಳ ಸಂಗ್ರಹಬೇಕು. ದಿನಾಲು ಉಪಯೋಗಿಸುವ ಬಟ್ಟೆಗಳಲ್ಲಿ, ಸಾಟಿನ್, ವೆಲ್ವೆಟ್ಟಿನಂತಹ ಬೆಲೆಯುಳ್ಳ ಬಟ್ಟೆಗಳನ್ನು ಹಾಕಬಾರದು. ರೇಡಿಯೋಕವ್ಹರ, ಬಾಗಿಲುಪಡದೆಗಳಿಗೆ ಬೇಕಾದರೆ ಹಾಕಬಹುದು.

'ಕೌದಿ' ಜೋಡಣೆ, ಆಕೃತಿಬದ್ಧ ಜೋಡಣೆಗಳೆರಡೂ ಅಪ್ಲೀಕ್‌ವರ್ಕಿ ನಿಂದ ಬೇರೆಯಾಗಿವೆ. ಮೊದಲಿನದರಲ್ಲಿ ಸಿಕ್ಕಂತಹ ಬಟ್ಟೆಯ ತುಂಡುಗಳನ್ನು ಕೆಳಗಿನ ಇಡಿಯಾದ ಬಟ್ಟೆಗೆ ಜೋಡಿಸುತ್ತ ಹೋಗುತ್ತೇವೆ. ಮೊದಲ ತುಂಡನ್ನು ಎಡಗಡೆಯ ಮೂಲೆಯಿಂದ ಜೋಡಿಸಲು ಪ್ರಾರಂಭಿಸಬೇಕು. ಬಳಿಕ ಎರಡನೆಯ ತುಂಡನ್ನು ಮೊದಲನೆಯ ತುಂಡಿನ ಬಿಟ್ಟ ಅಂಚಿಗೆ ಹೊಂದಿಸಬೇಕು. ಹೀಗೇ ಪೂರ್ಣ ಜೋಡಿಸಿದ ಮೇಲೆ ನಾಲ್ಕೂ ಬದಿಗೆ

ದುಂಡುಕಟ್ಟಿ, ಅದರ ಮೇಲೆ ರಿಕ್ಕೆ ಹೊಲಿಗೆ ಅಥವಾ ಸರಪಳಿ ಹೊಲಿಗೆ ಯಂತಹ ಒಂದು ಅಂದದ ಹೊಲಿಗೆಯನ್ನು ಹಾಕಬೇಕು. ಎಲ್ಲ ತುಂಡು ಗಳನ್ನು ಜೋಡಿಸಿದ ಮೇಲೆ, ಒಮ್ಮೆ ತಿರುವಿ, ಇಸ್ತ್ರಿಯಾಡಿಸಿ, ಆ ಮೇಲೆ ಸುತ್ತಲೂ ಹೊಲಿದರೆ, 'ಕೌದಿ' ಏರು ತಗ್ಗುಗಳಾಗದೆ ಸರಿಯಾಗುವದು.

ಆಕೃತಿಬದ್ಧ ಜೋಡಣೆಯ ಕಸೂತಿಯಲ್ಲಿ, ತುಂಡುಗಳನ್ನು ತ್ರಿಕೋನ, ಚೌಕೋನ, ಪಂಚಕೋನಗಳ ಆಕಾರದಲ್ಲಿ ಜೋಡಿಸಬಹುದು. ಇದಕ್ಕಾಗಿ ಒಂದೇ ಬಣ್ಣದ ಅನೇಕ ತುಂಡುಗಳು ಬೇಕಾಗುವವು. ಕೈಚೀಲದ ಮೇಲು ಹೊದಿಕೆಗೆ ಈ ಕಸೂತಿ ಮೂಡುವದಾದರೆ, ಇಡಿಯಾಗಿಯೇ ಯೋಚಿಸಿ ಮಾಡಬಹುದು. ಆದರೆ ಪಡದೆ ಅಥವಾ, ಟೇಬಲ್‌ಕ್ಲಾಥ್ ಮಾಡುವ ದಾದರೆ, ಅಷ್ಟಷ್ಟೇ ಭಾಗವನ್ನು ಮತ್ತೆ ಮತ್ತೆ ಹಾಕಬಹುದು. ಅಂಚಿಗೆ ಇನ್ನೊಂದು ಬಗೆಯ ಪ್ಯಾಚ್‌ವರ್ಕ ಮಾಡಬಹುದು.

ಈಗ ಪಂಚಕೋನಾಕೃತಿಯ ತುಂಡುಗಳನ್ನು ಹಚ್ಚುವದಾದರೆ, ಮೊದಲು ಒಂದು ರಟ್ಟಿನಲ್ಲಿ ಆ ಆಕೃತಿಯನ್ನು ಕತ್ತರಿಸಿಕೊಳ್ಳಬೇಕು. ಬಳಿಕ ಆ ರಟ್ಟನ್ನಿಟ್ಟು, ಸುತ್ತಲೂ ½ ಇಂಚು ಹೆಚ್ಚಿಗೆ ಇಟ್ಟು ಬಟ್ಟೆಯಲ್ಲಿ ಆ ಆಕೃತಿಯ ತುಂಡುಗಳನ್ನು ಕತ್ತರಿಸಬೇಕು. ಆ ಮೇಲೆ ಪ್ರತಿಯೊಂದು ತುಂಡಿನಲ್ಲೂ ಆ ರಟ್ಟನಿಟ್ಟು, ಮಡಿಚತಕ್ಕ ಭಾಗವನ್ನು ಗುರುತಿಸಿಕೊಂಡು, ರಟ್ಟಿನ ಆಕೃತಿಯಂತೆ ಮಡಿಚಿಟ್ಟುಕೊಳ್ಳಬೇಕು. ಆ ಮೇಲೆ ಹಿಂದಿನ ಬಟ್ಟೆಯ ಮೇಲಿಟ್ಟು, ಬೇಕಾದ ಆಕಾರದಂತೆ ಸುತ್ತಲೂ ಟ್ಯಾಕಿಂಗ (ಎಳೆ) ಮಾಡಿಕೊಳ್ಳಬೇಕು. ಆಮೇಲೆ ಬಣ್ಣದ ದಾರದಿಂದ ಅಂದದ ಹೊಲಿಗೆಯನ್ನು ಪ್ರತಿಯೊಂದು ತುಂಡಿನ ಸುತ್ತಲೂ ಹಾಕಬೇಕು. ನಡುವೆ ಬೇಕಾದರೆ ಮತ್ತೊಂದು ಬಗೆಯ ಡಿಝಾಯಿನನ್ನೇ ಮಾಡಬಹುದು. ಎಲ್ಲ ಹಚ್ಚಿ ಮುಗಿದ ಮೇಲೆ, ಇಸ್ತ್ರಿ ಮಾಡಬೇಕು.

ಈ ಪ್ಯಾಚ ವರ್ಕಿನಲ್ಲಿ ಮೂರನೆಯ ವಿಧವೆಂದರೆ, ಭಿನ್ನ ಭಿನ್ನ ಆಕಾರದಲ್ಲಿ ಎಲೆ, ಹೂ, ಪಕ್ಷಿ, ಪ್ರಾಣಿಗಳನ್ನು ಹೊಳೆಹೊಳೆಯುವ ರೇಶಿಮೆ, ಸಾಟಿನ್ ಬಟ್ಟೆಯಲ್ಲಿ ಕತ್ತರಿಸಿ ಹಚ್ಚಬಹುದು. ಉದಾಹರಣೆಗೆ (ಮೇಲಿನ ಆಕೃತಿಯಲ್ಲಿ ತೋರಿಸಿದಂತೆ) ಒಂದು ಹೂವನ್ನೇ ಮಾಡುವದಿದೆ ಎಂದಿಟ್ಟುಕೊಳ್ಳೋಣ. ಮೊದಲು ಆಕಾರವನ್ನು ರಟ್ಟಿನಲ್ಲಿ ಅಥವಾ ಕಾಗದದಲ್ಲಿ ಕತ್ತ

ರಿಸಿಕೊಂಡು, ಆ ಕಾಗದವನ್ನು ಗುಲಾಬೀ ಸಾಟಿನ್ ಬಟ್ಟೆಯ ಮೇಲಿಟ್ಟು (ಸುತ್ತಲೂ ೩ ಇಂಚು ಬಟ್ಟೆ ಹೆಚ್ಚಿಗಿಟ್ಟು) ಕತ್ತರಿಸಿಕೊಳ್ಳಬೇಕು. ಆಮೇಲೆ ಆ ಕಾಗದವನ್ನಿಟ್ಟೇ ಮಡಿಚಬೇಕಾದ ಬಟ್ಟೆಯ ಭಾಗವನ್ನು ಗುರುತಿಸಿಕೊಂಡು, ಕಸೂತಿಯ ಬಟ್ಟೆಯ ಮೇಲಿಟ್ಟು, ಸುತ್ತಲೂ ಎಳೆ ಹಾಕಿಕೊಳ್ಳಬೇಕು. ಆ ಮೇಲೆ ಸಾಟಿನ್ ಅಥವಾ ಗುಂಡೀಮನೆ ಹೊಲಿಗೆಯಿಂದ ಬಾಹ್ಯರೇಷೆಗಳನ್ನು ಗಟ್ಟಿಕೂಡಿಸಬೇಕು. ನಡುವೆ ಬರುವ ಪಕಳೆಯ ಗೆರೆಗಳನ್ನು ಕೆಂಪು, ಅಥವಾ ಚಾಕಲೇಟ ರೇಶಿಮೆಯಿಂದ ಗುಂಡೀಮನೆ ಅಥವಾ ದೇಟಿನ ಹೊಲಿಗೆ ಹಾಕಿ ತುಂಬಬಹುದು.

ಹೂವಿಗೆ ಗುಲಾಬೀ ಸಾಟಿನ್ ಆದರೆ, ಎಲೆಗೆ ಹಸಿರು ಸಾಟಿನ್ ಬೇಕು. ಹೀಗೆ ಯೋಗ್ಯ ಬಣ್ಣದ ಬಟ್ಟೆಯ ತುಂಡುಗಳನ್ನು ಹಚ್ಚಿ ಪ್ರಾಣಿಗಳನ್ನೂ ತುಂಬಬಹುದು. ಕಸೂತಿಯ ಬಟ್ಟೆ ತೆಳುವಾಗಿದ್ದರೆ, ಅದರಲ್ಲಿ ಈ ತುಂಡುಗಳನ್ನು ಹಚ್ಚಿ ಶ್ಯಾಡೋವರ್ಕನ್ನೂ ಮಾಡಬಹುದು.

ಬಟ್ಟೆಯನ್ನು ಉಳಿಸುವದಕ್ಕೂ, ಉಳಿದ ಬಟ್ಟೆಗಳನ್ನು ಉಪಯೋಗಿಸುವದಕ್ಕೂ ಜೋಡಣೆಯ ಕಸೂತಿ ಒಂದು ಒಳ್ಳೇ ಸಾಧನ.

## ೬. ಅಪ್ಲೀಕ ವರ್ಕ

ಕೆಲವೊಂದು ಹೊಲಿಗೆಗಳು ಗೊತ್ತಿದ್ದರೂ ಸಾಕು, ಈ ಅಪ್ಲೀಕ ವರ್ಕನ್ನು ಬಹಳ ಅಂದವಾಗಿ ಮಾಡಬಹುದು. 'ಅಪ್ಲೀಕ್' ಎಂದರೆ 'ಹಚ್ಚಿದ' ಎಂದರ್ಥ; ಒಂದು ಬಟ್ಟೆಯ ತುಂಡನ್ನು ವಿವಿಧ ಆಕಾರಗಳಲ್ಲಿ ಕತ್ತರಿಸಿ, ಅಂದವಾಗಿ ಕಾಣುವಂತೆ ಇನ್ನೊಂದು ಬಟ್ಟೆಗೆ ಹಚ್ಚುವದೇ ಅಪ್ಲೀಕ ವರ್ಕ. ಗ್ರೀಕ ಮತ್ತು ಇಜಿಪ್ತದ ಜನರು ಈ ಕಸೂತಿಯನ್ನು ಬಹಳ ಮೆಚ್ಚಿದ್ದಾರೆ. ಅವರು ಉಪಯೋಗಿಸುವ ಬಟ್ಟೆ ಬರೆಗಳು, ಟೇಬಲ್ ಕ್ಲಾಥ ಪಡದೆಗಳು, ಧಾರ್ಮಿಕ ವಿಧಿಗಳಿಗಾಗಿ ಉಪಯೋಗಿಸುವ ಬಟ್ಟೆಗಳು–ಎಲ್ಲದರಲ್ಲಿಯೂ ಅಪ್ಲೀಕ ವರ್ಕ ಒಂದೇ ಪ್ರಿಯವಾಗಿತ್ತು. ತೀರ ಅಲ್ಪ ವೇಳೆಯಲ್ಲಿ, ಅಲ್ಪ ವೆಚ್ಚದಲ್ಲಿ, ಈ ಕಸೂತಿಯನ್ನು ಮಾಡಬಹುದು. ಅಂದು

ಇಜಿಪ್ತ, ಇಟಲಿ, ಸ್ಪೇನಗಳ ಸ್ತ್ರೀಯರು ಮಾಡಿದ ಅಪ್ಲೀಕ ವರ್ಕನ್ನು, ಇಂದಿಗೂ ವಸ್ತುಸಂಗ್ರಹಾಲಯಗಳಲ್ಲಿ ನೋಡಬಹುದು.

ಸಾಟಿನ್, ಸಿಲ್ಕ, ವೆಲ್ವೆಟ ತುಂಡುಗಳನ್ನು ಹಚ್ಚಿದರೆ, ಕಸೂತಿಗೆ ಹೊಳಪು ಬರುವದು. ನಿತ್ಯ ಒಯ್ಯುವ ಬಟ್ಟೆಗಳಾದರೆ, ಸೂಲಿನ ಬಟ್ಟೆಯ ತುಂಡುಗಳನ್ನೂ ಹಚ್ಚಬಹುದು. ಅಪ್ಲೀಕ್ ವರ್ಕ ಪ್ಯಾಚವರ್ಕಿನಂತೆಯೇ ಎಂದರೂ, ಪ್ಯಾಚವರ್ಕಿನಲ್ಲಿ, ಒಂದು ಬಟ್ಟೆಯ ತುಂಬ, ಇನ್ನೊಂದು ಬಟ್ಟೆಯನ್ನು ಹಚ್ಚಿಬಿಡುತ್ತೇವೆ. ಇಲ್ಲಿ ಹಾಗಲ್ಲ, ಬೇರೆ ಬೇರೆ ಆಕಾರಗಳಲ್ಲಿ ಎಲೆ, ಹೂಗಳಂತೆ ಕತ್ತರಿಸಿಕೊಂಡು ಹಚ್ಚುತ್ತೇವೆ. ಅಪ್ಲೀಕ ವರ್ಕನ್ನು ಯಾವ ಬಟ್ಟೆಯ ಮೇಲೆ ಬೇಕಾದರೂ ಮಾಡಬಹುದು. ಹಿಂದೆ ಹಾಕುವ ಬಟ್ಟೆಗೂ, ಮೇಲೆ ಜೋಡಿಸುವ ತುಂಡುಗಳಿಗೂ, ಹೆಣಿಕೆ, ಮತ್ತು ಬಣ್ಣಗಳಲ್ಲಿ ಹೊಂದಿಕೆ ಇರಬೇಕಾಗುತ್ತದೆ. ಹೊಲಿಯಲು, ಅದೇ ಬಣ್ಣದ ಅಥವಾ ಹೊಂದಿಕೆಯಾಗುವ ಬಣ್ಣದ ರೇಶಿಮೆಯನ್ನು ತೆಗೆದುಕೊಳ್ಳಬೇಕು.

ಈ ಕಸೂತಿಗೆ ಡಿಝಾಯಿನು ಸ್ವಲ್ಪ ದೊಡ್ಡದಾಗಿರಬೇಕು. ವಿಶೇಷತಃ ಎಲೆ, ಹೂ, ಪಕ್ಷಿಗಳಾದರೆ ಈ ಕಸೂತಿ ಅಂದವಾಗಿ ಕಾಣುವವು. ಡಿಝಾಯಿನಿನಲ್ಲಿ ಸಣ್ಣ ಎಲೆ, ಹೂ, ಸುಳಿವುಗಳು ಬಂದರೆ, ಬಟ್ಟೆಯ ತುಂಡನ್ನು ಕತ್ತರಿಸಿ ಹಚ್ಚಿ ಬಾಹ್ಯರೇಷೆಗಳನ್ನು ತುಂಬಿಕೊಳ್ಳುವದು ಬಹಳ ತೊಂದರೆಯ ಕೆಲಸ. ಯಾವದೇ ಇಂತಹ ಡಿಝಾಯಿನನ್ನು ಆರಿಸಿ, ಒಂದು ಕಾಗದದ ಮೇಲೆ ಪೆನ್ಸಿಲ್ಲಿನಿಂದ ಅದನ್ನು ಮೂಡಿಸಿಕೊಳ್ಳಬೇಕು. ಈ ಕಾಗದದ ಸಹಾಯದಿಂದ ಅಪ್ಲೀಕ ವರ್ಕಿಗೆ ಬೇಕಾದ ಬಣ್ಣದ ಬಟ್ಟೆಯ ತುಂಡುಗಳನ್ನೂ ಗುರುತುಮಾಡಿ ಕತ್ತರಿಸಿಕೊಳ್ಳಬಹುದು. ಅಥವಾ ಅದೇ ಪ್ರಾರಂಭ ಮಾಡುವವರಾದರೆ ಬಣ್ಣದ ಕಾಗದಗಳಲ್ಲಿಯೂ, ಡಿಝಾಯಿನಿನ ತುಂಡುಗಳನ್ನು ಮೊದಲು ಕತ್ತರಿಸಿಕೊಂಡು ಆಮೇಲೆ ಬಟ್ಟೆಯಲ್ಲಿ ಕತ್ತರಿಸಿಕೊಳ್ಳಬಹುದು.

ಅಪ್ಲೀಕ ವರ್ಕನ್ನು ಪ್ರಾರಂಭಿಸಲು, ಬಟ್ಟೆಯನ್ನು ಮೊದಲು ಕಟ್ಟಿಗೆಯ ಚೌಕಟ್ಟಿನಲ್ಲಿ ಗಟ್ಟಿಯಾಗಿ ಕೂಡಿಸಿಕೊಳ್ಳಬೇಕು. ಇದರಲ್ಲಿ ನಿರಿಗೆಗಳಾದರೆ, ಬಟ್ಟೆಯನ್ನು ಹಚ್ಚಲು ಬರದು. ಅದಕ್ಕಾಗಿ ಈ ಬಟ್ಟೆಯನ್ನು ಯಾವಾಗಲಾದರೂ ತೆಗೆಯುವದಾದರೆ, ಒಳಗೆ ಕಾಗದವನ್ನು ಹಾಕಿ ಸುತ್ತಬೇಕು. ಬಳಿಕ ಕಾಗದದ ಸಹಾಯದಿಂದ ಡಿಝಾಯಿನಿನ ಆಕಾರದ ತುಂಡು

ಗಳನ್ನು ಬೇರೆ ಬೇರೆ ಬಣ್ಣದ ಬಟ್ಟೆಯಲ್ಲಿ ಕತ್ತರಿಸಿಕೊಳ್ಳಬೇಕು. ಹೀಗೆ ಕತ್ತರಿಸುವಾಗ, ( ಮಡಿಚಿ ಹೊಲಿಯುವದಿದ್ದರೆ ) ಸುತ್ತಲೂ ¼ ಇಂಚು ಹೆಚ್ಚಿಗೆ ಕತ್ತರಿಸಿಕೊಳ್ಳಬೇಕು. ಬಳಿಕ ಆ ತುಂಡುಗಳನ್ನು, ಆ ಆ ಭಾಗ ಗಳಲ್ಲಿಟ್ಟು ನಡುವೆ (ಅವು ಹಾರದಂತೆ) ಗುಂಡುಸೂಜಿ ( ಟಾಚನಿ ) ಗಳಿಂದ ಗಟ್ಟಿ ಮಾಡಿಕೊಳ್ಳಬೇಕು. ಸುತ್ತಲೂ ಕೂಡ ಟಾಚನಿಗಳನ್ನು ಹಚ್ಚಬಹುದು. ಆಮೇಲೆ ಸುತ್ತಲೂ ಎರಡು ಸಾಲು ಎಳೆಗಳನ್ನು ಅದೇ ಬಣ್ಣದ ದಾರದಿಂದ ಹಾಕಿ ಗಟ್ಟಿಮಾಡಿಕೊಳ್ಳಬೇಕು. ಬಟ್ಟೆ ಗುಂಜಾಗುತ್ತಿದ್ದರೆ ಮಡಿಚಿಕೊಂಡು ಎಳೆಹಾಕಬೇಕು. ಅದರ ಮೇಲೆ ಮತ್ತೆ ಗುಂಡೀಮನೆ ಹೊಲಿಗೆಯನ್ನೋ ಅಥವಾ ಸರಪಳಿ, ರೆಕ್ಕೆ ಹೊಲಿಗೆಗಳನ್ನೋ ಹಾಕಿ ಗಟ್ಟಿಮಾಡಿಕೊಳ್ಳಬೇಕು. ಈ ಹೊಲಿಗೆಗಳಿಂದ ಕಸೂತಿಯೂ ಅಂದವಾಗಿ ಕಾಣುವದು. ಇವುಗಳಿಗೆ ಬಟ್ಟೆಯ ಬಣ್ಣದ ದಾರವನ್ನೇ ಉಪಯೋಗಿಸುವದು ಹೆಚ್ಚು ಒಳ್ಳೆಯದು.

ಇಂತಹ ಯಾವ ಹೊಲಿಗೆಗಳನ್ನೂ ಹಾಕದೆ, ಆ ಆ ಬಣ್ಣದ ದಾರ ಗಳಿಂದ, ಬಟ್ಟೆಯ ತುಂಡುಗಳನ್ನು ಮೇಲಿಟ್ಟು ಸುತ್ತಲೂ ಮಡಿಚಿಕೊಂಡು ದುಂಡುಕಟ್ಟಿ ಬಿಡಬಹುದು. ಅದೂ ಒಂದು ವಿಧವಾಗಿ ಚೆಂದಕಾಣುತ್ತದೆ.

ಈ ಹೂ ಎಲೆಗಳನ್ನು ತುಂಬಿದ ಮೇಲೆ, ನಡುವೆ ಬರುವ ಪಕಳೆಯ ಗೆರೆಗಳು, ಸಿರ, ಪರಾಗ— ಇವುಗಳನ್ನು ಮಾತ್ರ ರೇಶಿಮೆಯಿಂದಲೇ ಕಸೂ ತಿಯ ಹೊಲಿಗೆಗಳಿಂದ ತುಂಬಬೇಕು.

**ಅಪ್ಲೀಕ್ ವರ್ಕಿನಲ್ಲಿ ಬಟ್ಟೆಯ ತುಂಡುಗಳನ್ನು ಮೇಲೆ ಹಚ್ಚುವದು ಒಂದು ವಿಧವಾದರೆ ಕೆಳಗೆ ಹಚ್ಚುವದು ಇನ್ನೊಂದು ವಿಧ.** ಇದಕ್ಕೆ ಡಿಝಾಯಿನನ್ನು ಮೊದಲು ಬಟ್ಟೆಯ ಕೆಳಗೆ (ಹಿಂಭಾಗದಲ್ಲಿ) ಮೂಡಿಸಿಕೊಂಡು ಅಲ್ಲಿ, ಆ ಆ ಆಕೃತಿಯ ಬೇರೆ ಬೇರೆ ಬಣ್ಣದ ಬಟ್ಟೆಯ ತುಂಡುಗಳನ್ನು ಕೆಳಗಿಟ್ಟು ಸುತ್ತಲೂ ಎಳೆ ಹಾಕಿಕೊಳ್ಳಬೇಕು. ಆ ಮೇಲೆ ಮೇಲ್ಭಾಗದ ಆ ಬಟ್ಟೆಯನ್ನು ಕಸೂತಿಯ ಕತ್ತರಿಯಿಂದ, ( ಜಾಗರೂಕತೆ ಯಿಂದ ) ಕತ್ತರಿಸಿಬಿಟ್ಟರೆ, ಒಳಗಿನ ಬಣ್ಣದ ತುಂಡು, ಕೆತ್ತಿ ಕೂಡಿಸಿದಂತೆ ಅಂದವಾಗಿ ಕಂಡುಬರುವದು. ಆಮೇಲೆ— ಮೇಲಿನ ಬಟ್ಟೆಯ ತುಂಡನ್ನೇ ಗುಂಜಾಗಿ ಕಾಣುತ್ತಿದ್ದರೆ ಮಡಿಚಿ, ಗುಂಡೀಮನೆ ಹೊಲಿಗೆ ಅಥವಾ ಸಾಟಿನ್ ಹೊಲಿಗೆಯನ್ನು ಹಾಕಬೇಕು.

# ‘ ಜಾಳಿಗೆಯ ಅಪ್ಲೀಕ್ ’

ಈ ಅಪ್ಲೀಕ ವರ್ಕಿನಲ್ಲಿ ಜಾಳಿಗೆಯನ್ನು ಕೆಳಗಿಟ್ಟು ಹಾಕುವದು ಇನ್ನೊಂದು ರೀತಿ. ಮೊದಲು ಬಟ್ಟೆಯ ಮೇಲೆ ಡಿಝಾಯಿನನ್ನು ಮೂಡಿಸಿ ಕೊಂಡು, ಕೆಳಗಡೆಗೆ ಆ ಡಿಝಾಯಿನಿಗಿಂತ ಸುತ್ತಲೂ ಎರಡು ಇಂಚು



ಹೆಚ್ಚಿಗೆ ಇಟ್ಟು ಜಾಳಿಗೆಯನ್ನು (ಬಣ್ಣದ ಜಾಳಿಗೆ ಇನ್ನೂ ಚೆಂದವಾಗುವದು) ಕೆಳಗೆ ಇಟ್ಟು ರಿಂಗಿನಲ್ಲಿ ಗಟ್ಟಿಯಾಗಿ ಕೂಡಿಸಿಕೊಳ್ಳಬೇಕು. ಆಮೇಲೆ ಜಾಳಿಗೆ, ಬಟ್ಟೆಗಳೆರಡನ್ನೂ ವರ್ತುಲ ಅಥವಾ ಚೌಕೋನ ಇಲ್ಲವೆ ಬದಾಮಿನ ಆಕಾರದಲ್ಲಿ ಸರಪಳಿ ಅಥವಾ ಇನ್ನಾವದಾದರೂ ಹೊಲಿಗೆಯಿಂದ ಸುತ್ತಲೂ ಗಟ್ಟಿಯಾಗಿರಿಸಬೇಕು. ಬಳಿಕ ಡಿಝಾಯಿನಿನ ಒಳಗಿನ ಭಾಗ ಗಳನ್ನು ಯೋಗ್ಯ ಬಣ್ಣಗಳ ರೇಶಿಮೆಯಿಂದ ಪೂರ್ಣ ತುಂಬಿ, ಆ ಬದಾಮಿನ ಆಕಾರದಲ್ಲಿ ಬರುವ ಅನವಶ್ಯಕ ಬಟ್ಟೆಯನ್ನು ಮೇಲ್ಭಾಗದಿಂದ, ಜಾಳಿಗೆಗೆ

ಧಕ್ಕೆಯಾಗದಂತೆ, ಕಸೂತಿಯ ಕತ್ತರಿಯಿಂದ ಕತ್ತರಿಸಬೇಕು. ಹಾಗಾದರೆ, ಜಾಳಿಗೆಯ ಮೇಲೆ ಬಣ್ಣದ ರೇಶಿಮೆಯಿಂದ ಕಸೂತಿಯನ್ನು ಹೆಣೆದಂತೆ ಅಂದವಾಗಿ ಕಂಡುಬರುವದು.

ಡಿಝಾಯಿನಿನ ಬಟ್ಟೆಗಳಿಂದ ಎಲೆ, ಹೂಗಳನ್ನು ಕತ್ತರಿಸಿಯೂ ಬೇರೆ ಬಟ್ಟೆಯ ಮೇಲೆ ಹಚ್ಚಬಹುದು. ಕಸೂತಿಯನ್ನು ಹಾಕುವದಾದ ಮೇಲೆ, ಯಾವಾಗಲೂ ಹಿಮ್ಮಗ್ಗಲಿನಿಂದ ಇಸ್ತ್ರಿಮಾಡಬೇಕು.

ಬಿದ್ದುಹೋಗುವ ಬಣ್ಣ ಬಣ್ಣದ ಬಟ್ಟೆಯ ತುಂಡುಗಳನ್ನು, ವಿವಿಧ ಆಕೃತಿಗಳಲ್ಲಿ ಹಚ್ಚಿ, ಇಂತಹ ಸುಂದರ ಕಸೂತಿಯನ್ನು ಹಾಕಬಹುದು !

## ೭. ಎಳೆತೆಗೆದ ಕಸೂತಿ (ಡ್ರಾನ್ ಥ್ರೆಡ್ ವರ್ಕ)

ಈ ಕಸೂತಿಯನ್ನು, ಬಟ್ಟೆಯಲ್ಲಿಯ ಎಳೆಗಳನ್ನು ತೆಗೆಯಲು ಬರುವಂತಹ ಬಟ್ಟೆಯಲ್ಲಿಯೇ ಹಾಕುವದಿರುತ್ತದೆ. ಅಡ್ಡ ಅಥವಾ ಉದ್ದ ಎಳೆಗಳನ್ನು ತೆಗೆದು, ಇಲ್ಲವೆ ಎರಡೂ ಎಳೆಗಳನ್ನು ತೆಗೆದು, ಆಮೇಲೆ ಬಣ್ಣದ ರೇಶಿಮೆಗಳಿಂದ ಹೆಣೆದು ಈ ಕಸೂತಿಯನ್ನು ಮಾಡಬೇಕು. ಸಾಧಾರಣವಾಗಿ ಬಿಳಿಯ ಪೋಪ್ಲಿನ್ ಬಟ್ಟೆಯಲ್ಲಿಯೇ, ಕಸೂತಿ ಸುಂದರವಾಗಿ ಕಾಣುತ್ತದೆ. ಕೈನೂಲಿನಂತಹ ಉರುಟು ಬಟ್ಟೆಯಲ್ಲಿ ಎಳೆಗಳನ್ನು ತೆಗೆಯುವದು ಸುಲಭ, ಆದರೆ ಇವೆರಡು ಬಗೆಯ ಬಟ್ಟೆಗಳಿಗೂ ಒಂದೇ ಬಗೆಯ ಕಸೂತಿ ಒಪ್ಪಿಗೆಯಾಗದು. ಬರೀ ಎಳೆಗಳನ್ನು ತೆಗೆದು ದುಂಡುಕಟ್ಟುವದರಿಂದಲೇ ಬಟ್ಟೆಗ ಒಂದು ವಿಧದ ಶೋಭೆಯುಂಟಾಗುವದು. ಅದರಲ್ಲಿ ಮತ್ತೆ ಬಿಳೀದಾರದಿಂದ ಒಳಗೆ ಡಿಝಾಯಿನು ತುಂಬಿದರೆ, ಲೇಸಿನಂತೆ ನಯವಾಗಿ ಕಸೂತಿ ಕಾಣುವದು. ಕರವಸ್ತ್ರ, ಟೇಬಲ್ ಕ್ಲಾಥ್, ಬಾಗಿಲು ಪಡದೆ, ಪರಕರ-ಫ್ರಾಕುಗಳ ಅಂಚುಗಳಿಗೆ ಎಳೆತೆಗೆದ ಕಸೂತಿ ನಯವಾಗಿ ಕಾಣುವದು.

ಈ ಕಸೂತಿಯ ಬಟ್ಟೆಯಲ್ಲಿ ಬಣ್ಣದ ಡಿಝಾಯಿನು ಇರಕೂಡದು. ಇದರಲ್ಲಿ ಅಡ್ಡ ಉದ್ದ ನೇಯ್ದಂಥ ಎಳೆಗಳು ಅಷ್ಟೇ ದಪ್ಪವಾಗಿರಬೇಕು. ಮೇಲೆ ಕಸೂತಿ ಹಾಕಲು ಉಪಯೋಗಿಸುವ ರೇಶಿಮೆಯೂ ಅಷ್ಟೇ ದಪ

ವಾಗಿರಬೇಕು. ತೆಗೆದ ಎಳೆಗಳಿಂದಲೇ ಒಂದುವೇಳೆ ಕಸೂತಿ ಹಾಕಿದರೂ ನಡೆದೀತು. ಎಳೆತೆಗೆಯುವ ಬಟ್ಟೆಯನ್ನು ಕಟ್ಟಿಗೆಯ ಚೌಕಟ್ಟಿನಲ್ಲಿ ಮೊದಲು ಗಟ್ಟಿಯಾಗಿ ಕೂಡಿಸಿಕೊಳ್ಳಬೇಕು. ಆಮೇಲೆ, ನಾಲ್ಕುಬದಿಗೂ ಅಡ್ಡ ಎಳೆಗಳನ್ನು, ಒಂದು ಇಂಚು ಅಥವಾ ಎರಡು ಇಂಚು ಅಗಲದಷ್ಟು (ಈ ಅಗಲವು ಬಟ್ಟೆಯ ಗಾತ್ರ ಮತ್ತು ಡಿಝಾಯಿನನ್ನು ಅವಲಂಬಿಸಿರುತ್ತದೆ)



ತೆಗೆಯಬೇಕು. ಈ ಎಳೆಗಳನ್ನು ಅಗಲದಲ್ಲಿ ಪೂರ್ಣವಾಗಿ ತೆಗೆಯಬೇಕು. ಅರ್ಧಕ್ಕೇ ಬಿಡಬಾರದು. ಹೀಗೆ ನಾಲ್ಕೂ ಬದಿಗೆ ಎಳೆಗಳನ್ನು ತೆಗೆಯುವದರಿಂದ ನಾಲ್ಕು ಮೂಲೆಗಳಲ್ಲಿಯೂ ತೆರವಾದ ಸ್ಥಳ ಉಳಿಯುವದು. ಇಲ್ಲಿ ಕಟವರ್ಕಿನಂತೆ ಬರೀ ನಾಲ್ಕೂ ಬದಿಗೆ ಬಣ್ಣದ ರೇಶಿಮೆಯಿಂದ ದುಂಡುಕಟ್ಟಿ ಬಿಟ್ಟುಬಿಡಬಹುದು, ಇಲ್ಲವೆ ಎಳೆ ಹೆಣೆದುಕೊಂಡು, ಡ್ರಾನ್ ಥ್ರೆಡ್

ಕಸೂತಿಯನ್ನೂ ಮಾಡಬಹುದು. ಜೇಡನ ಬಲೆ ಹೊಲಿಗೆ ಇಲ್ಲಿ ಅತ್ಯಂತ ಸುಂದರವಾಗಿ ಕಾಣುವದು. ಗಟ್ಟಿ ರೇಶಿಮೆಯಿಂದ ಎಂಟು ಕಾಲುಗಳನ್ನು ಹೆಣೆದುಕೊಂಡು, ಆಮೇಲೆ ಈ ಹೊಲಿಗೆಯನ್ನು ಬಣ್ಣದ ರೇಶಿಮೆಯಿಂದ (ಅಥವಾ ಬಿಳಿಯ ರೇಶಿಮೆಯಿಂದ) ಹಾಕಬೇಕು.

ಇನ್ನು ನಾಲ್ಕು ಬದಿಗೂ ಎಳೆಗಳನ್ನು ತೆಗೆಯುವದಾದಮೇಲೆ, ೪-೫ ಎಳೆಗಳನ್ನು ಕೂಡಿಸಿ ಮೇಲೆ ಮತ್ತು ಕೆಳಗೆ ದುಂಡು (ಹೆಮ್-ಸ್ಟಿಚ್) ಕಟ್ಟಿ, ಕಂಬಗಳಂತೆ ಮಾಡಿಕೊಳ್ಳಬೇಕು. ಈ ಎಳೆತೆಗೆದ ಕಸೂತಿಯಲ್ಲಿ, ಯಾವ ಡಿಝಾಯಿನನ್ನು ಹಾಕುವದಾದರೂ ಅದಕ್ಕೆ ಇದು ಮೊದಲನೆಯ ಮೆಟ್ಟಲು. ಕಂಬಗಳು ತಯಾರಾದ ಮೇಲೆ ಬಣ್ಣದ ರೇಶಿಮೆಯಿಂದ ಎರಡೆರಡು ಅಥವಾ ಮೂರುಮೂರು ಕಂಬಗಳನ್ನು ಸೇರಿಸಿ ಹೆಣೆಯಬಹುದು. ಇಲ್ಲಿ ಆ ಎರಡು ಕಂಬಗಳ ಮಟ್ಟಿಗೆ ಸರಪಳಿ ಹಾಕಿ, ಮುಂದೆ ಎಳೆ ಹಿಡಿದು ಮತ್ತೆ ಮುಂದಿನ ಎರಡು ಕಂಬಗಳಿಗೆ ಸರಪಳಿ ಹಾಕಬಹುದು. ಅಥವಾ ನಾಗಮುರಿಗೆಯಂತೆ ಎರಡನೆಯ ಕಂಬವನ್ನು ಮೊದಲು ತಂದು, ಮೊದಲಿನದನ್ನು ಎರಡನೆಯ ಸಲಕ್ಕೆ, ಕೆಳಗಿನಿಂದ ತಂದು, ಎಳೆ ಹಾಯಿಸುತ್ತ ಹೋದರೆ ಅದೂ ಅಂದ ವಾಗಿ ಕಾಣುವದು. ಇಲ್ಲವೆ ಎಲ್ಲ ಕಂಬಗಳಿಗೂ ಮೊದಲು ರೇಶಿಮೆಯಿಂದ ಸುತ್ತಿದ ಹೊಲಿಗೆ (ಓವ್ಹರಕಾಸ್ಟ ಸ್ಟಿಚ್) ಹಾಕಿ ಆಮೇಲೆ ಜೋಡಿಸಿ ಕಟ್ಟಿದರೆ ಅದೊಂದು ವಿಧದಲ್ಲಿ ಅಂದವಾಗಿ ಕಾಣುವದು. ಮೊದಲು ಒಂದು ಎರಡ ನೆಯ ಕಂಬಗಳನ್ನು ಮೇಲೆ ಹೆಣೆದರೆ, ಕೆಳಗೆ, ಎರಡು ಮೂರನೆಯ ಕಂಬ ಗಳನ್ನು ಜೋಡಿಸಿ ಹೆಣೆಯಬೇಕು. ಅಂದರೆ ಒಂದು ಬಗೆಯ ಆಕೃತಿಹೊರ ಡುವದು. ಎಳೆತೆಗೆದ ಅಗಲ ಮೂರು ಇಂಚಿನವರೆಗೆ ಇದ್ದರೆ, ಬೇಕಾದಂತಹ ದೊಡ್ಡ ಡಿಝಾಯಿನ ಮಾಡಬಹುದು.

ಅಥವಾ ಒಂದರ್ಧ ಇಂಚು ಮೇಲೆ, ಒಂದರ್ಧ ಇಂಚು ಕೆಳಗೆ ಎಳೆ ಗಳನ್ನು ಅಗಲದಲ್ಲಿ ತೆಗೆಯಬೇಕು. ಇವೆರಡರ ನಡುವೆ ಒಂದರ್ಧ ಇಂಚು ಅಗಲದ ಬಟ್ಟೆಯನ್ನು ಬಿಟ್ಟಿರಬೇಕು. ಮೇಲೆ ಕೆಳಗೆ ಎರಡೂ ಬದಿಗೆ ಹೆಮ್ ಸ್ಟಿಚ್ ಮಾಡಿ, ನಡುವೆ ಬುಗಡೀ ಹೊಲಿಗೆ ಅಥವಾ ಕತ್ತರೀ ಹೊಲಿಗೆ ಹಾಕ ಬಹುದು. ಇಲ್ಲವೆ ಚೌಕು ಮನೆಗಳಾಗುವಂತೆ ಎಳೆಗಳನ್ನು ತೆಗೆದು, ನಡುವೆ

ಉಳಿದ ಸ್ಥಳದಲ್ಲಿ ಒಂದು ಕಮಲದಂತಹ ಹೂವನ್ನು ಬಣ್ಣದ ರೇಶಿಮೆಯಿಂದ ಹಾಕಬಹುದು.

ಈ ಕಸೂತಿಯಲ್ಲಿ ಬಹುತರವಾಗಿ ಭೂಮಿತಿಯ ನಿಯಮಗಳನ್ನನುಸರಿಸಿದ ಪ್ರಮಾಣಬದ್ಧ ಡಿಝಾಯಿನುಗಳೇ ಹೆಚ್ಚು. ಸಾಮಾನ್ಯವಾಗಿ ಎಲೆ, ಹೂಗಳನ್ನು ಸಾಟಿನ್ ಹೊಲಿಗೆಯಿಂದ ತುಂಬುವಂತೆ, ಈ ಹೊಲಿಗೆಯಿಂದ ತುಂಬುವದು ಸುಲಭವಲ್ಲ. ಆದರೂ ಎಲೆ, ಹೂಗಳು ದೊಡ್ಡವಿದ್ದರೆ, ಅವುಗಳ ಸುತ್ತಲೂ ಮೊದಲು ಎಳೆಗಳನ್ನು ಹಾಕಿ ಆಮೇಲೆ ಗುಂಡೀಮನೆ ಹೊಲಿಗೆಯಿಂದ ಬಾಹ್ಯರೇಷೆಯನ್ನು ಗಟ್ಟಿಮಾಡಿ, ಬಳಿಕ ಒಳಗಿನ ಎಳೆಗಳನ್ನು, ಚೌಕುಮನೆಗಳಾಗುವಂತೆ ತೆಗೆಯಬಹುದು. ರೇಶಿಮೆಯಿಂದ, ಉಳಿದ ಎಳೆಗಳನ್ನು ಸುತ್ತಿದ ಹೊಲಿಗೆಯಿಂದ ಹೆಣೆದುಕೊಂಡು, ಜಾಳಿಗೆ-ಜಾಳಿಗೆಯಂತೆ ಮಾಡಬಹುದು. ಎಳೆಗಳು ಕತ್ತರಿಯಂತೆ ಬರುವಲ್ಲಿ ಗಟ್ಟಿ ಮಾಡಬೇಕು. ಹೂವಿನೊಳಗಿನ ಎಳೆಗಳನ್ನಾದರೆ, ಗುಲಾಬೀ, ಕೇಸರಿ ಬಣ್ಣದಿಂದ ಎಲೆಗಳ ಎಳೆಗಳನ್ನಾದರೆ ಹಸಿರು ಬಣ್ಣದಿಂದ ತುಂಬಬೇಕು.

ಎಳೆ ತೆಗೆದ ಕಸೂತಿ ಎಲ್ಲೆಡೆಗಳಲ್ಲಿಯೂ ಬಹಳ ನಯವಾಗಿ ಕಾಣುವದು. ವಿಶೇಷವಾಗಿ ಟೇಬಲ್‌ಕ್ಲಾಥ್, ಪಡದೆ, ಫ್ರಾಕು, ಪರಕರಗಳ ಅಂಚಿನಲ್ಲಿ ! ಸಮಯ ಸ್ವಲ್ಪ ಹೆಚ್ಚು ಹತ್ತಿದರೂ ಕಸೂತಿ ಒಳ್ಳೇ ಸುಂದರವಾಗಿರುವದು.

## ೮. ಜೀಗಿನ ಕಸೂತಿ

ರೇಶಿಮೆಯಿಂದ ವಿವಿಧ ಬಗೆಯ ಕಸೂತಿಗಳನ್ನು ಹಾಕುವಂತೆ, ಬಂಗಾರದ ಕಡ್ಡಿಗಳಿಂದಲೂ ಹಾಕಬಹುದು. ಆದರೆ ಬನಾರಸಿನಲ್ಲಿ, ಬೆಂಗಳೂರಿನಲ್ಲಿ ಜರೀ ಕಡ್ಡಿಯನ್ನು ನೇಯ್ಗೆ ಕಸೂತಿಯಂತೆ ಬಳಸಿ, ಅಲಂಕರಿಸಿದ ಸೀರೆ, ಖಣಗಳು ನಮ್ಮಲ್ಲಿ ಒಪ್ಪುಲವಾಗಿ ದೊರೆಯುತ್ತವೆ. ಆದರೆ ಜೀಗಿನ ಕಸೂತಿಗೂ ಇದಕ್ಕೂ ವ್ಯತ್ಯಾಸವಿದೆ. ಜೀಗು ಎಳೆದಂತೆ ಬರುವದು. ಅದಕ್ಕೊಂದು ಬಗೆಯ ಮೈದುಂಬಿದ ಹೊಳಪಿರುವದು. ಆದರೆ ಜರದ ರೀಲಿಗೆ ಆ ಬಗೆಯ ಹೊಳಪಿಲ್ಲ.

ಜೀಗು ನಿತ್ಯದ ಬಟ್ಟೆಯಲ್ಲಿ ಉಪಯೋಗಿಸಲು ಯೋಗ್ಯವಲ್ಲ. ಇತ್ತೀಚೆಗೆ ದೊರೆಯುವ ಜೀಗು, ಕೆಲದಿನಗಳಲ್ಲಿ ಕಪ್ಪುಬಣ್ಣಕ್ಕೆ ತಿರುಗಿ ಬಿಡುತ್ತದೆ. ಮೊದಲಿನ ಜೀಗನ್ನಾದರೂ, ದಿನಾಲು ನೀರಿನಲ್ಲಿ ತೊಳೆಯುವಂತಿಲ್ಲ. ವಿಶೇಷವಾಗಿ ಕಟ್ಟಿನಲ್ಲಿ ಹಾಕಿಡುವ ಮುಖಮಲ್ಲುಗಳಲ್ಲಿ, ಇಲ್ಲವೆ ಫೋಟೋಗಳಲ್ಲಿ, ಜೀಗನ್ನು ಉಪಯೋಗಿಸುವರು.

ಮುಖಮಲ್ಲುಗಳಲ್ಲಿ, ಸುತ್ತಲಿನ ಎಲೆ ಹೂ ಬಳ್ಳಿಗಳನ್ನು ತುಂಬಲು, ಒಳಗೆ ಭಾವಚಿತ್ರದ ಬಾಹ್ಯರೇಷೆಗೆ ಜೀಗನ್ನುಪಯೋಗಿಸಬಹುದು. ಈ ಜೀಗಿನಲ್ಲಿಯೂ ಮೂರು ನಾಲ್ಕು ವಿಧಗಳಿವೆ. ಖರಖರಿ, ಮೇಲೆ ಗುಂಜು ಗುಂಜಾಗಿದ್ದಂತೆ ಕಾಣುವದು. ಇದರಲ್ಲಿ ಕೆಂಪು, ಹಸಿರು ಬಣ್ಣಗಳೆಲ್ಲವೂ ದೊರೆಯುತ್ತವೆ. ಇದರಿಂದ ಹೂಗಳನ್ನು ಸುಂದರವಾಗಿ ತುಂಬಬಹುದು. ಇನ್ನೊಂದು ಕೋಲುಜೀಗು (ದಾಂಡ) ಇದು ಸ್ವಲ್ಪ ಬಿರುಸಾಗಿರುತ್ತದೆ. ಮೇಲೆ ಚಿಕ್ಕೆ ಚಿಕ್ಕೆಗಳಿದ್ದಂತೆ ಭಾಸವಾಗುತ್ತದೆ. ಇದನ್ನು ಎಲೆಗಳ ಸಿರಗಳಿಗೂ, ದೇಟಿಗೂ, ಹೂವಿನ ಪಕಳೆಗಳನ್ನು ವಿಂಗಡಿಸಲಿಕ್ಕೂ, ಬಾಹ್ಯರೇಷೆಗೂ ಉಪಯೋಗಿಸಬಹುದು. ಮೂರನೆಯದು ಮೃದುವಾದ ಜೀಗು (ಮುಹಿಲಾ) ಇದು ಮೃದುವಾಗಿ ನುಣುಪಾಗಿ ಇರುತ್ತದೆ. ಫೋಟೋಗಳಲ್ಲಿಯ ಬಟ್ಟೆಯ ಅಂಚಿಗೆ ಇದು ಅಂದವಾಗಿ ಕಾಣುತ್ತದೆ.

ಮುಖಮಲ್ಲಿನ ಜರೀ ಟೋಪಿಗಳಲ್ಲೆಲ್ಲ ನಾವು ಕಾಣುವದು ಈ ಜೀಗಿನ ಕಸೂತಿಯನ್ನೇ! ಶ್ರೀಮಂತ ಮನೆತನದ ಹೆಣ್ಣುಮಕ್ಕಳು ಕೂಡ, ಬಿಡುವಿನ ವೇಳೆಯಲ್ಲಿ ಈ ಜೀಗಿನ ಕಸೂತಿಯನ್ನು ಹಾಕಿ ಆರ್ಥಿಕ ಸಂಪಾದನೆ ಮಾಡುವರು. ಜೀಗಿನ ಕಸೂತಿಯನ್ನು ತುಂಬುವಾಗ ಯಾವ ಜೀಗನ್ನೂ ಸೂಜಿಯಲ್ಲಿ ಪೋಣಿಸಲು ಬರುವಂತಿಲ್ಲ. ಜೀಗಿನ ಬಣ್ಣದ ರೇಶಿಮೆಯನ್ನೇ ತೆಗೆದುಕೊಂಡು, ಆಯಾ ಆಕೃತಿಗಳಗುಂಟ ಜೀಗನ್ನಿಟ್ಟು ರೇಶಿಮೆಯಿಂದ ಎಳೆ ಹಾಕಿ ಅಲ್ಲಲ್ಲಿ ಗಟ್ಟಿಮಾಡಬೇಕು. ಹಲವು ಸಲ ಮುಖಮಲ್ಲಿನಲ್ಲಿ ಎಲೆ ಹೂಗಳನ್ನು ತುಂಬಲು, ಮೃದುವಾದ ಜೀಗಿನಿಂದ ಸಾಟಿನ್ ಹೊಲಿಗೆಯನ್ನು ಹಾಕಬೇಕಾಗುತ್ತದೆ. ಆಗ ಮೊದಲು ಜರೀ ಬಣ್ಣದ ರೇಶಿಮೆಯಿಂದ, ಜೀಗನ್ನು ತುಂಬಬೇಕಾದ ವಿರುದ್ಧ ದಿಕ್ಕಿನಲ್ಲಿ, ಎಲೆಯ ತುಂಬ ಎಳೆಗಳಿಂದ ಪ್ಯಾಡಿಂಗ ಮಾಡಿಕೊಳ್ಳಬೇಕು. ಆಮೇಲೆ ಜೀಗನ್ನು ಸಾಟಿನ್ ಹೊಲಿಗೆಯಂತೆ

ವಿರುದ್ಧ ದಿಕ್ಕಿನಲ್ಲಿಟ್ಟು ಅಲ್ಲಲ್ಲಿ ಹೊಲಿಗೆ ಹಾಕಬೇಕು. ಜೀಗನ್ನು ಹಗ್ಗದಂತೆ ಬಿಗಿಯಾಗಿ ಹೊಸೆದು, ಗೊಂಡೆಯಂತೆಯೂ ಹಚ್ಚಬಹುದು. ಜೀಗಿನ ಕಸೂತಿ ಎಲ್ಲ ಕಸೂತಿಗಳಲ್ಲಿ ಹೆಚ್ಚು ಅಂದವಾದುದು.

## ೯. ಕಸೂತಿಯಲ್ಲಿ ಅಕ್ಷರಗಳು

ಕಸೂತಿಯಲ್ಲಿ ರೇಶಿಮೆ ಜೀಗುಗಳಿಂದ ಎಲೆ ಹೂಗಳನ್ನು ತುಂಬುತ್ತೇವೆ; ಅದು ಸರಿ, ಅದರ ಜೊತೆಗೆ ಅಕ್ಷರಗಳನ್ನೂ ತುಂಬಬಹುದು. ಅಕ್ಷರ ಜಾಣತನವನ್ನು ಅಳೆಯುವ ದಂಡವಾದಂದಿನಿಂದ ಕಸೂತಿಯಲ್ಲಿ ಅಕ್ಷರಕ್ಕೆ




ಮನ್ನಣೆ ಹೆಚ್ಚಾಗಿ ಬಂದಿದೆ. ಬಟ್ಟೆಯ ಮೇಲೆ, ಆಭರಣಗಳಲ್ಲಿ, ಅಕ್ಷರಗಳನ್ನು ಕೊರೆಯುವದೆಂದರೆ ಹೆಮ್ಮೆ. ಇಂಗ್ಲಂಡಿನಲ್ಲಿ ಒಂದು ಕಾಲಕ್ಕೆ ಸ್ತ್ರೀಯರಿಗೆ ಅಕ್ಷರಗಳನ್ನು ಹೆಣೆಯುವ ಹುಚ್ಚು ಹಿಡಿದಿತ್ತು. ತಮ್ಮ ಅಥವಾ ತಮಗೆ ಪ್ರಿಯರಾದವರ ಹೆಸರು, ಅಡ್ಡಹೆಸರುಗಳ ಮೊದಲ ಅಕ್ಷರಗಳನ್ನು ಸೇರಿಸಿ ಹೆಣೆಯುವದೇ ಅವರ ಉದ್ದೇಶ! ವಧುವು ತನ್ನ ಮುಂದಿನ ಜೀವನದ ಬಟ್ಟೆಗಳನ್ನೆಲ್ಲ ತನ್ನವಾಗಲಿರುವ ಅಕ್ಷರಗಳಿಂದ ಹೆಣೆದು ತುಂಬಿಸಿಬಿಡುತ್ತಿದ್ದಳು.

ಅಕ್ಷರಗಳನ್ನು ಹೆಣೆಯುವಲ್ಲಿಯೂ, ಹೆಣೆಯುವ ಬಟ್ಟೆ, ರೇಶಿಮೆ, ಅಕ್ಷರಗಳನ್ನು ಮೊದಲು ನೋಡಿಕೊಳ್ಳಬೇಕಾಗುತ್ತದೆ. ಯಾವ ವಿಧದ ಬಟ್ಟೆಗೆ, ಯಾವ ವಿಧದ ಹೊಲಿಗೆ ಹಾಕಿದರೆ ಅಂದವಾಗಿ ಕಾಣುತ್ತದೆಯೆಂಬು ದನ್ನು ಯೋಚಿಸಬೇಕು. ಒಂದು ಅಕ್ಷರ ವಕ್ರ ಇನ್ನೊಂದು ಸರಳ, ಇಂತಹ ಅಕ್ಷರಗಳನ್ನು ಎಂದಿಗೂ ಕೂಡಿಸಬಾರದು. ಆರ್ಗಂಡಿಯಂತಹ ಬಟ್ಟೆಯ ಮೇಲೆ, ಶ್ಯಾಡೋವರ್ಕ ಮಾಡಿಯೂ ಅಕ್ಷರಗಳನ್ನು ಹಾಕಬಹುದು; ಸಿಲ್ಕ, ಲಿನೋನ್‌ಗಳ ಮೇಲೆ ಎಳೆ ತೆಗೆದು ಹೆಣೆದರೆ, ಅಥವಾ ಕಟವರ್ಕ ಮಾಡಿ ದರೆ ಅಂದವಾಗಿ ಕಾಣುವದು. ಆದರೆ, ನೂಲಿನ ಅಥವಾ ಉಣ್ಣೆಯ ಬಟ್ಟೆಯ ಮೇಲೆ, ಅಕ್ಷರಗಳು ಮೇಲೆ ಉಬ್ಬಿ ಬರುವಂತೆ ಪ್ಯಾಡಿಂಗಮಾಡಿ ಸಾಟಿನ್ ಹೊಲಿಗೆ ಹಾಕಿದರೇ ಹೆಚ್ಚು ಸುಂದರವಾಗಿ ಕಂಡುಬರುವದು. ಕಟ್‌ವರ್ಕಿ ನಲ್ಲಿ ಅಕ್ಷರಗಳು ಮಾತ್ರ ಬಟ್ಟೆಯ ನಾಲ್ಕೂ ಬದಿಗೆ ಹೊಂದಿಕೊಂಡಿರಬೇಕು.

ಅಕ್ಷರಗಳನ್ನು ತುಂಬುವಾಗ, ಬಾಹ್ಯರೇಷೆಯನ್ನು ಮೊದಲು ದೇಟಿನ ಹೊಲಿಗೆಯಿಂದ ತುಂಬಿಕೊಳ್ಳಬೇಕು. ಬಳಿಕ ಒಳಗೆ, ಅಕ್ಷರದ ದಿಕ್ಕಿನಲ್ಲಿ ಸರಪಳಿ ಹೊಲಿಗೆಯನ್ನು ಉದ್ದಕ್ಕೂ ತುಂಬಿ, ಆಮೇಲೆ ಒಂದು ಅಂಚಿನಿಂದ ಇನ್ನೊಂದು ಅಂಚಿನವರೆಗೆ ಸಾಟಿನ್ ಹೊಲಿಗೆಯನ್ನು ಮೇಲಿನ ಚಿತ್ರದಲ್ಲಿ ತೋರಿಸಿದಂತೆ, ಹಾಕಬೇಕು. ಕರವಸ್ತ್ರ, ಟೇಬಲ್‌ಕ್ಲಾಥಗಳ ಮೂಲೆಯಲ್ಲಿ ತನಗೆ ಪ್ರಿಯವಾದ ಹೆಸರಿನ ಮೊದಲಕ್ಷರವನ್ನು ಕಸೂತಿಯಲ್ಲಿ ಹೆಣೆದರೆ, ಆವುದೋ ಒಂದು ಬಗೆಯ ಸ್ವಾಭಿಮಾನ ಜಾಗ್ರತವಾಗುತ್ತದೆ. ಆ ಅಕ್ಷರ ವನ್ನು ಹೂ ಬಳ್ಳಿಗಳ ಮಧ್ಯದಲ್ಲಿಟ್ಟು ಇನ್ನೂ ಹೆಚ್ಚು ಆಕರ್ಷಕವಾಗುವಂತೆ ಹೆಣೆಯಬಹುದು !

ಬಟ್ಟೆ, ಎಳೆ ಎಣಿಸಿ ಹಾಕಲು ಬರುವಂತಿದ್ದರೆ, ಕನ್ನಡ ಕಸೂತಿಯ ಮೆಂಥೇದ ಹೊಲಿಗೆಯಿಂದಲೂ ಅಕ್ಷರಗಳನ್ನು ತುಂಬಬಹುದು. ಯಾವುದೇ ಒಂದು ಡಿಝಾಯಿನನ್ನು ಹಿನ್ನೆಲೆಯಲ್ಲಿ ಹಾಕಿ, ನಡುವೆ ಅಕ್ಷರಗಳನ್ನು ತುಂಬುವದಾದರೆ, ಹಿನ್ನೆಲೆಗೆ ಬಿಳೀ ರೇಶಿಮೆಯಿಂದ ಎಳೆ ತೆಗೆದು ಮಾಡಿದ ಕಸೂತಿ ಬಹಳ ಸುಂದರವಾಗಿ ಕಾಣುವದು.

ಅಕ್ಷರಗಳನ್ನು ಜೋಡಣೆಯ ಕಸೂತಿ (ಪ್ಯಾಚ್‌ವರ್ಕ) ಯಲ್ಲಿಯೂ ಮಾಡಬಹುದು. ಪೋಪ್ಲಿನ್ ಬಟ್ಟೆಯ ಮೇಲೆ ಮೊದಲು ಅಕ್ಷರಗಳನ್ನು

ಮುಡಿಸಿಕೊಂಡು, ಅಕ್ಷರಗಳ ಆಕಾರದ ಹೊಳೆಯುವ ಬಟ್ಟೆಯ ತುಂಡುಗಳನ್ನು ಕತ್ತರಿಸಿ, ಆ ಪೋಪ್ಲಿನ್ ಬಟ್ಟೆಯ ಮೇಲಿಟ್ಟು, ಅಂಚನ್ನು ಮಡಿಚಿ, ಗುಂಡೀಮನೆ ಹೊಲಿಗೆ, ಇಲ್ಲವೆ ಸಾಟಿನ್ ಹೊಲಿಗೆಯನ್ನು ಹಾಕಬೇಕು. ಬಟ್ಟೆಯಲ್ಲಿ ಕತ್ತರಿಸಿದ ವಿವಿಧ ಅಕ್ಷರಗಳು ಪೇಟೆಯಲ್ಲಿ ದೊರೆಯುತ್ತವೆ. ಆದರೆ ಕಸೂತಿಯನ್ನು ಹಾಕುವಲ್ಲಿ ಇರುವ ಸ್ವಾರಸ್ಯ ಅಲ್ಲಿಲ್ಲ.

ಒಗೆದ ಮೇಲೆ ಅಕ್ಷರಗಳು ಒಳಗೆ ಜಗ್ಗದಂತೆ, ಸ್ವಲ್ಪ ಸಡಿಲಾಗಿ ಹಾಕಬೇಕು.

ಬಟ್ಟೆಯನ್ನು ರಿಂಗಿನಲ್ಲಿ ಕೂಡಿಸಿ ಹಾಕಿದರೆ, ಬಟ್ಟೆಯ ಮೇಲಿನ ನಿರಿಗೆಗಳು ಕಡಿಮೆಯಾಗುತ್ತವೆ.

ಸಾಧನಗಳು : ಪೋಪ್ಲಿನ್ ಬಟ್ಟೆ, ಡಿ. ಎಮ್. ಸಿ. ರೇಶಿಮೆ, ರಿಂಗು, ಕಸೂತಿ ಕತ್ತರಿ, ಸೂಜಿ, ಇತ್ಯಾದಿ.

## ೧೦. ಟ್ಯಾಂಬೂರ ಎಂಬ್ರೊಯಡರಿ

ಕ್ರೋಷೆಯ ಕೊಕ್ಕೆಸೂಜಿಯಿಂದ ಎಂಬ್ರೊಯಡರಿ ಮಾಡುವ ರೀತಿಯಿದು. ವಿವಿಧ ಬಣ್ಣಗಳಲ್ಲಿ ದೊಡ್ಡ ಡಿಝಾಯಿನೊಂದನ್ನು ತುಂಬಬೇಕಾಗಿ



ದ್ದರೆ, ಕೈಯಿಯಿಂದ ಸರಪಳಿ ಹೊಲಿಗೆಯನ್ನು ಹಾಕುವದು ಅಸಾಧ್ಯವಾಗುತ್ತದೆ. ಇಂದು ಯಂತ್ರದಲ್ಲಿಯೂ ಈ ಸರಪಳಿ ಹೊಲಿಗೆಯನ್ನು ಹಾಕಿ ಕಸೂತಿ ತುಂಬಬಹುದು. ಆದರೆ ಕೈಯಿಯಿಂದಲೇ ಕಸೂತಿಯನ್ನು ಅಂದವಾಗಿ ಮತ್ತು ಬೇಗನೆ ಹಾಕಿ ಮುಗಿಸಬೇಕೆಂದರೆ ಟ್ಯಾಂಬೂರ ಎಂಬ್ರೊಯಡರಿಯ ಮಾರ್ಗವೇ ಉತ್ತಮ.

ಈ ಎಂಬ್ರೊಯಡರಿ ಹಾಕುವಾಗ ಬಟ್ಟೆಯನ್ನು ಮೊದಲು ರಿಂಗಿನಲ್ಲಿ ಕೂಡಿಸಬೇಕು ಮತ್ತು ಕೊಕ್ಕೆ ಸೂಜಿಯಂತೆ, ಮಣಿದಿರುವ ವಿಶಿಷ್ಟ ಸೂಜಿಯೊಂದು ಇದಕ್ಕೆ ಬೇಕು. ಈ ಸೂಜಿಗೆ ಒಂದು ಕವಚವೂ ಕೆಳಗಡೆ ಕೈ ಹಿಡಿಯಲು ಕಟ್ಟಿಗೆಯ ಹಿಡಿತವೂ ಇರುತ್ತವೆ. ಹೊಲಿಯುವಾಗ ಹಾಕುವಂತೆ ಅಂಗುಸ್ಥಾನವನ್ನು ಬಟ್ಟಿಗೆ ತೊಡಿಸಿದರೆ, ಕಸೂತಿಯನ್ನು ಬೇಗನೆ ಹೆಣೆಯಲು ಸಹಾಯವಾಗುವದು. ಈ ಕಸೂತಿಗೆ ಎರಡು ಎಳೆಗಳ ದಾರ ಒಳ್ಳೆಯದಲ್ಲ. ಯಾಕೆಂದರೆ ಕೊಕ್ಕೆಗೆ ಸಿಕ್ಕು ಅದು ಒಡೆಯುವ ಸಂಭವ ಹೆಚ್ಚಾಗಿರುತ್ತದೆ.

ಕಸೂತಿ ಹಾಕಲು ರೇಶಿಮೆಯನ್ನು ಎಡಗೈಗೆ ಸುತ್ತಿಕೊಂಡಿರಬೇಕು. ಬಲಗೈಯಿಯಿಂದ ಸೂಜಿ ಚುಚ್ಚಿ ಸರಪಳಿಯಂತೆ ರೇಶಿಮೆಯನ್ನು ಬಟ್ಟೆಯ ಎರಡೆಳೆ ಸಹಿತವಾಗಿ ಎಳೆದುಕೊಳ್ಳಬೇಕು. ಎಳೆಯುವಾಗ ಮಾತ್ರ ಎಡಗೈಯಿಯಿಂದ ಬಟ್ಟೆಯನ್ನು ಹಿಂದಕ್ಕೆ ಒತ್ತಿ ಸರಿಸಬೇಕು. ಎಡಗೈಯಿಯಿಂದ ಬಟ್ಟೆ ಒತ್ತಿ ಬಲಗೈಯಿಯಿಂದ ರೇಶಿಮೆಯನ್ನು ಎಳೆಯುವ ಕೆಲಸವೇ ಮೊದಮೊದಲು ಸ್ವಲ್ಪ ಕಠಿಣವೆನಿಸುವದು. ಆದರೆ ರೂಢಿಯಾದ ಮೇಲೆ ಸರಪಳಿ ಹೊಲಿಗೆಯಿಂದ ಎಲೆ ಹೂಗಳನ್ನು ಬಹುಬೇಗ ತುಂಬಿ ಕಸೂತಿಯನ್ನು ಪೂರ್ಣಗೊಳಿಸಬಹುದು. ಈ ಹೊಲಿಗೆ ಗಟ್ಟಿಯಾಗಿರುತ್ತದೆ.

## ೧೧. ಹೂವಿನ ವಸ್ತ್ರ

ನಿತ್ಯದ ಉಡುಪಿನಲ್ಲಿ, ಬೆಡಗು ಹೆಚ್ಚಾದಾಗಿನಿಂದ, ಬಟ್ಟೆಯನ್ನು ಮೈಗೆ ಅಚ್ಚುಕಟ್ಟಾಗಿರುವಂತೆ ಹೊಲಿಯುವದಿಷ್ಟೇ ಅಲ್ಲ, ಅದರಲ್ಲಿಯೂ ಅಲ್ಲಲ್ಲಿ ಕಟ್‌ವರ್ಕ ಕಸೂತಿಯನ್ನು ಹಾಕಿ, ಇಲ್ಲವೆ ಜೋಡಣೆಯ ಕಸೂತಿಯಿಂದ

ಲಂಕರಿಸಿ, ಮಾಡುವದು ಸದ್ಯದ ರೂಢಿಯಾಗಿದೆ. ಬಟ್ಟೆಯ ತುಂಡುಗಳನ್ನು ಕತ್ತರಿಸುವಾಗ ಉಳಿದ ಸಣ್ಣಸಣ್ಣ ಬಟ್ಟೆಯ ತುಂಡುಗಳ ಉಪಯೋಗವನ್ನೂ ಒಳ್ಳೆಯ ರೀತಿಯಲ್ಲಿಯೇ ಮಾಡಿಕೊಳ್ಳಬಹುದು. ಜೋಡಣೆಯ ಕಸೂತಿಯಲ್ಲಿ ಹೇಳಿದಂತೇ ಕೌದಿ 'ಗಾಗಿ, ಚಿಂದಿ ಬಟ್ಟೆಗಳ ಚೀಲಕ್ಕಾಗಿ ಇಲ್ಲವೆ ಗಿಳಿ, ಗುಬಿಗಳನ್ನು ಮಾಡಲು ಉಪಯೋಗಿಸಬಹುದು. ಬಟ್ಟೆಯ ತುಂಡುಗಳು, ಒಂದೇ ಅಳತೆಯ ಸರಿಯಾದ ಚೌಕೋನಗಳಾಗುತ್ತಿದ್ದರೆ, ಅವುಗಳಿಂದ ಸುಂದರವಾದ ಹೂವುಗಳನ್ನೂ ಮಾಡಬಹುದು.



ಹೂವುಗಳನ್ನು ಮಾಡಲು, ಚೌಕೋನ ಬಟ್ಟೆಯ ತುಂಡನ್ನು ತೆಗೆದುಕೊಂಡು ಆಕೃತಿಯಲ್ಲಿ ತೋರಿಸಿದಂತೆ, ಎರಡು ಸಲ ತ್ರಿಕೋನದಲ್ಲಿ ಮಡಿಚಬೇಕು. ಬಳಿಕ ಕೆಳಬದಿಗೆ (ಕಾಟಕೋನದ ವಿರುದ್ಧ ಬದಿಗೆ) ಮಡಿಕೆ ಇಲ್ಲದಲ್ಲಿ, ಅದೇ ಬಣ್ಣದ ದಾರದಿಂದ ಎಳೆಗಳನ್ನು ಹಾಕಬೇಕು. ಆಮೇಲೆ ಎಳೆ



ಹಾಕಿದ ದಾರವನ್ನು ಮೆಲ್ಲಗೆ ಜಗ್ಗಿದರೆ, ಕೆಳಗಿನ ಆಕೃತಿಯಲ್ಲಿ ತೋರಿಸಿದಂತೆ, ನಡುವೆ ನಿರಿಗೆ-ನಿರಿಗೆಗಳಾಗಿ ಒಂದು ಪಕಳಿ ಸಿದ್ಧವಾಗುವದು. ಇಂತಹ ಆರು ಅಥವಾ ಏಳು ಪಕಳೆಗಳನ್ನು ಕೂಡಿಸಿ, ನಡುವೆ ಹೊಲಿದು ಗಟ್ಟಿ ಮಾಡಬೇಕು. ನಡುವಿನ ಈ ಹೊಲಿಗೆ ಕಾಣದಂತೆ ಮಾಡಲು, ಪರಾಗದಂತೆ ರೇಶಿಮೆ ಬಟ್ಟೆಯ ಕುಚ್ಚನ್ನು, ಇಲ್ಲದಿದ್ದರೆ, ಒಂದು ಶೋ ಬಟನ್ (ಬೆಡಗಿನ ಗುಂಡಿಯ) ನ್ನು ಇಟ್ಟು ಹೊಲಿದು ಬಿಡಬೇಕು. ಅಂದರೆ ಒಂದು ಹೂ ಸಿದ್ಧವಾಗುವದು. ಜರೀ ಬಟ್ಟೆಯಲ್ಲಿ ಇಂತಹ ಸಣ್ಣ ಸಣ್ಣ ಹೂವುಗಳನ್ನು ತಯಾರಿಸಿ, ಫ್ರಾಕಿನ ಎದೆಯ ಮೇಲೆ

ಇಲ್ಲವೆ ತೋಳಿಗೆ ಸಾಲಾಗಿ ಹಚ್ಚಬಹುದು. ಸಾಟಿನ್ ಬಟ್ಟೆಯಲ್ಲಿ ದೊಡ್ಡ ಹೂವುಗಳನ್ನು ತಯಾರಿಸಿದರೆ, ಒಂದೇ ಬಣ್ಣದಲ್ಲಿ ಅಥವಾ ಬೇರೆ ಬೇರೆ ಬಣ್ಣಗಳಲ್ಲಿ, ಆ ಹೂವುಗಳನ್ನೆಲ್ಲ ಒಟ್ಟಿಗೆ ಒಂದಕ್ಕೊಂದು ಜೋಡಿಸಿ, ವಸ್ತ್ರ ಹೆಣೆದು ತಾಟಿನ ಮೇಲೆ ಹೊದಿಸಲು, ಟೀಪಾಯಿ ಕವ್ಹರ ಎಂದು, ಉಪಯೋಗಿಸಲು ಬರುವದು. ಉಳಿದ ಬಟ್ಟೆಯ ತುಂಡುಗಳನ್ನು ಒಳ್ಳೆಯ ರೀತಿಯಲ್ಲಿ ಉಪಯೋಗಿಸಲು ಇದೂ ಒಂದು ಮಾರ್ಗ ! ಅರಳೆಗೆ ಪಕಳೆಯ ಆಕಾರ ಕೊಟ್ಟು, ಇಂತಹ ಹೂಗಳನ್ನೂ, ಹಸಿರು ಬಣ್ಣ ಹಾಕಿ ಎಲೆಗಳನ್ನೂ ತಯಾರಿಸಿ, ಶೋಭೆಗಾಗಿ ಹೂವಿನ ಗಿಡಗಳನ್ನೂ ಮಾಡಬಹುದು !

## ೧೨. ಸ್ವಯಂಸಿದ್ಧ ಕಸೂತಿ ಯಂತ್ರ

### ( ಆಟೊಮೆಟಿಕ್ ಎಂಬ್ರೊಯಡರಿ ಮಶೀನ್ )

ಕಸೂತಿಯ ಸಾಧನಗಳಲ್ಲಿ ಇದೊಂದು ಹೊಸ ಸಂಶೋಧನೆ. ಈ ಯಂತ್ರ ಬಹಳ ಹಣವನ್ನಾಗಲಿ ಬಹಳ ಸ್ಥಳವನ್ನಾಗಲಿ ಬೇಡುವದಿಲ್ಲ. ಸ್ಥಳದಿಂದ ಸ್ಥಳಕ್ಕೆ ಒಯ್ಯುವ ತೊಂದರೆಯಿಲ್ಲ. ಕುಳಿತಲ್ಲಿ, ನಿಂತಲ್ಲಿ ಈ ಸೂಜಿಯಿಂದ ಚುಚ್ಚಿ ಕಸೂತಿಯನ್ನು ಯಂತ್ರದಲ್ಲಿ ತುಂಬಿಬಿಟ್ಟಂತೆ ತುಂಬುತ್ತಿರಬಹುದು. ನೋಡಲು ಈ ಯಂತ್ರ ಒಂದು ಫೌಂಟನ್‌ಪೆನ್ನಿನಷ್ಟು ಇದೆ. ಇದಕ್ಕೆ ನಾಲ್ಕು ಸೂಜಿಗಳಿರುತ್ತವೆ. ರೇಶಿಮೆ, ಹಾಕುವ ಬಟ್ಟೆ ಇವು ನಯವಾಗಿದ್ದರೆ ಸಣ್ಣ ಸೂಜಿಯನ್ನು ಹಾಕಬಹುದು. ಇಲ್ಲವಾದರೆ, ನಡುವಿನ ಸೂಜಿ ! ಒಂದೆಳೆ ಇರುವ ರೇಶಿಮೆಯನ್ನೇ ಇದಕ್ಕೆ ಉಪಯೋಗಿಸಬೇಕು. ಬಟ್ಟೆಯೂ ಸ್ವಲ್ಪ ದಪ್ಪವಾಗಿ, ರಿಂಗಿನಲ್ಲಿ ಬಿಗಿಯಾಗಿ ಕೂತಿರಬೇಕು. ರೇಶಿಮೆಯನ್ನು ಮೊದಲು ಹಿಂಬದಿಯಿಂದ ಹಾಯಿಸಿ ಮೇಲಿನ ತೂತಿನಲ್ಲಿ ತೆಗೆದುಕೊಂಡು ಬಳಿಕ ನಡುವಿನ ಗೆರೆಯ ಮೂಲಕ ಸೂಜಿಯಲ್ಲಿ ಪೋಣಿಸಿ, ಬಳಿಕ ಮೊಳೆಯನ್ನು ಬದಿಗೆ ಸರಿಸಿ ದಾರವನ್ನು ಗಟ್ಟಿಯಾಗಿರಿಸಬೇಕು.

ಸೂಜಿಯನ್ನು ಬಟ್ಟೆಯಲ್ಲಿ ಚುಚ್ಚಿ, ಕೆಳಗೆ ಬರುವ ದಾರವನ್ನು ಎಡಗೈಯ್ಯಿಂದ, ಮೇಲೆ ಜಗ್ಗಲ್ಪಡದಂತೆ ತಡೆದು ಹಿಡಿಯಬೇಕು. ಒಂದು ಸಾಲು

ಹೊಲಿಗೆ ಮುಗಿದಮೇಲೆ, ರಿಂಗನ್ನು ತಿರುವಿಹಿಡಿದು ಮತ್ತೆ ಕೆಳಗಡೆಗೆ ಸಾಲು ಪ್ರಾರಂಭಿಸಬೇಕು. ಮೇಲೆ, ಎಳೆಯಂತೆ ಹೊಲಿಗೆ ಬಂದರೆ ಕೆಳಗೆ, ಉಂಗುರುಂಗುರಾಗಿ ಎಳೆಗಳು ಬರುವವು. ಕಸೂತಿಯನ್ನು ತೀರ ಹತ್ತಿರ ಹತ್ತಿರ ಹೊಲಿಗೆಯಿಂದ ಹಾಕಬೇಕು. ಕೆಳಗೆ ಹೆಚ್ಚು ಕಡಿಮೆ ಉದ್ದವಾಗಿ ಬಂದಿರುವ, ಉಂಗುರದಂತಹ ರೇಶಿಮೆಯ ಎಳೆಗಳನ್ನು ಒಂದೇ ಪಾತಳಿಯಲ್ಲಿ ಕತ್ತರಿಸಿಬಿಡಬೇಕು. ಅಂದರೆ ರೇಶಿಮೆಯಿಂದ ಗುತ್ತಾಗಿ ಹೆಣೆದಂತೆ ಮೇಲ್ಭಾಗ ಕಾಣಿಸುವದು. ಈ ಕತ್ತರಿಸಿದ ಭಾಗವೇ ಮೇಲಿನದು. ಈ ತರಹದ ಕಸೂತಿಯಲ್ಲಿ ಗಿಳಿ, ನಾಯಿ, ಹೂ, ಎಲೆ, ಬಳ್ಳಿಗಳು, ಬಹಳ ಸುಂದರವಾಗಿ ಕಾಣಿಸುವವು. ಕಸೂತಿಯನ್ನು ಹಾಕಿದ ಮೇಲೆ ಬಟ್ಟೆಯನ್ನು ತೊಳೆಯುವಂತಿಲ್ಲ. ಕಾಜಿನ ಕಟ್ಟಿನಲ್ಲಿ ಕೂಡಿಸಿಟ್ಟರೇ ಕಸೂತಿಯ ಅಂದ ಹೆಚ್ಚು !

ಈ ಯಂತ್ರದಿಂದ ಸರಪಳಿಹೊಲಿಗೆ, ಮತ್ತಿತರ ಹೊಲಿಗೆಗಳನ್ನೂ ಹಾಕಿ ಕಸೂತಿಯನ್ನು ತುಂಬಬಹುದು.

---

ಪ್ರಕರಣ ೬

# ಅ) ಕನ್ನಡಿ ಕಟ್ಟಿನಲ್ಲಿಯ ಕಸೂತಿ !

ನಿತ್ಯದ ಉಡುಪಿನಲ್ಲಿ, ಬೆಡಗಿನ ಬಟ್ಟೆಗಳಲ್ಲಿ, ಕಿಟಿಕಿ ಬಾಗಿಲುಗಳಿಗೆ ಹೊದ್ದಿಸಿದ ವಸ್ತ್ರಗಳಲ್ಲಿ, ವಿವಿಧ ರೀತಿಯಲ್ಲಿ ರೇಶಿಮೆಯಿಂದ ಹೆಣೆದು ಕಸೂತಿಯನ್ನು ಹಾಕಬಹುದು; ಇಂತಹ ಬಟ್ಟೆಗಳನ್ನು ಮೇಲಿಂದ ಮೇಲೆ ತೊಳೆದು ಸ್ವಚ್ಛವಾಗಿರಿಸಬಹುದು. ಆದರೆ ಜೀಗಿನ ಕಸೂತಿ, ಇಲ್ಲವೆ ಮಣಿಕಸೂತಿಯ ಬಟ್ಟೆಗಳನ್ನು ಹೀಗೆ ತೊಳೆಯಲು ಬರುವದಿಲ್ಲ. ಅವುಗಳನ್ನು ಕನ್ನಡಿಯ ಕಟ್ಟಿನಲ್ಲಿರಿಸಿದರೇ, ಬಹುಕಾಲ ಅಂದವಾಗಿ ಬಾಳುವವು.

ಕಟ್ಟಿನಲ್ಲಿರುವ ಕಸೂತಿಯಲ್ಲಿ, **ಮಣಿಕಸೂತಿಯೊಡನೆ** ಇನ್ನೂ ಅನೇಕನ್ನು ಸೇರಿಸಿ ಹೇಳಬಹುದು. **ಚಿಪ್ಪಿನಕಸೂತಿ, ಉಳ್ಳೇಗಡ್ಡಿಯ ಸಿಪ್ಪೆ, ಯಾಲಕ್ಕಿ ಸಿಪ್ಪೆಗಳ ಕಸೂತಿ, ತೆಂಗಿನ ಜುಬ್ಬ, ಬೆಂಕೀಕಡ್ಡಿಗಳ ಕಸೂತಿ, ಕೂದಲಿನ ಕಸೂತಿ** ಇವೇ ಮೊದಲಾದವುಗಳು. ಇತ್ತೀಚೆಗೆ, ಯಾವುದೇ ಒಂದು ಡಿಝಾಯಿನನ್ನು ಶೇಡಿಂಗ ರೇಶಿಮೆಯಲ್ಲಿ ವಿವಿಧ ಹೊಲಿಗೆಗಳಿಂದ ತುಂಬಿ, ತುಂಬಲು ಬಾರದಂತಹ ಹಿನ್ನೆಲೆಯನ್ನು ಬಣ್ಣದ ಕುಂಚದಿಂದ ತಿದ್ದಿ, ಕನ್ನಡಿಯ ಕಟ್ಟಿನಲ್ಲಿ ಹಾಕಿಡುವದು ವಿಶೇಷ ಪ್ರಚಾರದಲ್ಲಿ ಬಂದಿದೆ.

ಬೇರೆ ಬೇರೆ ಬಣ್ಣದ ಮಣಿಗಳನ್ನು ಅದೇ ಬಣ್ಣದ ದಾರದಲ್ಲಿ, ಅಥವಾ ಜಿನುಗು ತಂತಿಯಲ್ಲಿ ಪೋಣಿಸಿ ಎಲೆ, ಹೂವಿನ ಪಕಳಿಗಳ ಆಕಾರದಂತೆ, ಸಾಲಾಗಿಟ್ಟು ಅಲ್ಲಲ್ಲಿ ಹೊಲಿಗೆಗಳನ್ನು ಹಾಕಿ, ಪೋಪ್ಲಿನ್ ಅಥವಾ ಮಖಮಲ್ ಬಟ್ಟೆಯ ' ಮೇಲೆ ಕೂಡಿಸುವಂತೆ ಉಳ್ಳೇಗಡ್ಡಿಯ ಸಿಪ್ಪೆಯನ್ನೂ ಕೂಡಿಸುವರು.

ಉಳ್ಳೇಗಡ್ಡಿಯಲ್ಲಿ ಕೀರ ವೇಲಿನ ಪದರನ್ನು ತೆಗೆದುಬಿಟ್ಟರೆ ಕೆಳಗೆ ಒಣದಾಗಿಯೂ, ಹೊಳಪುಳ್ಳದ್ದಾಗಿಯೂ ಇರುವ ಮತ್ತೊಂದು ಪದರು ಕಂಡು ಬರುವದು. ಕೆಂಪು ಉಳ್ಳೇಗಡ್ಡಿಯಲ್ಲಿಯ ಈ ಪದರು ಗುಲಾಬಿ ಬಣ್ಣದಿಂದ

ಬಹಳ ಸುಂದರವಾಗಿ ಕಾಣುವದು. ಇದನ್ನು ಬೇರೆ ಬೇರೆ ಹೂವಿನ ಪಕಳೆಗಳ ಆಕಾರದಂತೆ ಕತ್ತರಿಸಿ, ಬಟ್ಟೆಯ ಮೇಲಿಟ್ಟು, ಅದೇ ಬಣ್ಣದ ಒಂದೆಳೆ ರೇಶಿಮೆಯಿಂದ ಎಲೆ ಹೂಗಳ ತುದಿಯಲ್ಲಿ, ಬದಿಯಲ್ಲಿ ಒಂದೊಂದು ಎಳೆಯನ್ನು ಹಾಕಬೇಕು. ಹೆಚ್ಚಾಗಿ ಎಲೆಯ ಕೊರಕಲಲ್ಲಿ ಹೂವಿನ ಪಕಳೆ ಬಾಗಿದಲ್ಲಿ, ಹೊಲಿಗೆ ಹಾಕಿ ಗಟ್ಟಿ ಮಾಡಬೇಕು. ಅಂದರೆ ಸಿಪ್ಪೆ ಮಡಿಚಿಕೊಳ್ಳುವದಿಲ್ಲ. ಈ ಸಿಪ್ಪೆಯ ಕಸೂತಿಯನ್ನು ಕಟ್ಟಿನಲ್ಲಿಟ್ಟು ದೂರದಿಂದ ನೋಡಿದರೆ ಸುಂದರವಾಗಿ ಕಾಣಿಸುವದು.

ಯಾಲಕ್ಕಿ ಸಿಪ್ಪೆಯ ಕಸೂತಿಗೆ, ಸಿಪ್ಪೆಗೆ ಯೋಗ್ಯವಾದಂಥ ಸಣ್ಣ ಸಣ್ಣ ಎಲೆ ಹೂಗಳ ಡಿಝಾಯಿನು ಸುಂದರವಾಗಿ ಕಾಣುವದು. ಯಾಲಕ್ಕಿಯ ಸರವನ್ನು ಮಾಡಿದರೆ ಮೊಗ್ಗೆಗಳ ಸರದಂತೆ ಅದೊಂದು ರೀತಿಯಲ್ಲಿ ಅಂದವಾಗಿರುವದು. ಆದರೆ ಕಾಳನ್ನು ತೆಗೆದು ಸಿಪ್ಪೆಯನ್ನು ಬಿಚ್ಚಿದರೆ, ಅದರಲ್ಲಿ ಸರಿಯಾದ ಮೂರು ಪಕಳೆಗಳು ಕಾಣುವವು. ಇಂತಹ ಪಕಳೆಗಳ ಹೂವೇ ಮಖಮಲ್ಲಿನಲ್ಲಿದ್ದರೆ, ಯಾಲಕ್ಕಿ ಸಿಪ್ಪೆಯ ಹೂವು ಚೆನ್ನಾಗಿ ಕಾಣುವದು. ಆರು ಪಕಳೆಗಳ ಹೂವನ್ನೂ ಮಾಡಬಹುದು. ಆದರೆ ಯಾಲಕ್ಕಿಯ ಸಿಪ್ಪೆಗಳನ್ನು ಒಂದರ ಮೇಲೊಂದರಂತೆ ಎಲ್ಲ ಹೂವುಗಳಲ್ಲಿ ಏರಿಸುತ್ತ ಹೋದರೆ ಅಷ್ಟೊಂದು ಚೆಂದವಾಗಿ ಕಾಣದು. ಒಂದು ಹೂವಿನಲ್ಲಿ ಹಾಗೆ ಮಾಡಬಹುದು. ಯಾಲಕ್ಕಿ ಸಿಪ್ಪೆಯನ್ನಾದರೂ ಬಟ್ಟೆಯ ಮೇಲಿಟ್ಟು ತಿಳಿ ಹಳದಿ ರೇಶಿಮೆಯಿಂದ ಅಲ್ಲಲ್ಲಿ ಹೊಲಿಗೆ ಹಾಕಿ, ಗಟ್ಟಿಮಾಡಬೇಕು. ಸಿಪ್ಪೆಯನ್ನು ನೀರಿನಲ್ಲಿ ಎದ್ದಿ ಸ್ವಲ್ಪ ಆರಿದಮೇಲೆ, ಇಟ್ಟು ಹೊಲಿಗೆ ಹಾಕಿದರೆ ಹೊಲಿಗೆ ಗಟ್ಟಿಯಾಗಿ ಕೂಡುವದು.

ತೆಂಗಿನ ಜುಬ್ಬದಿಂದ ಅನೇಕವಿಧದ ಕಲಾಕೃತಿಗಳನ್ನು ಮಾಡಬಹುದು. ಒಂದೇ ಗಾತ್ರದ ಸಮನಾದ ಎಳೆಗಳನ್ನು ಆರಿಸಿ, ಸರಪಳಿಯನ್ನು ಮಾಡಿ, ನಡುವೆ ಒಂದು ಪದಕವನ್ನು ಸೇರಿಸಿದರೆ, ಬಂಗಾರದ ಕೊರಳ ಸರದಂತೆಯೇ, ಸರಪಳಿ ನಯವಾಗುತ್ತದೆ.

ಮಖಮಲ್ಲಿನಲ್ಲಿ ಅಥವಾ ಬಟ್ಟೆಯ ಮೇಲೆ ಜುಬ್ಬದಿಂದ ಕಸೂತಿ ಹಾಕುವದಾದರೆ, ಅದಕ್ಕೂ ಯೋಗ್ಯವಾದಂಥ ಡಿಝಾಯಿನ್ ಬೇಕು. ಉದಾಹರಣೆಗೆ ತೆಂಗಿನಗಿಡಗಳುಳ್ಳ ಸಮುದ್ರದ ದಂಡೆ, ದೂರದಲ್ಲಿ ಹುಲ್ಲುಚಪ್ಪರದ ಎರಡು ಗುಡಿಸಲುಗಳು, ಸಮುದ್ರದ ನೀರಿನಲ್ಲಿ ತೇಲಿಬರುವ ತೆಂಗಿನಕಾಯಿ,

ಸೊಪ್ಪಿಗಳು, ಇದ್ದರೆ ಅಂತಹ ಡಿಝಾಯಿನನ್ನು ಜುಬ್ಬದಿಂದ ಹಾಕಬಹುದು. ಸರಿಯಾದ ಎಳೆಗಳನ್ನು ಬೇಕಾದ ಆಕಾರದಲ್ಲಿ ಬೇಕಷ್ಟು, ಆರಿಸಿ ಕತ್ತರಿಸಿ ಕೊಂಡು, ಅದೇ ಬಣ್ಣದ ರೇಶಿಮೆಯಿಂದ, ಅಲ್ಲಲ್ಲಿ ಹೊಲಿಗೆ ಹಾಕಿ, ಗುಡಿ ಸಲಿನ ಚಪ್ಪರಕ್ಕೆ ಹೊದಿಸಬೇಕು. ತೆಂಗಿನಗರಿಗಳಿಗೂ ಜುಬ್ಬವನ್ನೇ ಉಪ ಯೋಗಿಸಬಹುದು. ಇನ್ನುಳಿದ ಕಡೆಗೆ, ರೇಶಿಮೆಯಿಂದಲೇ ಹೆಣೆದು ಕಸೂತಿ ಯನ್ನು ಪೂರೈಸಬೇಕು.

ಬೆಂಕೀಕಡ್ಡಿಗಳನ್ನು ಕೊರೆದು ಒಗೆದರೆ ಕಡ್ಡಿಯಲ್ಲಿಯ ಅರ್ಧಭಾಗ ಸುಡದೇ ಉಳಿದಿರುವದು. ಅಂತಹ ಕಡ್ಡಿಗಳನ್ನೆಲ್ಲ ಸಂಗ್ರಹಿಸಿ, ಅದರಿಂದಲೂ ಮಖಮಲ್, ಅಥವಾ ಬಟ್ಟೆಯ ಮೇಲೆ, ಡಿಝಾಯಿನನ್ನು ತುಂಬಬಹುದು. ಕಡ್ಡಿಗಳನ್ನು ಕೊರೆದು ಸಣ್ಣದೊಡ್ಡ ಆಕಾರದಲ್ಲಿ ಉಪಯೋಗಿಸಬಹುದು; ಇವಕ್ಕೆ ಅನುಕೂಲವಾದ ಡಿಝಾಯಿನ್ ಮಾತ್ರ ಬೇಕು. ಕಡ್ಡಿಗಳನ್ನು ಒಂದರ ಹೊಂದಿಗೆ ಒಂದನ್ನಿಟ್ಟು, ಜೋಡಿಸಿ ಎಳೆ ಹಾಕಿ, ಮನೆಯ ಬಾಗಿಲು, ಕಿಟಕಿಗಳನ್ನು ತುಂಬಬಹುದು, ಗಿಡ, ಚಕ್ಕಡಿಗಳನ್ನು ಹೆಣೆಯಬಹುದು. ಡಿಝಾಯಿನಿನ ಇನ್ನುಳಿದ ಭಾಗಗಳನ್ನು ರೇಶಿಮೆಯಿಂದಲೇ ತುಂಬಬೇಕು. ಈ ಕಸೂತಿಯನ್ನಾದರೂ, ಸಾಧ್ಯವಾದರೆ ಹಿನ್ನೆಲೆಯನ್ನು ಬಣ್ಣದ ಕುಂಚದಿಂದ ಚಿತ್ರಿಸಿ, ಕನ್ನಡಿ ಕಟ್ಟಿನಲ್ಲಿಯೇ ಇಡಬೇಕು.

ಕೂದಲಿನ ಕಸೂತಿ, ದೂರದಿಂದ ನೋಡಿದರೆ, ಪೆನ್ಸಿಲ್ಲಿನಿಂದ ಗೆರೆಗಳನ್ನೆಳೆದು, ಕಪ್ಪು ಛಾಯೆಯನ್ನು ತಂದಂತೆ ಬಹಳ ಅಂದವಾಗಿ ಕಾಣುವದು. ಕೂದಲನ್ನು ಸೂಜಿಯಲ್ಲಿ ಪೋಣಿಸಿಯೇ, ಸಾಟಿನ್ ಹೊಲಿಗೆಯಲ್ಲಿ ( ಆದರೆ ಕೆಲವೆಡೆಗಳಲ್ಲಿ ಸ್ವಲ್ಪ ದೂರ ದೂರವಾಗಿ) ತುಂಬುವರು. ವಿಶೇಷವಾಗಿ ವ್ಯಕ್ತಿ ಗಳನ್ನು ಈ ಕೂದಲಿನ ಕಸೂತಿಯಲ್ಲಿ ಚಿತ್ರಿಸಿದರೆ, ನಯವಾಗಿ ಸಜೀವ ವ್ಯಕ್ತಿ ಯಂತೆ, ಮುಖದ ಮೇಲಿನ ಭಾವ ವ್ಯಕ್ತವಾಗುವದು.

ಇದೇ ರೀತಿ ಉಣ್ಣೆ, ಗೋಪು, ಸಿನೇಲ ಇತ್ಯಾದಿಗಳಿಂದಲೂ ಕಸೂತಿ ಯನ್ನು ಹಾಕಬಹುದು. ಪೇಟೆಯಲ್ಲಿ ದೊರೆಯುವ ಸಾಟಿನ್ ಬಟ್ಟೆಯ ಎಲೆ ಹೂಗಳನ್ನು ಕೊಂಡುತಂದು ಹಚ್ಚಿಹೊಲಿಯುವದು, ಉಳಿದೆಲ್ಲಕ್ಕಿಂತ ಸುಲ ಭದ ಮಾರ್ಗ ! ಕಟ್ಟಿಗೆಯನ್ನು ಮೇಲಿನ ಪಾತಳಿಯಲ್ಲಿ ಸರಿಗೊಳಿಸುವಾಗ ಸುರುಳಿ ಸುರುಳಿಯಾಗಿ ಉರುಳಿದ ಹೂವಿನಂತಹ ಕಟ್ಟಿಗೆ, ಯಂತ್ರದಲ್ಲಿ

ಪೆನ್ಸಿಲ್ ಕೆತ್ತುವಾಗ, ಹೊರಹೊರಡುವ ಸುಳಿಸುಳಿಯಾದ ಕಟ್ಟಿಗೆ, ಇವುಗಳಿಗೆ ಬಣ್ಣ ಕೂಡ ಹಾಕಿ, ಕಸೂತಿ ಹಾಕಲು ಉಪಯೋಗಿಸುವರು. ವಿಶೇಷವಾಗಿ ಗಂಧದ ಕಟ್ಟಿಗೆ ದೊರೆಯುವಲ್ಲಿ, ಆ ಕಟ್ಟಿಗೆ ಸುರಳಿಗಳಿಂದ ಹೂಮಾಲೆ, ಕಸೂತಿಗಳನ್ನು ಮಾಡುವರು.

ಅಂತೂ ನಾವು ನಿರುಪಯುಕ್ತವೆಂದು ತಿಳಿದಿರುವ ವಿವಿಧ ವಸ್ತುಗಳನ್ನು ಒಂದೆಡೆ ಅಂದವಾಗಿರುವಂತೆ ಇರಿಸಿ ಕಸೂತಿ ಹೆಣೆಯುವದು ಈ ಕಾಲದ ವೈಶಿಷ್ಟ್ಯ.

## ಬ) ಅಲಂಕಾರದ ಪೆಟ್ಟಿಗೆ

### ( ಆರ್ನಾಮೆಂಟ ಬಾಕ್ಸ )

ಇತ್ತೀಚೆ ಅಲಂಕಾರದ ವಸ್ತುಗಳಲ್ಲಿ ವೈವಿಧ್ಯ ಮತ್ತು ಬೆಡಗು ನಯ ನಾಜೂಕುಗಳು ಕಂಡುಬಂದಂದಿನಿಂದ, ಅವುಗಳನ್ನು ಇಡುವ ಸ್ಥಳದಲ್ಲಿಯೂ ಉಪಯೋಗಿಸುವಲ್ಲಿಯೂ ನಯ-ನಾಜೂಕುಗಳು ಅವಶ್ಯವಾಗಿ ಬೇಕಾಗಿವೆ. ಅವುಗಳಿಗೆ ಯಾವುದೇ ವಿಧದಲ್ಲಿ ಧಕ್ಕೆಯಾಗದಂತೆ, ಮೆತ್ತನ್ನ ಗಾದೆಯಲ್ಲಿ ಇಡಬೇಕಾಗುತ್ತದೆ. ಅದಕ್ಕಾಗಿ ಅಲಂಕಾರದ ಪೆಟ್ಟಿಗೆ ಇಂದು ವಿಶೇಷ ಮಹತ್ವದ್ದಾಗಿದೆ.

ದಪ್ಪ ರಟ್ಟಿನಲ್ಲಿ ಪೆನ್ಸಿಲ್ಲಿನಿಂದ ನಾಲ್ಕೂ ಬದಿಗೆ ಗೆರೆಗಳನ್ನು ಹಾಕಿಕೊಂಡು, ಪೆಟ್ಟಿಗೆಯ ತಳವನ್ನು ಗುರುತಿಸಿಕೊಳ್ಳಬೇಕು. ಪೆಟ್ಟಿಗೆಯ ಎತ್ತರಕ್ಕೆ ಬೇಕಾಗುವಷ್ಟು ರಟ್ಟು ನಾಲ್ಕೂ ಬದಿಗೆ ಇರಬೇಕು. ಗೆರೆ ಹಾಕಿದಲ್ಲಿ ರಟ್ಟನ್ನು ಮಡಿಚಿ, ಮೂಲೆಯಲ್ಲಿ ಕತ್ತರಿಸಿ, ಕೆಳಗೆ ಮಡಿಚಿದಲ್ಲಿ ಮತ್ತು ಮೂಲೆಯಲ್ಲಿ, ಬೇರೆ ಕಾಗದವನ್ನು ಅಂಟಿನಿಂದ ಹಚ್ಚಿ ಗಟ್ಟಿಮಾಡಿಕೊಳ್ಳಬೇಕು. ಮೇಲಿನ ಮುಚ್ಚಳವನ್ನೂ ಹೀಗೆಯೇ ತಯಾರಿಸಿಕೊಂಡಿರಬೇಕು. ಬಳಿಕ ನಾಲ್ಕೂ ಬದಿಗೆ ಡಿಝೈನ ಬರುವಂತೆ ಡಿಝೈಯಿನ್ ತೆಗೆದ ಸಾಟಿನ್ ಬಟ್ಟೆಯನ್ನು ಕೆಳಗಡೆಯಿಂದ ಹೊದಿಸಿ, ಮೇಲೆ ತೆಗೆದುಕೊಂಡು ಪೆಟ್ಟಿಗೆಯ ಒಳಗಡೆ ಮಡಿಚಿಕೊಳ್ಳಬೇಕು. ತಳಕ್ಕೂ ಅರಳೆಯನ್ನು ಹಾಕಿ,

ಪೆಟ್ಟಿಗೆಯ ಅಂಚಿನಲ್ಲಿ ಒಳಗಡೆ ಮೇಲಿನಿಂದ ಬಂದ ಸಾಟಿನ್ ಬಟ್ಟೆಗೂ, ತಳದ ಬಟ್ಟೆಗೂ ಅದೇ ಬಣ್ಣದ ರೇಶಿಮೆಯಿಂದ ಹೊಲಿಗೆ ಹಾಕಿ ಬಿಡಬೇಕು. ಮೇಲಿನ ಮುಚ್ಚಳಕ್ಕೂ ಪೆಟ್ಟಿಗೆಯ ಮೇಲ್ಭಾಗದಲ್ಲಿ ಡಿಝೈಯಿನ್ ಬರುವಂತೆ ಸಾಟಿನ್ ಬಟ್ಟೆಗೆ ಡಿಝೈಯಿನ್ ಹಾಕಿ ಹೊದ್ದಿಸಬೇಕು.

ಪೆಟ್ಟಿಗೆ ಒಳಗಡೆಗೆ, ಬಳೆಗಳನ್ನಿಡಲು, ಸತ್ತನ್ನಿಡಲು ಸ್ಥಳವನ್ನು ಪ್ರತ್ಯೇಕ ಮಾಡಬೇಕಾದರೆ, ರಟ್ಟು ಕೂಡಿಸುವಾಗಲೇ, ಬೇರೆ ರಟ್ಟಿನ ತುಂಡುಗಳಿಂದ ತಯಾರಿಸಿಕೊಳ್ಳಬೇಕು.

ಇಂತಹ ಪೆಟ್ಟಿಗೆ, ಕಾಣಿಕೆಯಾಗಿ ಕೊಡಲು, ಬಹಳೇ ಉಪಯುಕ್ತವೂ ಸುಂದರವೂ ಆಗಿರುವದು.

## ಕ) ಜಪಾನಿ ರೇಶಿಮೆಯ ಕಸೂತಿ

ಜಪಾನೀ ರೇಶಿಮೆಯ ಎಳೆಯು ಹೆಣಿಕೆ ಹಾಕಿದಂತಿರುತ್ತದೆ. ಆ ಹೆಣಿಕೆಯಾದ ಎಳೆಗಳಲ್ಲಿ ಒಂದನ್ನೇ ಹಿಡಿದು ಎಳೆಯಬೇಕು. ಅದು ಒಂಟಿಯಾಗಿದ್ದರೂ ಗುಂಜುಗುಂಜಾಗುತ್ತದೆ. ಅದಕ್ಕೆ ಟ್ಯಾಂಬೂರ್ ಕಸೂತಿಗೆ ಉಪಯೋಗಿಸುವ ಸೂಜನಿನಂತೆ ಉದ್ದವಾದ ಸೂಜಿ ಇರುತ್ತದೆ. ಅದರಲ್ಲೂ ಈ ಎಳೆಯನ್ನು ಪೋಣಿಸಿ ರಿಂಗಿನಲ್ಲಿ ಕೂಡಿಸಿದ ಬಟ್ಟೆಯ ಮೇಲಿರುವ ಚಿತ್ರದಲ್ಲಿ ತುಂಬುವಂತೆ ಚುಚ್ಚುತ್ತ ಹೋಗಬೇಕು.

ಹೆಣಿಕೆಯಾದ ಎಳೆಗಳಲ್ಲಿ ಒಂದನ್ನೇ ಹಿಡಿದು ಎಳೆಯದೇ ಎರಡು ಎಳೆಗಳನ್ನು ಒಮ್ಮೆಲೇ ಎಳೆದರೂ ಅಷ್ಟೇ ದಪ್ಪವಾದ ಎಳೆಯು ಹೊರಗೆ ಬರುವದು. ಚಿತ್ರ ತುಂಬುವಾಗ, ದಪ್ಪ ಗೆರೆಗಳನ್ನು ಇದರಿಂದ ತುಂಬಲು ಅನುಕೂಲವಾಗುವದು.

ಜಪಾನಿ ರೇಶಿಮೆಯಿಂದ ತುಂಬುವಾಗ ಉಪಯೋಗಿಸುವ ಬಟ್ಟೆಯು ಉಣ್ಣೆಯದಿದ್ದರೆ ನೆಟ್ಟಗೆ. ನೂಲಿನ ಬಟ್ಟೆಯನ್ನು ಉಪಯೋಗಿಸುವದಾದರೆ ಕ್ರೇಪನ್ನು ಆರಿಸಬೇಕು.

## ಡ) ರಿಬನ್ನುಗಳು—ಅವುಗಳ ಉಪಯೋಗ

ರಿಬನ್ನುಗಳನ್ನು—ಒಂದು ರೀತಿಯಲ್ಲಾಗಲಿ, ಇನ್ನೊಂದು ರೀತಿಯಲ್ಲಾಗಲಿ—ಎಲ್ಲರೂ ಬಲ್ಲರು. ಚಿಕ್ಕಮಕ್ಕಳು, ಹುಡಿಗೆಯರು ರಿಬನ್ನುಗಳಿಂದ ಜಡೆಯನ್ನಲಂಕರಿಸಿಕೊಳ್ಳುವರು. ಗಾತ್ರದಲ್ಲಿಯೂ, ನಯದಲ್ಲಿಯೂ ರಿಬನ್ನುಗಳಲ್ಲಿ ವಿವಿಧತೆ ಉಂಟು. ತೀರ ಮೊದಲು ಬರುತ್ತಿದ್ದ ರಬ್ಬರಿನ ರಿಬ್ಬನ್ನುಗಳು ಇಂದು ಲೋಕಪ್ರಿಯವಾಗಿಲ್ಲ. ಅದಕ್ಕೆ ಬದಲಾಗಿ, ವಿವಿಧ ಡಿಝಾಯಿನುಗಳುಳ್ಳ ಪ್ಲಾಸ್ಟಿಕ್ ರಿಬನ್ನುಗಳನ್ನು ನಾವಿಂದು ಕಾಣುತ್ತಿದ್ದೇವೆ. ಈ ರಿಬನ್ನುಗಳನ್ನು ಚಾಪೆಯಂತೆ ಹೆಣೆದು ಚೀಲವನ್ನು ತಯಾರಿಸಬಹುದು.

ಎಲ್ಲಕ್ಕಿಂತ ಪ್ರಿಯವಾದ ರಿಬನ್ನುಗಳೆಂದರೆ ಸಾಟಿನ್ ರಿಬನ್ನುಗಳು. ಇವುಗಳಲ್ಲಿ ಅರ್ಧ ಇಂಚು ಅಗಲಳತೆಯಿಂದ ಮೂರು ಇಂಚು ಅಗಲಳತೆಯವರೆಗೂ ವೈವಿಧ್ಯವಿರುತ್ತದೆ. ಬೇಕಾದ ಬಣ್ಣಗಳಲ್ಲಿಯೂ ಈ ರಿಬನ್ನುಗಳು ದೊರೆಯುತ್ತವೆ. ಇತರರಿಗೆ ಕಾಣಿಕೆಯಾಗಿ ಕೊಡುವ ಪ್ರತಿಯೊಂದು ವಸ್ತುವಿನ ಮೇಲೆಯೂ ಇಂದು ಇಂತಹ ಸಾಟಿನ್ ರಿಬನ್ ಇಲ್ಲದಿದ್ದರೆ, ಆ ವಸ್ತುವಿಗೆ ಶೋಭೆಯೇ ಇಲ್ಲ. ಸೀರೆ, ಪತ್ತಲಗಳಲ್ಲಿಯೂ ರಿಬನ್ ಬಾರ್ಡರ ಇರುವದು ಇಂದು ಹೊಸ ಫ್ಯಾಶನ್ನಾಗಿದೆ. ವಾಯಿಲ್, ಆರ್ಗಂಡಿಗಳನ್ನು ತೆಗೆದುಕೊಂಡು ಸಾಟಿನ್ ರಿಬನ್ನುಗಳಿಂದ ಬಾರ್ಡರ ಮಾಡುವದೂ ವಾಡಿಕೆಯಾಗಿದೆ. ಜಾರ್ಜೆಟ್ಟಿನಂತೆ ನಯವಾದ ರಿಬನ್ನುಗಳೂ ಕಸೂತಿಗಾಗಿ ದೊರೆಯುತ್ತವೆ. ಇದರಲ್ಲಿ ಅರ್ಧ ಇಂಚಿನಿಂವ ಒಂದು ಇಂಚಿನವರೆಗೂ ಅಗಲಳತೆಯಿರುತ್ತದೆ. ಇಂತಹ ಶೇಡಿಂಗ ರಿಬನ್ನುಗಳನ್ನು ತೆಗೆದುಕೊಂಡು ಹಸಿರು ರಿಬನ್ನಿನಿಂದ ಎಳೆಗಳನ್ನೂ ತಿಳಿಕೇಸರಿ, ಗುಲಾಬಿಗಳಿಂದ ಹೂಗಳನ್ನೂ

ತುಂಬಬಹುದು. ಜೀಗಿನಕಸೂತಿಯಂತೆ ರಿಬನ್ನನ್ನಾದರೂ ಪಕಳೆಗಳಿಗೆ ಇಟ್ಟು, ಅದೇ ಬಣ್ಣದ ರೇಶಿಮೆಯಿಂದ ಎಳೆ ಹಾಕಬೇಕಾಗುತ್ತದೆ. ತುದಿಗೆ ಟಿಬ್ಬಿ ಹಾಕಿ ಗಟ್ಟಿ ಕೂಡಿಸಿದರೆ ಸಾಕು.

ರೊಕೊಕೊ ರಿಬನ್ನು ಇಂತಹದೇ ಜಾತಿಗೆ ಸೇರಿದ್ದು. ಆದರೆ ಇದು ರಫಿಯಾ ಹುಲ್ಲಿನಂತೆ ನಯವಾಗಿರುತ್ತದೆ. ಇದರ ಅಗಲಳತೆ ⅛ ಇಂಚು ಮಾತ್ರ: ಎಲ್ಲ ಬಣ್ಣಗಳಲ್ಲೂ ಇದು ದೊರೆಯುತ್ತದೆ. ಸಣ್ಣ ಎಲೆ ಹೂಗಳನ್ನು ಈ ರಿಬನ್ನಿನಿಂದ ತುಂಬಿದರೆ ಬಹಳ ಅಂದವಾಗಿ ಕಾಣುವದು.

ರಿಬನ್ನಿನ ಕಸೂತಿಯು ಬಹಳ ಬೇಗ ಮುಂದೆ ಸಾಗುವದು. ಆದರೆ ನಿತ್ಯ ಸ್ವಚ್ಛಮಾಡಿದರೆ ಅದು ತಾಳಲಾರದು. ಕನ್ನಡಿಯ ಕಟ್ಟಿನಲ್ಲಿ ಅದರ ಶೋಭೆ ಇನ್ನೂ ಹೆಚ್ಚು.

---

## ಪ್ರಕರಣ ೭

# ಕೊಕ್ಕೆ ಸೂಜಿಯಿಂದ ನೂಲಿನ ಹೆಣಿಕೆಯ ವಿಧಾನ

ಇದೀಗ ಯಂತ್ರದಲ್ಲಿಯೇ ಉಣ್ಣೆಯಿಂದ (ನಿಟಿಂಗ) ವಸ್ತ್ರಗಳನ್ನು ತಯಾರಿಸಬಹುದಾದರೂ, ಕೈಯಿಂದ ಹೆಣೆದಿರುವ ವಸ್ತ್ರದಲ್ಲಿ ಬರುವ ನಯ ನಾಜೂಕು, ವಿವಿಧ ರೀತಿಗಳು ಅದರಲ್ಲಿ ಬರಲಾರವು. ಕೊಕ್ಕೆಸೂಜಿಯ ಸಹಾಯದಿಂದ ನೂಲಿನಲ್ಲಿ ಹೆಣೆಯುವ ವಸ್ತ್ರದಲ್ಲಾದರೂ ಇದೇ ಹಾಡು. ಯಂತ್ರದಲ್ಲಿ ಹೆಚ್ಚು ಪ್ರಮಾಣದಲ್ಲಿ ತಯಾರಾಗಿ ಅನೇಕರ ಕೊರತೆಯನ್ನು ಈ ಬಟ್ಟೆ ಪೂರೈಸುತ್ತದೆಂಬ ಮಾತನ್ನು ಬಿಟ್ಟರೆ, ಉಳಿದಾವ ವಿಶೇಷ ಲಾಭವೂ ಅದರಲ್ಲಿ ಕಾಣದು.

ಕೊಕ್ಕೆ ಸೂಜಿಯ ಹೆಣಿಕೆ ಅಥವಾ ಕ್ರೋಷೆ ಕೆಲಸ (Crochet) ತುಂಬ ಸುಲಭವಾದುದು. ಇದರ ಮೂಲಸ್ಥಾನ ಫ್ರಾನ್ಸದೇಶವೇನೋ! ಅದರಿಂದಲೇ ಇದಕ್ಕೆ 'ಕ್ರೋಷೆ' (ಕೊಕ್ಕೆ) ಎಂಬ ಹೆಸರು ಬಂದಿದೆ. ವಿರಾಮದ ಸಮಯದಲ್ಲಿ ವಿಶ್ರಾಂತಿಯೆಂತಲೇ ಈ ಕೆಲಸವನ್ನು ಮಾಡುತ್ತಿರಬಹುದು, ಅಷ್ಟು ಸುಲಭವಾಗಿದೆ ಇದು! ಕೊಕ್ಕೆ ಸೂಜಿಯಿಂದ ವಿವಿಧ ಬಗೆಯ ಬೆಡಗಿನ ಲೇಸುಗಳನ್ನು, ಮಕ್ಕಳ, ಪರಕರ, ಫ್ರಾಕ್‌ಗಳಿಗೆ ಅಂಚಿನಂತೆ ಉಪಯೋಗಿಸಲು ತಯಾರಿಸಬಹುದು, ಟೇಬಲ್ ಸ್ಟೂಲುಗಳಿಗೆ ಆವರಣವೆಂದು ವಿವಿಧ ಡಿಝಾಯಿನಿನ ವಸ್ತ್ರಗಳನ್ನು ಬೇರೆಬೇರೆ ಆಕಾರದಲ್ಲಿ ಮಾಡಬಹುದು, ಪಡದೆಗಳನ್ನು ಮನೆಯ ಬಾಗಿಲಿಗೆ ಇಳಿಬಿಡಬಹುದು. ತೋರಣಗಳಿಂದ ಚೌಕಟ್ಟನ್ನು ಅಂದಗೊಳಿಸಬಹುದು. ಎಲ್ಲಿದ್ದರೂ ಸರಿ, ಕೊಕ್ಕೆಸೂಜಿಯ ಹೆಣಿಕೆ ಕಲಾಕೌಶಲ್ಯದ ಬೆಡಗನ್ನು ಪ್ರದರ್ಶಿಸುತ್ತದೆ.

ಈ ಹೆಣಿಕೆಗೆ ಬಿಳಿಯ ದಾರವನ್ನೇ ಹೆಚ್ಚಾಗಿ ಉಪಯೋಗಿಸುವದುಂಟು. (ಇನ್ನುಳಿದ ಬಣ್ಣಗಳನ್ನೂ ಉಪಯೋಗಿಸಬಹುದು.) '೨೦' ನಂಬರಿನ ಬಿಳಿಯ ದಾರವನ್ನುಪಯೋಗಿಸಿದರೆ, ಹೆಣಿಕೆ ತೀರ ಬೇಗನೆ ಮುಗಿದು

ಬಿಡುವದು ಆದರೆ ಅದು ಅಷ್ಟು ನಯುವಾಗಿರುವದಿಲ್ಲ. '೬೦' ನಂಬರಿನ ದಾರ ತುಂಬ ನಾಜೂಕಾಗಿರುವದು. ಬೇಗನೆ ಹೆಣಿಕೆ ಬೆಳೆದಂತೆ ಅನಿಸುವದಿಲ್ಲ. ಅದಕ್ಕೆಂದು ಸಾಮಾನ್ಯವಾಗಿ ಉಪಯೋಗಿಸುವ ದಾರ '೪೦' ನಂಬರಿನದು. ಈ ದಾರದ ಲಡಿಯನ್ನು ತಂದು ಹೆಚ್ಚು ಹೀಚದಂತೆ, ಒಂದು ರೀಲಿಗೆ ಸುತ್ತಿಟ್ಟು ಕೊಳ್ಳಬೇಕು. ಬಳಿಕ ಹಾಕುವಾಗ ಸ್ವಲ್ಪ (ಸುಮಾರು ೨ ಫೂಟು) ಸ್ನೀ ಬಿಚ್ಚಿ ಎಡಗೈ ತೋರಬೆರಳಿಗೆ ಸುತ್ತಿಕೊಳ್ಳಬೇಕು ಅಲ್ಲಿಂದ ದಾರವನ್ನು ಎಡಗೈ ಹೆಬ್ಬೆರಳು ಮತ್ತು ನಡುವಿನ ಬೆರಳುಗಳ ಮೂಲಕ ಸ್ವಲ್ಪ ಸ್ವಲ್ಪ ದಾರವನ್ನು ಬಿಡುತ್ತ ಬಲಗೈಯಲ್ಲಿ ಹಿಡಿದ ಕೊಕ್ಕೆಸೂಜಿಯಿಂದ ಹೆಣೆಯುತ್ತ ಹೋಗಬೇಕು. ಕೊಕ್ಕೆಸೂಜಿಯಲ್ಲಿಯೂ ಬೇರೆ ಬೇರೆ ನಂಬರುಗಳಿರುತ್ತವೆ. ೫–೬ ನಂಬರಿನ ಸೂಜಿ ಸಾಮಾನ್ಯವಾಗಿ ಎಲ್ಲ ಹೆಣಿಕೆಗೂ ಉಪಯೋಗಕ್ಕೆ ಬರುವದು. ಹೆಣೆಯುವದಾದ ಮೇಲೆ ಸೂಜಿಯ ತುದಿಯನ್ನು ರಕ್ಷಿಸಲು ಹಾಕಬೇಕಾದ ಹೊದಿಕೆಯನ್ನು (ಮೇಲಿನ ಮುಚ್ಚಳ) ಮಾತ್ರ ಮರೆಯ ಬಾರದು. ಕಪ್ಪುರದ ಕೊಕ್ಕೆ ಸೂಜಿ ಇರುವದಾದರೂ, ಇದು ಸಾಮಾನ್ಯವಾಗಿ ಉಕ್ಕಿನದೇ.

ನಿಟಿಂಗದಲ್ಲಾಗಲಿ, ಕ್ರೋಷೆ ಕೆಲಸದಲ್ಲಾಗಲಿ, ಮೂಲ ತತ್ವವನ್ನು ತಿಳಿದುಬಿಟ್ಟರೆ, ಅದರಲ್ಲಿ ಬೇಕಾದಷ್ಟು ಬಗೆಯ ಡಿಝಾಯಿನಗಳನ್ನು ಕಲ್ಪಿಸಿ, ಬೇಕಾದ ಆಕಾರದಲ್ಲಿ ಹೆಣೆದುಕೊಳ್ಳಬಹುದು. ಈ ಹೆಣಿಕೆಯಲ್ಲಿ ' ಸರಪಳಿ ' ಯೇ ಮುಖ್ಯವಾದುದು. ದಾರವನ್ನು ಮೇಲೆ ಎತ್ತಿಹಾಕಿ ಹೆಣೆದು ಕೊಂಡರೆ, ಹೆಣಿಕೆ ಸಡಿಲಾಗಿರುವದು, ಇಲ್ಲದಿದ್ದರೆ ಕೊಂಚ ಬಿಗುವಾಗಿ ಮತ್ತೊಂದು ವಿಧವಾಗಿದ್ದಂತೆ ಕಾಣುವದು. ಈ ' ಕಂಭ ' ಸರಪಳಿಗಳನ್ನು ಒಂದಕ್ಕೊಂದು ಜೋಡಿಸುವದರಿಂದಲೇ ಎಲ್ಲ ವಿಧದ ಕ್ರೋಷೆ ಕೆಲಸ ಸಿದ್ಧವಾಗುವದು. ಇದರಲ್ಲಿಯೇ ಮತ್ತೆ ಬೇರೆ ವಿಧಗಳನ್ನು ಕಲ್ಪಿಸುವದಾದರೆ, ಈ ಕ್ರೋಷೆ ಕೆಲಸದಲ್ಲಿ ಏಳು ಬಗೆಯ ಹೆಣಿಕೆಯಿದೆ ಎಂದು ಹೇಳಬಹುದು. ಯಾವ ಬಗೆಯ ಹೆಣಿಕೆಯನ್ನು ಹಾಕುವದಾದರೂ ಎರಡು ಸಾಲುಗಳ ಮಧ್ಯದಲ್ಲಿ ಸರಪಳಿ ಮಾತ್ರ ಅವಶ್ಯಕ.

ಬಲಗೈಯಲ್ಲಿ ಹೆಬ್ಬೆರಳು ತೋರಬೆರಳುಗಳ ನಡುವೆ ಸೂಜಿಯನ್ನು

( ಟಾಕು ಹಿಡಿದಂತೆ ) ಹಿಡಿಯಬೇಕು. ಸೂಜಿಯ ಹಿಂಭಾಗ ನಡುವಿನ ಬೆರಳಮೇಲೆ ಒಲಿದಿದ್ದರೂ ಅಡ್ಡಿಯಿಲ್ಲ. ಈ ಕೊಕ್ಕೆಯನ್ನು ಎಡಗೈಯಲ್ಲಿದ್ದ ದಾರದ ಸುತ್ತಿನಲ್ಲಿ ಸೇರಿಸಿ ಅದರ ನಡುವಿನಿಂದ ಮತ್ತೆ ಹೊಸದಾರವನ್ನು ಎಳೆದುಕೊಳ್ಳಬೇಕು. ಒಂದರಲ್ಲೊಂದು ದಾರದ ಸುತ್ತು ಸೇರಿ ಆಕೃತಿ ೧ರಲ್ಲಿ ತೋರಿಸಿದಂತೆ, ಇದರಿಂದಲೇ ಸರಪಳಿ ಹೆಣಿಕೆ ತಯಾರಾಗುವದು. ಆಕೃತಿಯಲ್ಲಿ ಇದು ಸಾದಾ ಸರಪಳಿಯಂತೆ ಕಂಡರೂ ಇದನ್ನು ಹಾಕುವಲ್ಲಿ ಕೊಂಚ ವ್ಯತ್ಯಾಸವಿರುವದು. ಒಂದು ಸರಪಳಿ ಸಾಲು ಹಾಕಿ ಬಳಿಕ ಎರಡನೆಯ ಸಲ ಹಾಕುವಾಗ ಮೇಲುದಾರವನ್ನು ತೆಗೆದುಕೊಳ್ಳದೆ, ಮೊದಲನೆಯ ಸರಪಳಿಯ ದಾರದ ಸುತ್ತನ್ನೇ ಕೊಕ್ಕಿಯಿಂದ ಎಳೆಕೊಳ್ಳಬೇಕು. ಮೇಲಿನ ದಾರವಿಲ್ಲದ್ದರಿಂದ ನಡುವಿನ ಅಂತರ ತೀರ ಕಡಿಮೆಯಾಗಿ ಎರಡು ಸರಪಳಿಗಳನ್ನು ಹೊಂದಿಸಿದಂತೆ ಕಾಣುವದು.


ಆಕೃತಿ ೧

ಆಕೃತಿ ' ೨ ' ಮೇಲು ದಾರವನ್ನು ಹಾಕಿ ಮೊದಲ ಸಾಲಿನ ಸರಪಳಿಯ ಸುತ್ತಿನಿಂದ ದಾರವನ್ನು ಎಳೆದುಕೊಂಡ ಮಾದರಿಯನ್ನು ತೋರಿಸುತ್ತದೆ. ಇದರಿಂದ ಎರಡು ಸರಪಳಿಗಳ ನಡುವಿನ ಅಂತರ ಸ್ಪಷ್ಟವಾಗಿ ಕಾಣುವದು. ಇದಕ್ಕೆ ಒಂಟಿಕೊಕ್ಕೆ ಹೆಣಿಕೆ ಎಂದು ಹೇಳುವರು.


ಆಕೃತಿ ೨

ಆಕೃತಿ ' ೩ ' ಸಾದಾ ಸರಪಳಿಯಲ್ಲಿ ಕೊಕ್ಕೆಗೆ ಒಂದು ಸಲ ದಾರಸುತ್ತಿ ಅದನ್ನು ಒಳಮುಗ್ಗಲಿನಿಂದ ಎಳೆದುಕೊಂಡರೆ ಈ ಡಿಝೈನ್ ಹುಟ್ಟುತ್ತದೆ. ಇದು ನಾಲ್ಕೂ ಬದಿಗೆ ಕಂಬದಂತೆ ಏಣುಗಳುಳ್ಳದ್ದು. ಈ ಹೆಣಿಕೆಗೆ ಒಂದು ಬಗೆಯ ಮೆರಗು ಬರುತ್ತದೆ.


ಆಕೃತಿ ೩


ಆಕೃತಿ ಳ

ಆಕೃತಿ 'ಳ' ಮೂರು ದಾರದ ಹೆಣಿಕೆ. ಎರಡು ಸಲ ದಾರ ಸುತ್ತಿ ಮೇಲೆ ಮೊದಲ ಸರಪಳಿಯ ಸುತ್ತಿನಲ್ಲಿಯ ಎಳೆಯನ್ನು ಎಳೆದು ಕೊಳ್ಳಬೇಕು. ಇದರಿಂದ ಎರಡು ಸರಪಳಿಗಳ ನಡುವಿನ ಅಂತರ ಸ್ವಲ್ಪ ಹೆಚ್ಚಾಗಿಯೇ ಕಾಣುವದು. ಇದಕ್ಕೆ ಜೋಡು ಕೊಕ್ಕೆ ಹೆಣಿಕೆ ಎನ್ನುವರು. ಇದು ಬಹಳ ಬೇಗ ದೊಡ್ಡದಾಗುವದು.

ಯಾವ ಹೆಣಿಕೆಯೇ ಇರಲಿ ಕ್ರೋಷೆ ಕೆಲಸದಲ್ಲಿ ಒಂದು ಸಾಲಿನ ತುದಿಗೆ ಒಂದೆರಡು ಸರಪಳಿಗಳನ್ನು ಹಾಕಿ. ಅವುಗಳನ್ನು ಹಿಂಬದಿಗೆ ತೆಗೆದು ಕೊಂಡು ಮುಗಿಸಬೇಕು. ಎರಡನೆಯ ಸಾಲನ್ನು ಅಲ್ಲಿಂದಲೇ ಪ್ರಾರಂಭ ಮಾಡಿದರೆ, ಹೆಣಿಕೆ ತಿರುವು-ಮುರುವಾದಂತೆ ಕಾಣುವದು. ಅದಕ್ಕಾಗಿ ಮೊದಲ ಎಳೆಯನ್ನು ಹರಿದು ಮತ್ತೆ ಮೊದಲನೆಯ ಸಾಲನ್ನು ಪ್ರಾರಂಭ ಮಾಡಿದಲ್ಲಿಯೇ ಮಾಡಬೇಕು. ಹೀಗೆ ಮಾಡುವದರಿಂದ ಎರಡೂ ಬದಿಗೆ 'ಕರೆ' ಯುಳಿಯುವದು. ಆ ಮೇಲೆ ಇದನ್ನೆಲ್ಲ ಸರಿ ಪಡಿಸಬಹುದು. ಟೇಬಲ್ ಕ್ಲಾಥ ಇತ್ಯಾದಿಗಳಿಗೆ ಇದು ಅಂದವಾಗಿಯೇ ಕಾಣುವದು.

ಕೊಕ್ಕೆಸೂಜಿ ಕಾಣಲು ಸಣ್ಣದಾಗಿದ್ದರೂ, ಅದರ ಕಾರ್ಯರಂಗ ಮಾತ್ರ ವಿಶಾಲವಾಗಿದೆ.

---

## ಪ್ರಕರಣ ೮

# ಅ) ವಿವಿಧ ಬಣ್ಣಗಳ ತಾರತಮ್ಯ

ಕಸೂತಿಯಲ್ಲಿ ಯಾವ ಬಣ್ಣವನ್ನು ಎಲ್ಲಿ ತುಂಬಬೇಕೆಂದು ಹೇಳಬೇಕೆ ? ಅದೇನು, ಎಲ್ಲರಿಗೂ ಗೊತ್ತಿದ್ದಮಾತು, ಯಾವ ಬಣ್ಣವನ್ನು ತುಂಬಿದರೂ ಚೆನ್ನಾಗಿರುತ್ತದೆ ಎಂದು ಹೇಳುವವರೂ ಇದ್ದಾರೆ. ಬಿಳಿಯ ಬಣ್ಣವನ್ನು ಬಿಟ್ಟು ಇನ್ನಾವ ಬಣ್ಣವನ್ನು ಎಲ್ಲಿ ತುಂಬಿದರೂ ಸರಿ, ಅದು ಬಣ್ಣವೇ ! ನವಿಲನ್ನು ಬಿಳೀ ಬಣ್ಣದಿಂದ, ಗಿಳಿಯನ್ನು ಕೆಂಪು ಬಂಣದಿಂದ ತುಂಬಿದರೂ ಚೆಂದವಾಗಿರುವದಿಲ್ಲವೇ ?

ಕಸೂತಿಯನ್ನು ಹಾಕುವವರೆಲ್ಲ 'ಪೇಂಟಿಂಗ' ಬಲ್ಲವರಾಗಿರಬೇಕೆಂಬು ನನ್ನ ಹಟವಿಲ್ಲ. ಸಾಮಾನ್ಯವಾಗಿ ಕಣ್ತೆರೆದು ಸುತ್ತಲೂ ನೋಡಿದಾಗ, ನಿಸರ್ಗದಲ್ಲಿ ಕಂಡುಬರುವ ವಿವಿಧ ಬಣ್ಣಗಳ ಸವಿಯಾದ ಬೆರಕೆಯನ್ನಾದರೂ ಅವರು ಅರಿತಿರಬೇಡವೇ ? ಎಲೆಗಳ ಬಣ್ಣ ಕಸೂತಿಯಲ್ಲಿಯೂ ಹಸಿರಾಗಿ, ಹೂಗಳ ಬಣ್ಣ ಕೆಂಪಾಗಿದ್ದರೆ ಅದಕ್ಕೊಂದು ವಿಧದ ಕಳೆ ಕಟ್ಟುವದು. ಇದಕ್ಕೆ ವಿರುದ್ಧವಾಗಿದ್ದರೆ ಇದ್ದ ಸೌಂದರ್ಯ ವಿಕಾರಗೊಳ್ಳುವದು. ಕಪ್ಪು ನೀಲಿಯ ಆಕಾಶದಲ್ಲಿ ಹೊಂಬಣ್ಣದ ತಾರೆಗಳು ಮಿನುಗುವಂತೆ ಕರಿಯ ಚಂದ್ರಕಾಳಿ ಸೀರೆಯಲ್ಲಿ ಬಿಳಿಯ ಚಿಕ್ಕೆಗಳು ಕಂಗೊಳಿಸುವದಿಲ್ಲವೇ ?

ನಿಸರ್ಗದಲ್ಲಿಯ ಹಸಿರು ಬಣ್ಣದ ಲಾಭವನ್ನು ಪಡೆಯಲಾರದ ರೋಗಿ ಕೃತ್ರಿಮ ಹಸಿರು ಪ್ರಕಾಶದಿಂದಲಾದರೂ ತನ್ನ ರೋಗವನ್ನು ನಿವಾರಿಸಿಕೊಳ್ಳಬಹುದಂತೆ ! ಆ ಪ್ರಕಾಶ ಚಿಕಿತ್ಸೆಯ ಮಾತು ನಮಗೆ ಬೇಡ, ನಿಜ; ಆದರೆ ನಿಸರ್ಗವನ್ನನುಸರಿಸುವ ಕಲಾವಿದನು ಅಲ್ಲಿಯ ಬೇರೆ ಬೇರೆ ಬಣ್ಣಗಳ ತಾಳ-ಮೇಳವನ್ನೂ ಯೋಚಿಸಬೇಡವೇ ? ಇದೀಗ ಯಾವ ಬಣ್ಣದ ರೇಶಿಮೆಗೂ ಕೊರತೆಯಿಲ್ಲ; ಹಸಿರಿನಲ್ಲಿ ಅನೇಕ ವಿಧ; ನೀಲಿಯಲ್ಲಿ ಇನ್ನೂ ಅನೇಕ; ಹಸಿರು ಮೂಡಿ, ತಿಳಿಹಸಿರು, ಗಿಳಿಹಸಿರು, ಅಚ್ಚಹಸಿರು, ಕಪ್ಪುಹಸಿರು ಇತ್ಯಾದಿ, ಇತ್ಯಾದಿ. ಹೂವು ಎಲೆಗಳು ಕುಸುರು ಸಹಿತ ಮೇಲೆದ್ದು ಬಂದಂತೆ

ತೋರಿಸಲು ವಿವಿಧ ಬಣ್ಣಗಳ ಸಿನೇಲಿದೆ; ಮತ್ತೆ ಇವುಗಳಲ್ಲಿ ಕೋಮಲತೆಯನ್ನು ತೋರಿಸಲು ಛಾಯಾಪ್ರಧಾನ (ಶೇಡಿಂಗ) ಬಣ್ಣಗಳು; ಮೆರುಗಿನ ಹೊಳಪನ್ನು ತೋರಿಸಲು ವಿವಿಧ ಬಣ್ಣಗಳ ಜೀಗಿದೆ; ಮಣಿಗಳಲ್ಲಿಯೂ ವಿವಿಧ ಬಣ್ಣ ! ಕಸೂತಿಯ ಬೇರೆ ಬೇರೆ ಭಾಗಗಳನ್ನು ವಿವಿಧ ಬಣ್ಣಗಳ ರಿಬ್ಬನ್ನುಗಳಿಂದಲೂ ತೀರ ಸ್ವಾಭಾವಿಕವಾಗಿರುವಂತೆ ತುಂಬಬಹುದು. ಬೇರೆ ಬೇರೆ ಬಣ್ಣದ ಬಟ್ಟೆಯ ತುಂಡುಗಳನ್ನು ಹಚ್ಚಿಯೂ ಜೋಡಣೆಯ ಕಸೂತಿ (ಪ್ಯಾಚ್ ವರ್ಕ) ಯನ್ನು ತುಂಬಬಹುದು; ಬಣ್ಣಗಳ ಗೊಂದಲ ಹೆಚ್ಚಾಗಿಲ್ಲದ ಕತ್ತರಿಸಿದ ಕಸೂತಿಯೂ ಇದೆ.

ಇನ್ನು ಇಂಥದೇ ಬಣ್ಣದಿಂದ ಕಸೂತಿಯನ್ನು ಹಾಕಬೇಕೆಂದು ನಿರ್ಧಾರ ಮಾಡಿದಾಗ, ಆ ಬಣ್ಣದ ರೇಶಿಮೆ ಸಾಕಷ್ಟಿದೆಯೋ ಇಲ್ಲವೋ ಎಂಬುದನ್ನು ನೋಡಿಕೊಂಡೇ ತುಂಬಲು ಆರಂಭಿಸಬೇಕು. ಇಲ್ಲವಾದರೆ ಆ ರೇಶಿಮೆ ಅರ್ಧದಲ್ಲಿಯೇ ತೀರಿ, ಬೇರೆ ಬಣ್ಣದ ರೇಶಿಮೆಯನ್ನು ಉಪಯೋಗಿಸಬೇಕಾದ ಪ್ರಸಂಗ ಬರಬಹುದು.

ಕಸೂತಿಯಲ್ಲಿ ಉಪಯೋಗಿಸುವ ಬಣ್ಣ ಆ ಚಿತ್ರದ ದೃಷ್ಟಿಯಿಂದ, ಹಿನ್ನೆಲೆಯ ಬಟ್ಟೆಯ ದೃಷ್ಟಿಯಿಂದ ಉಚಿತವಾದುದಿರಬೇಕು. ಕರಿಯ ಬಟ್ಟೆಯ ಮೇಲೆ ಬಿಳಿಯ ಚಿಕ್ಕೆಗಳನ್ನು, ಬಿಳಿಯ ಬಟ್ಟೆಯ ಮೇಲೆ ಕರಿಯ ಚಿಕ್ಕೆಗಳನ್ನು ಹಾಕಿದರೆ ಎದ್ದು ಕಾಣುತ್ತದೆ. ನೀಲೀರೇಶಿಮೆಯಿಂದ ಕಪ್ಪು ಮೋಡಗಳನ್ನೂ, ತಿಳಿ ನೀಲಿಯಿಂದ ಸರೋವರವನ್ನೂ ಬಿಳೀರೇಶಿಮೆಯಿಂದ ಹಂಸವನ್ನೂ, ಕಪ್ಪು, ಹಸಿರಿನಿಂದ ತೆಂಗಿನ ಎಲೆಗಳನ್ನೂ, ಕಂದಿನಿಂದ ಬೊಡ್ಡೆಯನ್ನೂ ತುಂಬಿದರೆ ಹೆಚ್ಚು ಅಂದವಾಗಿ ಕಾಣುವದು. ಇದೇನೋ ಚಿತ್ರಮೂಡಿಸಿಕೊಂಡು ತುಂಬುವ ಕಸೂತಿಯಾಯಿತು. ಇನ್ನು ಉಡುಪಿನ ಮೇಲೆ ಅಥವಾ ಬಾಗಿಲು ಕಿಟಕಿಗಳ ಪರದೆಗಳ ಮೇಲೆ ದೊಡ್ಡ ದೊಡ್ಡ ಚಿತ್ರಗಳನ್ನು ಕಷ್ಟಪಟ್ಟು ತುಂಬುವದಕ್ಕಿಂತ, ಸುತ್ತಲೂ ಅಂಚಿಗೆ ಎದ್ದು ಕಾಣುವ ರೇಶಿಮೆಯಿಂದ ಒಂದು ಎಳೆ ಸರಪಳಿಯನ್ನೋ ಅಥವಾ ರಿಕ್ಕೆ ಹೊಲಿಗೆಯನ್ನೋ ಹಾಕಿಬಿಟ್ಟರೆ ಅಂದವಾಗಿ ಕಾಣುವದು; ಮತ್ತೆ ಉಡುಪು ನಾಜೂಕಾಗಿಯೂ ಕಾಣುವದು.

೪ ಕಸೂತಿ ಅಂದವಾಗಿ ಮೂಡಲು ಬಣ್ಣಗಳ ಜ್ಞಾನ ಮಾತ್ರ ಅತ್ಯವಶ್ಯ.

# ಬ) ಹೆಣಿಕೆ ಕಸೂತಿಯ ಬಟ್ಟೆಗಳನ್ನು ತೊಳೆಯುವ ವಿಧಾನ

೧

ನೂಲಿನ ಬಟ್ಟೆಗಳನ್ನು ದಿನಾಲು ಉಪಯೋಗಿಸುತ್ತೇವೆ. ಒಗೆಯುವ ಸೋಡಾ, ಸಬಕಾರ ಇತ್ಯಾದಿಗಳನ್ನು ಹಾಕಿ ಅವುಗಳನ್ನು ಒಗೆಯುತ್ತೇವೆ. ಹಸನಾಗಿರಿಸುತ್ತೇವೆ. ನಯವಾದ ಬಟ್ಟೆಗಳಿಗೆ, ರೇಶಿಮೆಯ ಜಿನುಗು ಬಟ್ಟೆಗಳಿಗೆ ಈ ಸೋಡಾ ಸಬಕಾರಗಳನ್ನು ಹಾಕುವದು ಕೂಡ ಅಪಾಯಕರವೇ ರೇಶಿಮೆಯ ಬಟ್ಟೆಗಳನ್ನು ಹೆಚ್ಚು ವೆಚ್ಚವಿಲ್ಲದೆ ಅರಟಳಕಾಯಿಯ ನೊರೆಯಲ್ಲಿ ತೊಳೆಯಬಹುದು. ಇದರಿಂದ ಬಟ್ಟೆಯ ಅಲ್ಪ ಸ್ವಲ್ಪ ಕೊಳೆಯೂ ಹೋಗುವದು, ಬಟ್ಟೆಯ ಹೊಳಪೂ ಉಳಿಯುವದು. ಕೆಲವನ್ನು ಉದಾಹರಣೆಗೆ ಉಣ್ಣೆಯ ಬಟ್ಟೆಗಳನ್ನು, ಜಾರ್ಜಟ, ಆರ್ಗಂಡೀ ಇತ್ಯಾದಿಗಳನ್ನು ಹಲವು ಸಲ ಉಪಯೋಗಿಸಿದ ಮೇಲೆ ಸ್ವಚ್ಛ ಮಾಡಬೇಕಾಗುವದು; ಆದರೆ ನೀರಿನಲ್ಲಿ ತೋಯಿಸಿ ಒಗೆದರೆ ಬಟ್ಟೆಯ ಸ್ವರೂಪವೇ ಬದಲಾಗಿ ಹೋಗುವದು. ಅಂಥವುಗಳನ್ನು ಪೆಟ್ರೋಲಿನ ಸಹಾಯದಿಂದ ಸ್ವಚ್ಛ ಮಾಡಬೇಕಾಗುವದು. ಅದರಂತೆ ಹೆಣೆದ ಬಟ್ಟೆ, ಕಸೂತಿಯ ಬಟ್ಟೆಗಳನ್ನೂ ತೊಳೆಯುವ ವಿಧಾನ ಬೇರೆಯಾಗಿಯೇ ಇರುತ್ತದೆ.

**ನೂಲಿನ ಲೇಸನ್ನು ತೊಳೆಯುವ ರೀತಿ** : ಲೇಸನ್ನು ಒಂದು ಬಾಟಲಿಯ ದುಂಡು ಮೈಗೆ ಸುತ್ತಿ ಅದನ್ನು ನೀರುತುಂಬಿದ (ಲೇಸಿನ ಭಾಗ ಮುಳುಗುವಂತೆ) ಪಾತ್ರೆಯಲ್ಲಿ ಇಡಬೇಕು. ಈ ನೀರಿನಲ್ಲಿ ಒಳ್ಳೆಯ ಸಾಬೂನನ್ನು ಹಾಕಿರಬೇಕು. ಬಾಟಲಿ ಹೊರಳಿ ಬೀಳುತ್ತಿದ್ದರೆ ಅದರ ಒಳಗೆ ಉಸುಕು ತುಂಬಿ ಇಡಬೇಕು. ಬಳಿಕ ಒಲೆಯ ಮೇಲಿಟ್ಟು ಈ ನೀರನ್ನು ಕುದಿಸಬೇಕು. ಹೀಗೆ ಕುದಿಸುವಾಗ ಲೇಸಿನ ಸುತ್ತು ಒಂದು ತುಂಡು ಬಿಳಿಯ ಬಟ್ಟೆಯನ್ನೂ ಸುತ್ತಿರಬೇಕು.

ನೀರು ಕುದಿಯತೊಡಗಿತೆಂದರೆ ಲೇಸಿನ ಕೊಳೆ ಕ್ರಮೇಣ ಬಿಡತೊಡಗುವದು. ನೀರು ಕೊಳೆಯಾದಂತೆ ಮತ್ತೆ ಬೇರೆ ನೀರನ್ನೂ ಹಾಕಿ ಕುದಿಸ

ಬಹುದು. ಹೀಗೆ ಒಂದೆರಡು ಸಲ ಕುದಿಸಿದ ಮೇಲೆ ಆ ನೀರನ್ನು ಚೆಲ್ಲಿ ಬಿಟ್ಟು, ಆ ಪಾತ್ರೆಯಲ್ಲಿ ಸ್ವಚ್ಛವಾದ ತಣ್ಣೀರು ಹಾಕಿ ಲೇಸನ್ನು ತೊಳೆಯು ಬೇಕು. ಬಳಿಕ ಬಾಟಲಿಯನ್ನು ಹೊರತೆಗೆದು, ಲೇಸನ್ನು ಬಿಚ್ಚಿ, ಹಾಗೇ ಒಣಗಿಸಬೇಕು.

ಲೇಸು ರೇಶಿಮೆಯದಾಗಿದ್ದರೆ, ಅಥವಾ ಸ್ವಲ್ಪ ನಯವಾಗಿದ್ದರೆ ಅದಕ್ಕೆ ಇನ್ನೂ ಸ್ವಲ್ಪ ಉಪಚಾರ ಮಾಡಬೇಕಾಗುವದು. ಮೊದಲು ಅದನ್ನು ಆಲಿವ್ಹ ಎಣ್ಣೆಯಲ್ಲಿ ತೋಯಿಸಿ ಬಳಿಕ ಮೇಲಿನಂತೆ ಅದನ್ನು ತೊಳೆಯಬೇಕು. ನಯವಾದ ಲೇಸಿಗೆ ಅಥವಾ ಬಟ್ಟೆಗೆ ಕೊಂಚ ಕಪ್ಪಿನ ಛಾಯೆಯೇ ಇರುತ್ತದೆ.

ಯಾವದೇ ಬೆಲೆಯುಳ್ಳ ಬಟ್ಟೆಯಾಗಲಿ, ಅಥವಾ ಲೇಸಾಗಲಿ, ತೊಳೆದ ಬಳಿಕ ಹೊಸದರಂತೆ ಕಾಣಿಸಬೇಕಾದರೆ ಬರೀ ನೀರಿನಲ್ಲಿ ತೊಳೆದರೆ ಸಾಕಾಗದು. ಅದನ್ನು ಸ್ಟಾರ್ಚವಾಡಿ ಇಸ್ತ್ರೀ ಮಾಡಬೇಕಾಗುತ್ತದೆ. ಇವುಗಳನ್ನು ಸಾದಾ ಬಟ್ಟೆಗೆ ಮಾಡಿದಂತೆ ಮಾಡಲು ಬರುವದಿಲ್ಲ. ಸಾಧಾರಣವಾಗಿ ಸ್ಟಾರ್ಚ ಮಾಡಲು ಅಕ್ಕಿಯ ಅಥವಾ ಗೋದಿಯ ಪಿಷ್ಟದಿಂದ ತಯಾರಿಸಿದ ಸರಿಯನ್ನು ಉಪಯೋಗಿಸುತ್ತೇವೆ. ಆದರೆ ನಯವಾದ ಬಟ್ಟೆಗೆ ಹೀಗೆ ಸ್ಟಾರ್ಚಮಾಡಿದರೆ ತೀರ ಬಿರುಸಾಗಿ ಬಿಡುತ್ತದೆ. ಅದಕ್ಕಾಗಿ ಅರ್ಗಂಡಿಯ ಒಂದು ತುಂಡನ್ನು ನೀರಿನಲ್ಲದ್ದಿ (ನೀರಿನಲ್ಲಿ ಹಿಂಡಿ ತೆಗೆದು) ಲೇಸನ್ನು ಬಿಳಿಯ ಬಟ್ಟೆಯ ಮೇಲೆ ಸರಿಯಾದ ಭಾಗವನ್ನು ಕೆಳಗೆ ಮಾಡಿ ಹಾಸಿ ಹಿಂಭಾಗವನ್ನು ಆ ತುಂಡಿನಿಂದ ಆರ್ದ್ರಗೊಳಿಸಬೇಕು. ಬಳಿಕ ಇಸ್ತ್ರೀಯಿಂದ (ಬೆಚ್ಚಗಿನ) ಎಲ್ಲ ಭಾಗವನ್ನೂ ಇಸ್ತ್ರೀ ಮಾಡಬೇಕು.

ಅಥವಾ ಗೋದಿಯ ಪಿಷ್ಟದ ತಿಳಿಯಾದ ಸರಿಯಿಂದ ಮಾಡಿದರೂ ಸರಿ; ಉಪಯೋಗಿಸತಕ್ಕ ಗೋದಿಯ ಪಿಷ್ಟವನ್ನು ಎರಡು ಭಾಗವನ್ನಾಗಿ ಮಾಡಿಕೊಂಡು, ಎರಡನ್ನೂ ಸ್ವಚ್ಛವಾದ ತಣ್ಣೀರಿನಲ್ಲಿ ತೋಯಿಸಬೇಕು. ಬಳಿಕ ಒಂದನ್ನು ಕುದಿಯುವ ನೀರನ್ನು ಸುರುವಿ ಬಿಸಿಮಾಡಬೇಕು. ಪಿಷ್ಟವು ಸರಿಯಾಗಿ ಹೊಂದಿಕೊಳ್ಳುವಂತೆ, ಮೇಲಿನ ಉಗಿ ಮಾಯವಾಗುವವರೆಗೆ ಅದನ್ನು ಕೈಯ್ಯಾಡಿಸಬೇಕು. ಬಳಿಕ ಎರಡೂ ಭಾಗಗಳನ್ನು ಕೂಡಿಸಿ ಹಾಲಿನಷ್ಟು ತಿಳಿಯಾಗುವವರೆಗೆ ಅದನ್ನು ಕೈಯ್ಯಾಡಿಸಬೇಕು. ಅಥವಾ ಹಾಲಿನಷ್ಟು ತಿಳಿಯಾಗುವವರೆಗೆ ನೀರನ್ನು ಕೂಡಿಸಬೇಕು. ಇದರಲ್ಲಿ ಒಂದೆರಡು

ಹನಿ ಕಾಫಿಯ ನೀರನ್ನು ಕೂಡಿಸಿದರೆ ಬಟ್ಟೆಗೆ ಒಂದು ಬಗೆಯ ಕಂದೀ ಹೊಳಪು ಬರುವದು; ಚಹವನ್ನು ಕೂಡಿಸಿದರೆ ಹಸಿರುಮೂಡಿಯ ಛಾಯೆ ಬರುವದು.

ಲೇಸನ್ನು ಸ್ಟಾರ್ಚ ಮಾಡಿದ ಬಳಿಕ, ಅದರ ಒಂದು ತುದಿಯನ್ನು ಎಡಗೈಯ್ಯಲ್ಲಿ ಹಿಡಿದು ಬಲಗೈಯ್ಯಿಂದ ಅಲ್ಲಲ್ಲಿ ಬಿದ್ದಿದ್ದ ಮಡಿಕೆಗಳನ್ನು, ಹೊರಳಿಕೊಂಡ ಭಾಗಗಳನ್ನೂ ಸರಿಪಡಿಸುತ್ತ ಹೋಗಬೇಕು. ಸರಿಪಡಿಸಿದ ಬಳಿಕ; ಟೇಬಲ್ಲಿನ ಮೇಲೆ ಶುಭ್ರವಾದ ಬಟ್ಟೆಯನ್ನು ಹಾಸಿ, ಅದರ ಮೇಲೆ ಲೇಸನ್ನು ಅತ್ತಿತ್ತ ಮಡಿಕೆಯಾಗದಂತೆ ಹಾಸಿಟ್ಟುಕೊಂಡು ಅಷ್ಟಷ್ಟೇ ಭಾಗವನ್ನು ಇಸ್ತ್ರೀ ಮಾಡಬೇಕು. ಎಡದಿಂದ ಬಲಕ್ಕೆ ಇಸ್ತ್ರೀಮಾಡಿ ಮತ್ತೊಮ್ಮೆ ಬಲದಿಂದ ಎಡಕ್ಕೆ ಮಾಡಬೇಕು. ಇದರಿಂದ ಸ್ಟಾರ್ಚ ಎಲ್ಲೆಡೆಗೂ ಸರಿಯಾಗಿರುವದು.

ಲೇಸು ತೀರ ನಯವಾಗಿದ್ದರೆ, ಹೀಗೆ ಟೇಬಲ್ಲಿನ ಮೇಲೆ ಹಾಸಿ ಇಸ್ತ್ರಿ ಮಾಡುವದರಿಂದ ಅಲ್ಲಲ್ಲಿ ಮುದ್ದೆಯಾಗುತ್ತಿದ್ದರೆ, ಅದನ್ನು ಬೇರೊಂದು ಬಗೆಯಿಂದ ಇಸ್ತ್ರೀ ಮಾಡಬೇಕಾಗುತ್ತದೆ. ಕಟ್ಟಿಗೆಯ ಅಗಲವಾದ ಪೊಳ್ಳು ಕೊಳವೆಯನ್ನು ಮೊಣಕಾಲಿಗೆ ಹಾಕಿಕೊಂಡು, ಆ ಕೊಳವೆಯ ಸುತ್ತು ಒಂದು ಬಿಳೀ ಬಟ್ಟೆಯನ್ನು ಸುತ್ತಿ, ಬಳಿಕ ಇಸ್ತ್ರೀ ಮಾಡಬೇಕಾದ ಲೇಸನ್ನು ಆ ಬಟ್ಟೆಯ ಸುತ್ತು ಗುಂಡು ಸೂಜಿಗಳಿಂದ ಗಟ್ಟಿಯಾಗಿ ಕೂಡಿಸಬೇಕು. ಆಮೇಲೆ ಆ ಕೊಳವೆಯನ್ನು ಸ್ವಲ್ಪ ಸ್ವಲ್ಪವಾಗಿ ಹೊರಳಿಸಿ ಎಲ್ಲ ಭಾಗಗಳಲ್ಲೂ ಇಸ್ತ್ರೀ ಮಾಡಬೇಕು.

ಲೇಸನ್ನು ತೊಳೆಯುವದು, ಸ್ಟಾರ್ಚ ಮಾಡುವದು, ಗುಂಡುಸೂಜಿಯಿಂದ ಗಟ್ಟಿಯಾಗಿ ಕೂಡಿಸಿ ಇಸ್ತ್ರೀ ಮಾಡುವದು ಇವೆಲ್ಲ ಕಾರ್ಯಗಳನ್ನು ಒಂದಾದಕೂಡಲೇ ಒಂದರಂತೆ ಮಾಡಬೇಕು. ಅಲ್ಲದೆ, ಸ್ಟಾರ್ಚಮಾಡಿದ ಎಂಟು ದಿನಕ್ಕೆ ಇಸ್ತ್ರಿ ಮಾಡಹೋದರೆ, ಆ ಸ್ಟಾರ್ಚದ ಪರಿಣಾಮವೇ ಉಳಿದಿರುವದಿಲ್ಲ. ಅದಕ್ಕಾಗಿ ಸ್ವಲ್ಪ ವೇಳೆ ಹೆಚ್ಚಾಗಿದ್ದಾಗಲೇ ಈ ಕಾರ್ಯವನ್ನು ಮಾಡಬೇಕು.

**ಬಣ್ಣದ ದಾರದಿಂದ ಹಾಕಿದ ಕಸೂತಿಯ ಬಟ್ಟೆಯನ್ನು ತೊಳೆಯುವ ವಿಧಾನ:** ಇಂತಹ ಕಸೂತಿಯ ಬಟ್ಟೆಯನ್ನು ತೊಳೆಯುವಾಗ ಬಿಸಿನೀರನ್ನೂ ಸಾಬೂನನ್ನೂ ಉಪಯೋಗಿಸಬಹುದಾದರೂ ಒಗೆ

ಯುವ ಸೋಡಾ ಮಾತ್ರ ಉಪಯೋಗಿಸುವಂತಿಲ್ಲ. ಕುದಿಯುವ ನೀರಿನಲ್ಲಿ ಒಳ್ಳೆಯ ಸಾಬೂನನ್ನೂ ಹಾಕಿ ಬುರುಗುಮಾಡಿ, ಬಳಿಕ ನೀರನ್ನು ಬೆಚ್ಚಗೆ ಮಾಡಲು ಅದಕ್ಕೆ ಸ್ವಲ್ಪ ತಣ್ಣೀರನ್ನು ಕೂಡಿಸಿ, ಬಳಿಕ ಕಸೂತಿಯ ಬಟ್ಟೆಯನ್ನು ಅದರಲ್ಲಿ ಸ್ವಚ್ಛವಾಗಿ ತಿಕ್ಕಿ ತೊಳೆಯಬೇಕು. ಬಳಿಕ ಸ್ವಚ್ಛವಾದ ತಣ್ಣೀರಿನಲ್ಲಿ ಒಂದೆರಡು ಸಲ ಅದನ್ನು ಹಿಂದಿ ತೆಗೆದು ಸಾಬೂನಿನ ಬುರುಗನ್ನು ಕಳೆದು ಸ್ವಚ್ಛಮಾಡಬೇಕು. ಯಾವದೇ ಕಾರಣದಿಂದ ಕಸೂತಿಯ ಬಣ್ಣ ಸ್ವಲ್ಪ ಮಾಸಿದ್ದರೆ, ಹೊಳಪು ಕಡಿಮೆಯಾಗಿದ್ದರೆ, ನೀರಿನಲ್ಲಿ ಒಂದು ಚಮಚೆ ಲಿಂಬೆಯ ರಸವನ್ನು ಹಾಕಿ ಹಿಂಡಬೇಕು ಇಲ್ಲವೆ ಒಂದರ್ಧ ಗ್ಲಾಸು ಬಿಳೀ ವಿನೆಗಾರ (ನೀರಿನಲ್ಲಿ) ಹಾಕಿ ಹಿಂಡಬೇಕು. ಬಳಿಕ ಬಟ್ಟೆಯನ್ನು ಒಣಗಿಸಿ ಇಸ್ತ್ರೀ ಮಾಡಬೇಕು. ಇದರಿಂದ ಕಸೂತಿಯ ಹೊಳಪೂ, ನಯವೂ ಹಾಗೇ ಉಳಿಯುವವು.

೨

ಮಾಸಿದ ಹೆಣಿಕೆ ಕಸೂತಿಯ ಬಟ್ಟೆಗಳನ್ನು, ಒಗೆಯುವ ಸೋಡಾ ಬಹಳವಾಗಿಲ್ಲದ ಸಾಬೂನಿನ ಬುರುಗಿನಲ್ಲಿ ಎದ್ದಿ ತೊಳೆಯಬಹುದು. ರೇಶಿಮೆಯ ಹೊಳಪು ಪುನಃ ಬರುವದಕ್ಕಾಗಿ ಒಂದರ್ಧ ಲಿಂಬೆಹಣ್ಣಿನ ರಸ ಕೂಡಿದ ನೀರಿನಲ್ಲಿ ಅಥವಾ ವಿನೆಗಾರ ಕೂಡಿದ ನೀರಿನಲ್ಲಿ ತೊಳೆಯಬಹುದು. ಆದರೆ ಹೆಣಿಕೆ ಕಸೂತಿಯ ಬಟ್ಟೆಗಳ ಮೇಲೆ ಇನ್ನಾವುದಾದರೂ ಕಲೆ ಕೂತಿದ್ದರೆ ಅದನ್ನು ತೆಗೆಯುವ ಬಗೆ ಹೇಗೆ ? ನೂಲಿನ ಬಟ್ಟೆಗೆ ಉಪಯೋಗಿಸುವ ಉಪಾಯಗಳನ್ನೇ ಉಪಯೋಗಿಸಿದರೆ, ಕಸೂತಿಗೆ ಅಪಾಯವಾಗಬಹುದು. 'ಕಲೆ' ಸ್ವಲ್ಪ ಭಾಗದಲ್ಲಿ ಮಾತ್ರ ಬಿದ್ದಿದ್ದು ಅಷ್ಟನ್ನೇ ತೊಳೆಯಬೇಕಾಗಿದ್ದರೆ, ನೂಲಿನ ಬಟ್ಟೆಗೆ ಉಪಯೋಗಿಸುವ ಉಪಾಯವನ್ನೇ ಕೈಕೊಂಡು ಅದನ್ನು ತೊಳೆದುಬಿಡಹುದು. ಬಟ್ಟೆ ರೇಶಿಮೆಯದಾಗಿದ್ದರೆ ?

ಬಟ್ಟೆಯ ಮೇಲೆ ಹಣ್ಣಿನ ರಸ, ಕಬ್ಬಿಣದ ಜಂಗು, ಮಸಿ, ಇತ್ಯಾದಿಗಳ ಕಲೆಗಳೇ ಬೀಳುವ ಸಂಭವ ಹೆಚ್ಚು. ಈ ಕಲೆಗಳನ್ನು ತೊಳೆಯಲು ಮೊದ

ಲನೆಯ ಉಪಾಯವೆಂದರೆ ಕಟ್ಟಿಗೆ ಅಥವಾ ಮಣ್ಣಿನ ಪಾತ್ರೆಯೊಂದರಲ್ಲಿ (ಕಬ್ಬಿಣದ ಪಾತ್ರೆಯನ್ನು ಮಾತ್ರ ಉಪಯೋಗಿಸ ಕೂಡದು) ತಣ್ಣೀರಲ್ಲಿ ಬೆರಸಿದ ಬ್ಲೀಚಿಂಗ ಪಾವಡರನ್ನು ಸುರುವಿ, ಅಷ್ಟೇ ಪ್ರಮಾಣದಲ್ಲಿ ಕುದಿಯುವ ನೀರನ್ನು ಅದರಲ್ಲಿ ಬೆರಸಬೇಕು. ಬಳಿಕ ಬಿಸಿನೀರಿನಲ್ಲಿ ಮೊದಲೇ ತೊಳೆದ ಕಸೂತಿಯ ಬಟ್ಟೆಯನ್ನು ಈ ಮಿಶ್ರಣದಲ್ಲಿ ಅರ್ಧತಾಸಿನ ವರೆಗೆ ನೆನೆಯಲು ಬಿಡಬೇಕು. ಆಗಾಗ್ಗೆ ಬಟ್ಟೆಯನ್ನು ಕೈಯಿಂದ ತಿಕ್ಕುತ್ತಿರಬೇಕು. ಅರ್ಧ ತಾಸು ನೆನೆದ ಬಳಿಕ, ಮತ್ತೆ ಅಷ್ಟು ಬಿಸಿಯಲ್ಲದ ಸಾಬೂನಿನ ಬುರುಗಿನಲ್ಲಿ ಎದ್ದಿ ತೊಳೆಯಬೇಕು. ಇದರಿಂದ ಕಲೆಗಳೆಲ್ಲ ಮಾಯವಾಗಿ ಬಟ್ಟೆ ಸ್ವಚ್ಛವಾಗುವದು.

ಮೇಲಿನ ಉಪಾಯದಿಂದ ಎಲ್ಲ ಕಲೆಗಳನ್ನೂ ತೊಳೆಯುವದು ಸಾಧ್ಯವಾಗದಿದ್ದರೆ, ಹೀಗೂ ತೊಳೆಯಬಹುದು; ಆದರೆ ಕಸೂತಿಗೆ ಉಪಯೋಗಿಸಿದ ರೇಶಿಮೆ ಮಾತ್ರ ಡಿ. ಎಮ್. ಸಿ ರೇಶಿಮೆಯಾಗಿರಬೇಕು. ಒಂದು ತಂಬಿಗೆ ನೀರಿನಲ್ಲಿ ಸುಮಾರು ಒಂದರ್ಧ ಔಂಸು ಸಾಬೂನನ್ನು (ಅದರಲ್ಲಿ ಒಗೆಯುವ ಸೋಡಾ ಹೆಚ್ಚಾಗಿ ಇರಕೂಡದು) ಕರಗಿಸಿ ನೊರೆಯನ್ನು ಮಾಡಬೇಕು. ಬಳಿಕ ಕಸೂತಿಯ ಬಟ್ಟೆಯನ್ನು ಹತ್ತು ನಿಮಿಷಗಳಿಂದ ಒಂದು ತಾಸಿನ ವರೆಗೂ ಇದರಲ್ಲಿ ಕುದಿಸಬಹುದು. ಕುದಿಸುವ ವೇಳೆ, ತೊಳೆಯತಕ್ಕ ಕಲೆಗಳನ್ನು ಅವಲಂಬಿಸಿದೆ. ಕುದಿಸಿದ ಬಳಿಕ ತಣ್ಣೀರಲ್ಲಾಗಲಿ ಅಥವಾ ಲಿಂಬೆಹಣ್ಣಿನ ರಸ ಕೂಡಿದ ನೀರಿನಲ್ಲಾಗಲಿ ತೊಳೆಯಬೇಕು. ಅಂದರೆ ಮತ್ತೆ ರೇಶಿಮೆಗೆ ಮೆರುಗುಬರುವದು.

ಕಸೂತಿಯ ಬಟ್ಟೆಗಳನ್ನು ಅಥವಾ ರೇಶಿಮೆಯ ಬಟ್ಟೆಗಳನ್ನು ತೊಳೆಯಲು **ಕ್ಲೋರಿನ್** ಉಪಯೋಗಿಸುವದು ಕೊಂಚ ಅಪಾಯಕರ. ಆದರೆ ಯಾವ ಉಪಾಯದಿಂದಲೂ ಕಲೆ ಹೋಗದಿದ್ದ ಪಕ್ಷದಲ್ಲಿ ಕ್ಲೋರಿನ್ ಉಪಯೋಗಿಸಬಹುದು. ಡಿ. ಎಮ. ಸಿ. ರೇಶಿಮೆಯಾಗಿದ್ದರೆ ಇದರಿಂದಲೂ ಕಸೂತಿಗೆ ವಿಶೇಷ ಅಪಾಯವಿಲ್ಲ. ಇದನ್ನು ತಯಾರಿಸಲು ಮೊದಲು ಒಂದು ತಂಬಿಗೆ ನೀರಿಗೆ ಒಂದು ದೊಡ್ಡ ಚಮಚೆ ಕ್ಲೋರಿನ್ ("ಯೋಡಿ ಜಾವೆಲ್") ಹಾಕಿ ಮಿಶ್ರಣವನ್ನು ಸಿದ್ಧಪಡಿಸಿಕೊಳ್ಳಬೇಕು. ಬಳಿಕ ಕಸೂತಿಯ ಬಟ್ಟೆಯನ್ನು ನೀರಿನಲ್ಲೆದ್ದಿ, ನೀರನ್ನೆಲ್ಲ ಹಿಂಡಿ ತೆಗೆದು, ಈ ಮಿಶ್ರಣದಲ್ಲಿ ತೋಯಿಸ

ಬೇಕು. ಸುಮಾರು ಐದು ನಿಮಿಷಗಳ ತರುವಾಯ ಆ ಬಟ್ಟೆಯನ್ನು ಹೊರ ದೆಗೆದು ತಣ್ಣೀರಿನಲ್ಲಿ ಅಥವಾ ಲಿಂಬೆರಸ ಕೂಡಿದ ನೀರಿನಲ್ಲಿ ತೊಳೆಯಬೇಕು. ನೀರನ್ನು ಹಿಂಡದೆ ಕಸೂತಿಯ ಬಟ್ಟೆಯನ್ನು ಬಹಳ ಹೊತ್ತಿನ ವರೆಗೆ ನೆನೆಯಲು ಮಾತ್ರ ಬಿಡಬಾರದು.

**ಪಕ್ಕಾ ರೇಶಿಮೆಯಿಂದ ಹೆಣೆದ ಕಸೂತಿಯ ಬಟ್ಟೆಗಳನ್ನು ತೊಳೆಯುವದು:**— ಒಗೆಯುವ ಸೋಡಾ ಸ್ವಲ್ಪವೂ ಇರದಂಥ ಸಾಬೂನನ್ನು ಇಲ್ಲಿ ಉಪಯೋಗಿಸುವದೇ ಹೆಚ್ಚು ಒಳಿತು. ಆದಷ್ಟು ಬಿಳಿಯ ಸಾಬೂನನ್ನು ಉಪಯೋಗಿಸಬೇಕು.

ಮೊದಲು ಕುದಿಯುವ ನೀರಿನಲ್ಲಿ ಬಿಳಿಯ ಸಾಬೂನನ್ನು ಕರಗಿಸಿ ಬುರುಗು ಮಾಡಿ, ಬಳಿಕ ಅದರಲ್ಲಿ ಸ್ವಲ್ಪ ತಣ್ಣೀರನ್ನು ಸುರುವಿ ಮಿಶ್ರಣವನ್ನು ಬೆಚ್ಚಗೆ ಮಾಡಬೇಕು. ಕಸೂತಿಯ ಬಟ್ಟೆಯನ್ನು ಈ ಮಿಶ್ರಣದಲ್ಲಿದ್ದಿ ಕೈಯಿಂದ ತಿಕ್ಕಿ ತಿಕ್ಕಿ ತೊಳೆದು, ಬಳಿಕ ತಣ್ಣೀರಿನಲ್ಲಿ ನಾಲ್ಕಾರು ಸಲ ನೀರು ಬದಲಿಸಿ ತೊಳೆದು, ನೀರು ತೆಗೆದುಬಿಡಬೇಕು. ಬಟ್ಟೆಯನ್ನು ಮುರಿಗೆ ಹೊಡೆದು ಹಿಂಡಬಾರದು. ಬಟ್ಟೆಯನ್ನು ಗಾಳಿಗೆ ಒಡ್ಡಿ ಆದಷ್ಟು ಬೇಗ ಒಣಗಿಸಿಬಿಡಬೇಕು. ಅಥವಾ ಟೇಬಲ್ ಮೇಲೆ ತಿರುವಿ ಹಾಕಿ ಬೆಚ್ಚಗಾದ ಇಸ್ತ್ರಿಯಿಂದ ಆಡಿಸಬೇಕು; ಇಸ್ತ್ರೀ ಹೆಚ್ಚು ಕಾಯ್ದಿದ್ದರೆ ರೇಶಿಮೆಯ ಬಣ್ಣಕ್ಕೆ ಅಪಾಯವಾಗುವ ಸಂಭವವಿದೆ.

ಪೂರ್ಣ ರೇಶಿಮೆಯ ಬಟ್ಟೆಗೆ ಹೆಚ್ಚು ಒಗೆಯುವದಾಗಲಿ, ಉರುಟಾದ ಉಪಾಯಗಳನ್ನು ಉಪಯೋಗಿಸುವದಾಗಲಿ ಬೇಕಾಗಿಲ್ಲ. ನಯವಾದ ಬಟ್ಟೆಯನ್ನು ನಯವಾಗಿಯೇ ಒಗೆಯಬೇಕು.

